ನೆಮ್ಮದಿಯ ನಾಳೆ ನಮ್ಮದು

# ಹೊಸತು

ಸೆಪ್ಟೆಂಬರ್ ೨೦೧೮

ಬೆಲೆ : ₹ ೨೫

ISSN 2319 -7307














ಕೊಡಗು – ಕೇರಳ ಪ್ರವಾಹ ಸಂತ್ರಸ್ತರ ಜೊತೆಗಿರೋಣ




## ಕ್ರಿಯಾ-ನವಕರ್ನಾಟಕ ಜಂಟಿ ಪ್ರಕಟಣೆ

# ಮಾರ್ಕ್ಸ್ 200 – ಕ್ಯಾಪಿಟಲ್ 150

## ಮಾಲಿಕೆಯ ಪುಸ್ತಕಗಳ ಬಿಡುಗಡೆ ಮತ್ತು ವಿಚಾರ ಸಂಕಿರಣ




## ಕಲಬುರಗಿ, ಧಾರವಾಡ ಮತ್ತು ಮಂಗಳೂರಿನಲ್ಲಿ















22–07–2018ರಂದು ಕಲಬುರಗಿಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಶ್ರೀ ಜಿ. ವಿ. ಶ್ರೀರಾಮರೆಡ್ಡಿ ಮತ್ತು ಶ್ರೀ ಪಿ. ವಿ. ಲೋಕೇಶ್ ಪುಸ್ತಕಗಳ ಬಿಡುಗಡೆ ಮಾಡಿದರು. ಶ್ರೀ ಬಿ. ಪೀರ್ ಬಾಷ ಮತ್ತು ಪ್ರೊ॥ ಆರ್. ಕೆ. ಹುಡಗಿ ಕೃತಿ ಪರಿಚಯ ಮಾಡಿದರು. ಶ್ರೀ ವಸಂತರಾಜ ಎನ್. ಕೆ., ಶ್ರೀ ಸೂರ್ಯಕಾಂತ ಸೊನ್ನದ ಮುಂತಾದವರು ವೇದಿಕೆಯಲ್ಲಿದ್ದರು. "ಭಾರತದ ಕೃಷಿ ಬಿಕ್ಕಟ್ಟು ಮತ್ತು ಮಾರ್ಕ್ಸ್‌ವಾದಿ ದೃಷ್ಟಿಕೋನ" ಕುರಿತ ವಿಚಾರ ಸಂಕಿರಣವನ್ನು ಪ್ರೊ॥ ವೆಂಕಟೇಶ ಆತ್ರೇಯ ನಡೆಸಿಕೊಟ್ಟರು. ಶ್ರೀ ಮಾರುತಿ ಮಾನ್ಪಡೆ ಅಧ್ಯಕ್ಷತೆ ವಹಿಸಿದರು.



29–07–2018ರಂದು ಧಾರವಾಡದಲ್ಲಿ ನಡೆದ ಕಾರ್ಯಕ್ರಮದಲ್ಲಿ ಡಾ॥ ಜಿ. ರಾಮಕೃಷ್ಣ ಪುಸ್ತಕ ಬಿಡುಗಡೆ ಮಾಡಿದರು. ಡಾ॥ ಜಗದೀಶ ಕೊಪ್ಪ ಮತ್ತು ಡಾ॥ ಸದಾಶಿವ ಮರ್ಜಿ ಕೃತಿ ಪರಿಚಯ ಮಾಡಿದರು. ಡಾ॥ ಸಿದ್ದನಗೌಡ ಪಾಟೀಲ, ಶ್ರೀ ಬಿ. ಎನ್. ಪೂಜಾರಿ ವೇದಿಕೆಯಲ್ಲಿದ್ದರು. "ಕನ್ನಡ ಸಾಹಿತ್ಯ ಮತ್ತು ಮಾರ್ಕ್ಸ್‌ವಾದ" ಕುರಿತ ವಿಚಾರ ಸಂಕಿರಣವನ್ನು ಡಾ॥ ರಹಮತ್ ತರೀಕೆರೆ, ಡಾ॥ ವಿನಯ ಒಕ್ಕುಂದ, ಡಾ॥ ಅಶೋಕ ಶೆಟ್ಟರ್ ಮತ್ತು ಶ್ರೀ ಶಂಕರ ಹಲಗತ್ತಿ ನಡೆಸಿಕೊಟ್ಟರು.



19–08–2018ರಂದು ಮಂಗಳೂರಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಶ್ರೀ ಜಿ. ವಿ. ಶ್ರೀರಾಮರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಶ್ರೀ ಅದಮಾರು ಶ್ರೀಪತಿ ಆಚಾರ್ಯ ಪುಸ್ತಕ ಬಿಡುಗಡೆ ಮಾಡಿದರು. ಶ್ರೀ ವಸಂತರಾಜ ಎನ್. ಕೆ. ಅವರಿಂದ ಪ್ರಾಸ್ತಾವಿಕ ನುಡಿ. "ಮಾರ್ಕ್ಸ್ ಎಂದಿಗೂ ಪ್ರಸ್ತುತ" ಕುರಿತ ವಿಚಾರ ಸಂಕಿರಣವನ್ನು ಶ್ರೀ ಜಿ. ರಾಜಶೇಖರ್, ಪ್ರೊ॥ ರಾಜೇಂದ್ರ ಉಡುಪ, ಪ್ರೊ॥ ಜಿ. ಭಾಸ್ಕರ ಮಯ್ಯ, ಪ್ರೊ॥ ಕೇಶವ ಶರ್ಮ ನಡೆಸಿಕೊಟ್ಟರು. ಶ್ರೀ ಪಿ. ವಿ. ಲೋಕೇಶ್ ವಿಚಾರ ಸಂಕಿರಣದ ಅಧ್ಯಕ್ಷತೆ ವಹಿಸಿದರು.

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು



**ಚಿತ್ರಗಳು :** ಕಮಲಂ ಅರಸು, ಸುನಿಲ್ ಮಿಶ್ರಾ, ವಿ. ಗೋಪಾಲ್, ನಾಮದೇವ ಕಾಗದಗಾರ, ಸುನೀಲ ಪಾಟೀಲ, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ

**ಮುಖಪುಟ :** ಕೊಡಗು – ಕೇರಳದ ಜಲಪ್ರವಾಹದ ಚಿತ್ರಗಳು.

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ




ವಿಧಾನಸಭಾ ಚುನಾವಣಾ ಸೋಲಿನಿಂದ ಕಾಂಗ್ರೆಸ್ ಇನ್ನೂ ಪಾಠ ಕಲಿತಂತಿಲ್ಲ. ಹಳೆಯ ಜಾಡಿನಲ್ಲೇ ಮುಂದುವರಿಯುತ್ತಿದೆ. ೨೦೧೯ರ ಪಾರ್ಲಿಮೆಂಟರಿ ಚುನಾವಣೆಗಳು ದೂರವೇನಿಲ್ಲ. ಸಂದರ್ಭ ಬಂದಾಗ ಕೈಜೋಡಿಸಿದರೆ ಪ್ರತಿ ಪಕ್ಷಗಳು ಭಾಜಪವನ್ನು ಎದುರಿಸಲಾಗುವುದಿಲ್ಲ. ಆಡಳಿತ ನಡೆಸುತ್ತಿರುವ ಪ್ರಧಾನಿ ಮೋದಿ ಮತ್ತು ಭಾಜಪದ ಅಧ್ಯಕ್ಷ ಅಮಿತ್ ಷಾ ತಂತ್ರಗಾರಿಕೆ ಫಲಕಾರಿಯಾಗುತ್ತಿದೆ. ಕನಿಷ್ಠ ಕಾರ್ಯಕ್ರಮವೊಂದನ್ನು ರೂಪಿಸಿ, ಜನಪರ ನೀತಿ ಅನುಸರಿಸುವ ಗುರಿಯಿಂದ ಪ್ರತಿಪಕ್ಷಗಳನ್ನು ಒಂದುಗೂಡಿಸಬೇಕು. ಅದಿಲ್ಲದೆ ಬರೀ ಅಬ್ಬರದಿಂದ ಏನೂ ಪ್ರಯೋಜನವಾಗದು. ರಾಜ್ಯಸಭೆಯ ಉಪಾಧ್ಯಕ್ಷ ಸ್ಥಾನಕ್ಕೆ ಈಚೆಗೆ ನಡೆದ ಚುನಾವಣೆಗಳು ಅದಕ್ಕೆ ಒಂದು ಉದಾಹರಣೆ. ಯಾವತ್ತೂ ರಾಜ್ಯಸಭೆಯ ಉಪಾಧ್ಯಕ್ಷ ಸ್ಥಾನ ಅಂಥ ಮುಖ್ಯತ್ವವನ್ನು ಪಡೆದುಕೊಂಡಿರಲಿಲ್ಲ. ಚುನಾವಣೆಯಲ್ಲಿ ಜಯಾಪಜಯ ಇದ್ದದ್ದೆ. ಆದರೆ ರಾಜ್ಯಸಭೆಯ ಉಪಾಧ್ಯಕ್ಷರ ಸ್ಥಾನವನ್ನು ಪ್ರತಿಷ್ಠೆಯ ಕಣವಾಗಿಸಿದ್ದು ಕಾಂಗ್ರೆಸ್ ಹಾಗೂ ಪ್ರತಿ ಪಕ್ಷಗಳೇ. ಎನ್‌ಡಿಎ ತನ್ನ ಅಭ್ಯರ್ಥಿ ಜೆಡಿಯುನ ಹರಿವಂಶ ಸಿಂಗ್‌ರನ್ನು ಉಪಾಧ್ಯಕ್ಷ ಸ್ಥಾನಕ್ಕೆ ನಿಲ್ಲಿಸಿ ಜಯಗಳಿಸಿತು. ಕಡೆ ನಿಮಿಷದಲ್ಲಿ ನವೀನ್ ಪಟ್ನಾಯಕ್ ಹಾಗೂ ಇತರರ ಜೊತೆ ಹೊಂದಾಣಿಕೆ ಮಾಡಿಕೊಂಡು ಕಾಂಗ್ರೆಸ್ ಅಭ್ಯರ್ಥಿ ಕರ್ನಾಟಕದ ಪಾರ್ಲಿಮೆಂಟ್ ಸದಸ್ಯ ಹರಿಪ್ರಸಾದ್ ಸೋಲು ಅನುಭವಿಸುವಂತೆ ಮಾಡಿತು. ರಾಜ್ಯಸಭೆಯಲ್ಲಿ ಪ್ರತಿಪಕ್ಷಗಳದ್ದೇ ಮೇಲುಗೈ, ಹಾಗಿದ್ದೂ ಸೋಲು ಅನುಭವಿಸಿತು. ಭಾಜಪ ತನ್ನ ಅಭ್ಯರ್ಥಿಯನ್ನು ಗೆಲ್ಲಿಸಲು ಹೂಡಿದ ತಂತ್ರಗಾರಿಕೆ ಯಶಸ್ವಿಯಾಯಿತು. ಪ್ರತಿಪಕ್ಷಗಳ ದೌರ್ಬಲ್ಯವನ್ನು ಹೊರಗೆಡಹಿತು. ಸೋಲಿಗೆ ಕಾರಣವೇನಾದರೂ ಆಗಿರಲಿ ಅದು ಬೇರೆಯೇ ವಿಷಯ. ಮುಂಬರುವ ಪಾರ್ಲಿಮೆಂಟರಿ ಚುನಾವಣೆಗಳನ್ನು ಎದುರಿಸಲು ಪ್ರತಿ ಪಕ್ಷಗಳು ಈಗಿನಿಂದಲೇ ಸಿದ್ಧತೆ ಪ್ರಾರಂಭಿಸಬೇಕು. ಸೀಟುಗಳ ಹಂಚಿಕೆಯಲ್ಲಿ ಕಾಂಗ್ರೆಸ್ ಪ್ರತಿಷ್ಠೆ ತೋರದೆ ಹೊಂದಾಣಿಕೆಗೆ ಪ್ರಾಶಸ್ತ್ಯ ನೀಡಬೇಕು.

* * *

ಬೇರೆ ದೇಶಗಳಿಂದ ರಕ್ಷಣಾ ಸಾಮಗ್ರಿಗಳನ್ನು ಕೊಳ್ಳುವಾಗ ನಡೆಯುವ ಅವ್ಯವಹಾರ ಯಾವತ್ತೂ ಇದ್ದದ್ದೆ. ಬೊಫೋರ್ಸ್ ಹಗರಣ ಈಗಲೂ ಪ್ರಸ್ತಾಪವಾಗುತ್ತಿದೆ. ಮಧ್ಯವರ್ತಿಗಳು ಇಲ್ಲದೆ ನೇರವಾಗಿ ಸರಕಾರಗಳೊಂದಿಗೆ ನಡೆಯುವ ವ್ಯವಹಾರ ಇದು ಹೆಸರಿಗೆ. ಇದರಲ್ಲಿ ಸೋರಿಕೆಯೇ ಜಾಸ್ತಿ. ಬೊಫೋರ್ಸ್ ಪ್ರಕರಣದಲ್ಲಿ ಕಮೀಶನ್ ನೀಡಿಕೆ ತನಿಖೆಗೆ ಸರಕಾರ ಖರ್ಚು ಮಾಡಿದ ಹಣ ಫಿರಂಗಿಗಳನ್ನು ಖರೀದಿಸಿದಷ್ಟೇ ಆಗಿರಬೇಕು. ಕಮೀಶನ್‌ಗಿಂತ ಹಲವು ಪಟ್ಟು ಹೆಚ್ಚು ಎನ್ನುವುದು ಖಚಿತ. ಭ್ರಷ್ಟಾಚಾರ ಮುಕ್ತ ಸರಕಾರ ಎಂದು ಮೋದಿ ಪದೇ ಪದೇ ಕೊಚ್ಚಿಕೊಳ್ಳುತ್ತಿರುವಾಗ ನಡೆದಿರುವ ಹಗರಣ ಫ್ರಾನ್ಸ್‌ನಿಂದ ರಫೇಲ್ ಫೈಟರ್ ವಿಮಾನಗಳ ಖರೀದಿ. ಸುಮಾರು ೩೫,೦೦೦ ಕೋಟಿ ರೂಪಾಯಿಗಳ ಹಗರಣ ಇದಾಗಿದೆ. ಮೋದಿ ಅಧಿಕಾರ ವಹಿಸಿಕೊಂಡ ನಂತರ ಫ್ರಾನ್ಸ್‌ಗೆ ಭೇಟಿ ನೀಡಿದ್ದಾಗ ೩೬ ರಫೇಲ್ ಫೈಟರ್ ವಿಮಾನಗಳನ್ನು ಖರೀದಿಸಲು ಒಪ್ಪಂದ ಮಾಡಿಕೊಂಡರು. ರಕ್ಷಣಾ ಸಚಿವರಾಗಲಿ, ರಕ್ಷಣಾ ಇಲಾಖೆಯ ಅಧಿಕಾರಿಗಳಾಗಲಿ, ವಿಮಾನ ಪಡೆಯ ಪ್ರಮುಖರಾಗಲಿ ಇದರಲ್ಲಿ ಪಾಲ್ಗೊಂಡಿರಲಿಲ್ಲ. ೨೦೧೫ರಲ್ಲಿ ಪ್ರಧಾನಿ ಮೋದಿ ಮಾಡಿಕೊಂಡ ಈ ಒಪ್ಪಂದದ ಪ್ರಕಾರ ಪ್ರತಿ ರಫೇಲ್ ಫೈಟರ್ ವಿಮಾನದ ಬೆಲೆ ೬೭೦ ಕೋಟಿ ರೂ.ಗಳಾಗುತ್ತವೆ ಪಾರ್ಲಿಮೆಂಟಿನಲ್ಲಿ ಸರಕಾರ ನೀಡಿರುವ ಹೇಳಿಕೆ ಪ್ರಕಾರ. ೨೦೧೮ರ ಮಳೆಗಾಲದ ಪಾರ್ಲಿಮೆಂಟ್ ಅಧಿವೇಶನದಲ್ಲಿ ಈ ಪ್ರಕರಣ ಭಾರಿ ಕೋಲಾಹಲಕ್ಕೆ ಕಾರಣವಾಗಿ ಒಂದು ದಿನದ ಕಲಾಪ ಹಾಳಾಯಿತು. ಫ್ರಾನ್ಸ್ ವಿಮಾನಗಳನ್ನು ೨೦೨೨ರಲ್ಲಿ ತಲುಪಿಸಲಿದೆ.

ವಾಜಪೇಯಿ ಸರಕಾರದಲ್ಲಿ ಸಚಿವರಾಗಿದ್ದ ಅರುಣ್ ಶೌರಿ, ಯಶ್ವಂತ್ ಸಿನ್ಹಾ ಹಾಗೂ ಪ್ರಸಿದ್ಧ ವಕೀಲ ಶಾಂತಿ ಭೂಷಣ್ ಪ್ರಕಾರ ರಫೇಲ್ ಹಗರಣದ ಮುಂದೆ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೨ ಸೆಪ್ಟೆಂಬರ್ ೨೦೧೮

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೫೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೧೬೧೯೧೧, ೨೨೧೬೧೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

## ಮುತ್ಸದ್ದಿ ದ್ವಯರಿಗೆ ವಿದಾಯ

ಒಂದೇ ವಾರದಲ್ಲಿ ೯೦ರ ಆಸುಪಾಸಿನ ಇಬ್ಬರು ರಾಜಕೀಯ ಪಟುಗಳು ನಮ್ಮನ್ನಗಲಿದ್ದಾರೆ: ಒಬ್ಬರು ಲೋಕಸಭೆಯ ಅಧ್ಯಕ್ಷರಾಗಿದ್ದವರು, ಇನ್ನೊಬ್ಬರು ಮೂರು ಬಾರಿ ದೇಶದ ಪ್ರಧಾನಿಯಾಗಿ ಆಯ್ಕೆಯಾಗಿ ಒಟ್ಟು ಏಳು ವರ್ಷ ಅಧಿಕಾರದಲ್ಲಿದ್ದವರು. ಚರ್ಚಾ ಕೌಶಲ್ಯದಲ್ಲಿ ಇಬ್ಬರೂ ಕಾಂತಿಯುತ ತಾರೆಗಳು, ಆದರೆ ಭಿನ್ನ ಚಿಂತನೆಗಳ ಸಿದ್ಧಾಂತಿಗಳು ಮತ್ತು ಶ್ರೇಷ್ಠ ಕಾರ್ಯಕರ್ತರು. ಕಮ್ಯುನಿಸ್ಟ್ ಚಳುವಳಿಯಲ್ಲಿ ಅಗ್ರೇಸರರಾಗಿದ್ದ ಕಾಮ್ರೇಡ್ ಸೋಮನಾಥ ಚಟರ್ಜಿಯವರು ಬಂಗಾಳದ ಬೋಲ್ಪುರ ಕ್ಷೇತ್ರದಿಂದ ಹಲವು ಬಾರಿ ಲೋಕಸಭೆಗೆ ಚುನಾಯಿತರಾಗಿದ್ದರು. ಶಾಂತಿನಿಕೇತನವು ಆ ಕ್ಷೇತ್ರದ ಪ್ರಸಿದ್ಧ ತಾವು. ಭಾರತೀಯ ಜನತಾ ಪಕ್ಷದ ಭದ್ರ ಸ್ತಂಭವಾಗಿದ್ದ ಅಟಲ್ ಬಿಹಾರಿ ವಾಜಪೇಯಿಯವರು ಬೇರೆ ಬೇರೆ ಕ್ಷೇತ್ರಗಳಿಂದ ಚುನಾಯಿಸಿಬರುತ್ತಿದ್ದಂಥವರು. ಚಟರ್ಜಿಯವರು ಕೊನೆಯವರೆಗೂ ಆರೋಗ್ಯದಿಂದಿದ್ದು ಕೆಲವೇ ದಿನಗಳ ಅಸ್ವಾಸ್ಥ್ಯದಿಂದ ಗತಿಸಿದರು. ಸುಮಾರು ಒಂಭತ್ತು ವರ್ಷಗಳ ಕಾಲ ಮಾತು ಮತ್ತು ಚಲನೆ ಕಳೆದುಕೊಂಡು ವಾಜಪೇಯಿಯವರು ಸಸ್ಯದೋಪಾದಿಯಲ್ಲಿದ್ದು ಅಸ್ತಮಿಸಿದರು. ಅವರು ನೀಡಬಹುದಾಗಿದ್ದ ಮಾರ್ಗದರ್ಶನದಿಂದ ಅವರ ಪಕ್ಷವು ಅಷ್ಟು ವರ್ಷಗಳ ಕಾಲ ವಂಚಿತವಾಯಿತು. ಚಟರ್ಜಿ ನುರಿತ ಮಾರ್ಕ್ಸ್‌ವಾದಿ ಮತ್ತು ವಾಜಪೇಯಿ ಅಘೋಷಿತ ಹಿಂದುತ್ವವಾದಿ. ಈ ಎರಡು ರತ್ನಗಳನ್ನು ಕಳೆದುಕೊಂಡ ದೇಶವು ಅಷ್ಟೇ ಅನನ್ಯವಾದ ಚೈತನ್ಯಶೀಲರನ್ನು ಮತ್ತೆಂದು ಪಡೆಯುವುದೋ ತಿಳಿಯದು. ಇಬ್ಬರಿಗೂ 'ಹೊಸತು' ವಿನಯದಿಂದ ತಲೆಬಾಗುತ್ತದೆ ಮತ್ತು ದುಃಖದಿಂದ ಅವರನ್ನು ಬೀಳ್ಕೊಡುತ್ತದೆ.

ತಮ್ಮ ಪಕ್ಷವೇ ತಮ್ಮ ಉಸಿರು ಎಂಬಂತೆ ನಡೆದುಕೊಂಡ ಸೋಮನಾಥ ಚಟರ್ಜಿಯವರು ಬೌದ್ಧಿಕವಾಗಿ ಬಹು ಎತ್ತರಕ್ಕೇರಿದವರು, ಆದರೆ ಯಾರನ್ನೂ ಕನಿಷ್ಠರೆಂದು ಬಗೆದು ಪಕ್ಕಕ್ಕೆ ಸರಿಸದಿದ್ದವರು. ಭಾರತ ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸ್‌ವಾದಿ) ಎಂಬುದು ಅವರಿಗೆ ಸ್ಫೂರ್ತಿಧಾಮವಾಗಿತ್ತು, ಕಾಯಕ ಕ್ಷೇತ್ರವಾಗಿತ್ತು. ಲೋಕಸಭೆಯಲ್ಲಿ ಅವರ ಧ್ವನಿ ಮತ್ತು ಮಾತು ಸದಾ ರಿಂಗಣಿಸುತ್ತಿತ್ತು, ಬೋಧಪ್ರದವಾಗಿರುತ್ತಿತ್ತು. ಎಡಪಕ್ಷಗಳ ಬೆಂಬಲದಿಂದ ಸರ್ಕಾರವನ್ನು ರಚಿಸಿದ್ದ ಕಾಂಗ್ರೆಸ್ ಪಕ್ಷವು ಅಧಿಕಾರದಲ್ಲಿದ್ದಾಗ ಅವರು ಲೋಕಸಭಾಧ್ಯಕ್ಷರಾಗಿದ್ದರು. ಕಮ್ಯುನಿಸ್ಟ್ ಕಾರ್ಯಕರ್ತನೊಬ್ಬ ಎಷ್ಟು ವಿಚಕ್ಷಣೆಯಿಂದ ತನ್ನ ಜವಾಬ್ದಾರಿ ನಿರ್ವಹಿಸುತ್ತಾನೆಂಬುದಕ್ಕೆ ಚಟರ್ಜಿಯವರು ಮೇರುಪ್ರಾಯರಾದರು. ಇಂದಿನ ಮತ್ತು ಹಿಂದಿನ ಸಭಾಧ್ಯಕ್ಷರುಗಳು ಯಾರೂ ಅವರೊಡನೆ ತುಲನೆಯಲ್ಲಿ ಸಮಾನಸ್ಕಂಧರಾಗಿ ನಿಲ್ಲುವುದು ಅನುಮಾನ. ಯಾವುದಕ್ಕೂ ಕೆಲಸಕ್ಕೆ ಬಾರದ ಒಂದು ಪರಮಾಣು ಒಪ್ಪಂದದ ಕಾರಣದಿಂದಾಗಿ ಅವರು ತಮ್ಮ ಪಕ್ಷದಿಂದ ಉಚ್ಚಾಟಿತರಾದರು, ಮನಮೋಹನ ಸಿಂಗ್ ಸರ್ಕಾರ ರಾಜಿನಾಮೆ ನೀಡಬೇಕಾಯಿತು. ಅದೇನೋ ಮಹತ್ತಾದ ಭಾಗ್ಯವೆಂಬಂತೆ ಅಮೆರಿಕಾದೊಡನೆ ಆ ಒಪ್ಪಂದವನ್ನು ಕಾಂಗ್ರೆಸ್ ಸರ್ಕಾರವು ವೈಭವೀಕರಿಸಿತು, ಆ ಸಂಪತ್ತಿಗಾಗಿ ಅಧಿಕಾರವನ್ನು ಒತ್ತೆಯಿಡಲು ಸಿದ್ಧವಾಯಿತು. ಆ ಒಪ್ಪಂದವು ನಮ್ಮ ದೇಶಕ್ಕೆ ಎಲ್ಲ ಕಡೆಯಿಂದಲೂ ಪರಮಾಣು ಇಂಧನವನ್ನು ದೊರಕಿಸಿಕೊಟ್ಟುಬಿಡುತ್ತದೆಂಬ ಭ್ರಮೆಯನ್ನು ಬಿತ್ತಿ ಗಾಳಿಗೋಪುರಗಳನ್ನು ಕಟ್ಟಿಕೊಂಡ ಕಾಂಗ್ರೆಸ್ ಪಕ್ಷವು ಅದೆಷ್ಟು ಅತಾರ್ಕಿಕವಾಗಿ ವರ್ತಿಸಿತೆಂಬುದು ಈಗ ಇತಿಹಾಸ. ಅಮೆರಿಕಾದ ತೆಕ್ಕೆಗೆ ಬೀಳುವುದೆಂದರೆ ದೇಶಕ್ಕೆ ಮುಕ್ತಿಯ ಹಾದಿಯೆಂಬ ರೀತಿಯಲ್ಲಿ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಆದರೆ ಪರಿಣಾಮದಲ್ಲಿ ಇಂಧನ ಪಡೆದುಕೊಳ್ಳುವ ಮಾರ್ಗವೇನೂ ಬಹಳ ಸಮಾಧಾನಕರವಾಗಿ ಬದಲಾಗಲಿಲ್ಲ. ಸೋಮನಾಥ ಚಟರ್ಜಿಯವರು ಲೋಕಸಭಾಧ್ಯಕ್ಷರಾಗಿ ಆಯ್ಕೆಗೊಂಡ ತರುವಾಯದಲ್ಲಿ ಅವರು ತಮ್ಮ ಪಕ್ಷದ ಸಕ್ರಿಯ ಕಾರ್ಯಕರ್ತರಾಗಿ ಉಳಿದಿರಲಿಲ್ಲ. ಆ ಕಾರಣವನ್ನು ನೀಡಿ ಅವರು ಅಧ್ಯಕ್ಷ ಸ್ಥಾನದಲ್ಲಿ ಮುಂದುವರಿದರು. ಪಕ್ಷದ ನೀತಿಗೆ ವಿರುದ್ಧವಾಗಿ ನಡೆದುಕೊಂಡರೆಂದು ಅವರನ್ನು ಪಕ್ಷವು ಹೊರಹಾಕಿತು. ಲೋಕಸಭೆಯ ಅಧ್ಯಕ್ಷರಾಗಿ ಚಟರ್ಜಿಯವರು ಪಕ್ಷಾತೀತರೇ ಸರಿ, ಆದರೆ ಅದು ಅವರ ಅಧ್ಯಕ್ಷ ವ್ಯಾಪ್ತಿಗೆ ಸೀಮಿತವಾದ್ದು. ಪಕ್ಷದಲ್ಲಿ ಇಲ್ಲದಿರುವವರನ್ನು ಪಕ್ಷದಿಂದ ಉಚ್ಚಾಟಿಸಲು ಸಾಧ್ಯವೆ? ವಿಷಯವು ಅಷ್ಟು ಸರಳವಲ್ಲ, ಏಕೆಂದರೆ ಪಕ್ಷವು ಸರ್ಕಾರಕ್ಕೆ ಬೆಂಬಲವನ್ನು ಹಿಂತೆಗೆದುಕೊಳ್ಳುವುದು ಕೇವಲ ಇಂಧನದ ಪ್ರಶ್ನೆಯಾಗಿರಲಿಲ್ಲ, ಬದಲಾಗಿ ದೇಶದ ವಿದೇಶಾಂಗ ನೀತಿಯ ಮೂಲಭೂತ ಬದಲಾವಣೆಯಾಗಿತ್ತು. ಚಟರ್ಜಿಯವರ ನಿಲುವು ಸರಿಯೋ, ಪಕ್ಷದ ನಿಲುವು ಸರಿಯೋ ಎಂಬುದು ಗೌಣವಾಗಿ, ಇಡೀ ಪ್ರಕರಣವು ಪಕ್ಷದ ಶಿಸ್ತಿನ ಪ್ರಶ್ನೆಯಾಗಿ ಪರಿಣಮಿಸಿತು. ಮಾನ್ಯ ಚಟರ್ಜಿಯವರು ತಮ್ಮ ಉಳಿದ ದಿನಗಳನ್ನು ವ್ಯಾಕುಲತೆಯಿಂದಲೇ ಕಳೆದರು. ಹಲವು ದಶಕಗಳ ಕೊಂಡಿಯು ಮುರಿದುಬಿದ್ದದ್ದು ಪಕ್ಷದ ಕಟ್ಟಾಳುವಿಗೆ ಮಾನಸಿಕ ಆಘಾತವನ್ನುಂಟು ಮಾಡಿತು. ಪಕ್ಷಕ್ಕೆ ಮರಳುವ ಪ್ರಕ್ರಿಯೆಗೆ ಚಾಲನೆ ದೊರಕದಿರಲು ಮೀನ-ಮೇಷ ಎಣಿಸುತ್ತಾ ಕುಳಿತಿದ್ದು ಪಕ್ಷವೋ ಅಥವಾ ಚಟರ್ಜಿಯವರೋ ಎಂಬುದು ತಿಳಿಯದು. ನಿಧನರಾದ ಚಟರ್ಜಿಯವರಿಗೆ ಗೌರವ ಸಲ್ಲಿಸಲು ಪಕ್ಷದ ಪ್ರತಿನಿಧಿಗಳು ಹೋದಾಗ ಜರುಗಿದ ಕಹಿ ಪ್ರಸಂಗವು ನಡೆಯದಿದ್ದರೆ ಒಳಿತಿತ್ತು.

ಲೋಕಸಭಾ ಸದಸ್ಯರಾಗಿ ಮತ್ತು ಪಕ್ಷದ ಕಾರ್ಯಕರ್ತರಾಗಿ ಸೋಮನಾಥ ಚಟರ್ಜಿಯವರು ಅಪ್ರತಿಮ ಶ್ರದ್ಧೆಯಿಂದ

ಕೆಲಸ ಮಾಡಿದ್ದಾರೆಂಬುದು ಚಿರಕಾಲ ನೆನಪಿನಲ್ಲಿ ಉಳಿಯುತ್ತದೆ. ಸಂಯಮದ ಕೊರತೆ ಯಾವ ನಡವಳಿಕೆಯಲ್ಲೂ ಇರದಂತೆ ತಮ್ಮ ರಾಜಕೀಯ ಜೀವನವನ್ನು ನಡೆಸಿದ್ದು ಅವರ ಹೆಗ್ಗಳಿಕೆ. ಅವರಿಗೆ ನಮ್ಮ ಕ್ರಾಂತಿಕಾರಿ ನಮನಗಳು ಸಲ್ಲುತ್ತವೆ. ಸರ್ವಾಂಗೀಣವಾದ ಅವರ ಮೊನಚು, ಬದಲಾವಣೆಯ ಹರಿಕಾರರಿಗೆ ದಾರಿದೀಪವಾಗಿ ಉಳಿಯುತ್ತದೆ.

ಮಾನ್ಯ ವಾಜಪೇಯಿ ಅವರನ್ನು ಕುರಿತಂತೆ ಸಾವಿರ ಶ್ಲಾಘನೀಯ ಹೇಳಿಕೆಗಳು ಬಂದಿವೆ. ಅವುಗಳೆಲ್ಲಾ ಪ್ರಮುಖವಾಗಿ ಅವರ ಸಜ್ಜನಿಕೆಯನ್ನು ನೆನಪಿಸಿಕೊಂಡಿವೆ, ರಾಜಕೀಯ ಹಣಾಹಣಿಯ ನಡುವೆ ವೈಯ್ಯಕ್ತಿಕ ಸಂಬಂಧಗಳನ್ನು ಹಸನಾಗಿಸುವ ಅವರ ವ್ಯಕ್ತಿತ್ವವನ್ನು ಎತ್ತಿಹಿಡಿದಿವೆ. ಕಠೋರವಾದ ಅವರ ಹಿಂದುತ್ವದ ಪ್ರತಿಪಾದನೆಯು ವೈರತ್ವವನ್ನು ತನ್ನ ಮಡಿಲಲ್ಲಿ ತುಂಬಿಕೊಂಡಿರಲಿಲ್ಲವೆಂಬ ವಿಚಾರವನ್ನು ಹಲವರು ಪ್ರಶಂಸಿಸಿದ್ದಾರೆ ಮತ್ತು ಅದನ್ನು ಪುಷ್ಟೀಕರಿಸಲು ಹತ್ತಾರು ಪ್ರಸಂಗಗಳನ್ನು ಸ್ಮರಿಸಿದ್ದಾರೆ. ವಾಜಪೇಯಿಯವರನ್ನು ಆದರಣೀಯವಾಗಿಸಿದ್ದು ಅವರಲ್ಲಿದ್ದ ಈ ಮನೋಭಾವ. ಕಳೆದ ಎಂಟು ವರ್ಷಗಳಲ್ಲಿ ಅಸ್ವಾಸ್ಥ್ಯವು ಅವರ ಚಟುವಟಿಕೆಗಳನ್ನು ಸ್ತಬ್ಧವಾಗಿಸಿದ್ದು ಶೋಚನೀಯ, ಏಕೆಂದರೆ ಆ ದಿನಗಳಲ್ಲಿ ಅವರಂತಹ ಭೀಷ್ಮರ ಅವಶ್ಯಕತೆ ಬಹಳವೇ ಇದ್ದಿತು. ಬಹಳ ಕ್ಲುಪ್ತವಾಗಿ ಅವರ ಪಾತ್ರವನ್ನು ಅರ್ಥೈಸಿಕೊಳ್ಳುವುದು ದುಷ್ಕರ, ಏಕೆಂದರೆ ರಾಜಕೀಯ ದ್ವಂದ್ವಗಳನ್ನು ಸರಳೀಕರಿಸುವುದರಿಂದ ಅವರಿಗೆ ಅಪಚಾರವನ್ನು ಎಸಗುವ ಅಪಾಯವಿದೆ. ಅವರೇ ಹೇಳುತ್ತಿದ್ದಂತೆ ಅವರನ್ನು ಬೆಳೆಸಿದ್ದು ತಮ್ಮ ಪಕ್ಷ: ಮೊದಲಿಗೆ ಆರೆಸ್ಸೆಸ್, ನಂತರ ಭಾರತೀಯ ಜನಸಂಘ ಮತ್ತು ಭಾರತೀಯ ಜನತಾ ಪಕ್ಷ. ಅವುಗಳೊಡನೆ ಅವರದು ಅವಿನಾಭಾವ ಸಂಬಂಧ. ತಮ್ಮನ್ನು ಬೆಳೆಸಿದ ಪಕ್ಷವನ್ನು ತಮ್ಮ ಸ್ವೀಕೃತ ಆದರ್ಶಗಳ ಮೌಲಿಕ ಸೂತ್ರಗಳ ಮೇರೆಗೆ ಬೆಳೆಸಲು ಸಾಧ್ಯವಾಗದೆ ಹೋದದ್ದು ಒಂದು ಶಾಶ್ವತ ಸತ್ಯ. ಈ ಲಹರಿಯು ಅವರನ್ನು ಆಗಾಗ್ಗೆ ಬಾಧಿಸಿದ್ದಿರಬೇಕು. ಮಾನ್ಯ ವಾಜಪೇಯಿಯವರ ರಾಜಕೀಯ ಜೀವನಪಥದಲ್ಲಿ ಇದೊಂದು ವ್ಯಂಗ್ಯ. ಅದಕ್ಕೆ ದೃಷ್ಟಾಂತಗಳು ಬೇಕಾದಷ್ಟಿವೆ. ಕಡೆಯ ದೃಷ್ಟಾಂತವು ಬಹಳ ಮಾರ್ಮಿಕವಾಗಿದೆ: ಗತಿಸಿದ್ದ ಹಿರಿಯ ಚೇತನಕ್ಕೆ ತಮ್ಮ ಗೌರವ ಸೂಚಿಸಲು ಸ್ವಾಮಿ ಅಗ್ನಿವೇಶ್ ಭಾರತೀಯ ಜನತಾ ಪಕ್ಷದ ಕೇಂದ್ರ ಕಚೇರಿಗೆ ತೆರಳಿದ್ದರು. ಆ ಕಚೇರಿಗೆ ಅವರು ಸಾಕಷ್ಟು ಬಾರಿ ಹೋಗಿಬಂದಿರಬೇಕು. ಆದರೆ ಗೌರವ ಸೂಚಿಸಲು ಹೋಗಿದ್ದ ಅಗ್ನಿವೇಶ್ ಅವರನ್ನು ಶ್ರೀ. ವಾಜಪೇಯಿಯವರ ಪಕ್ಷದ ಅಭಿಮಾನಿಗಳು ನಡೆಸಿಕೊಂಡ ರೀತಿಯು ವಾಜಪೇಯಿಯವರ ಗೌರವ ಮತ್ತು ವರ್ಚಸ್ಸನ್ನು ಕುಗ್ಗಿಸುವಂಥದು. ಅಗ್ನಿವೇಶರನ್ನು ಅಟ್ಟಿಸಿಕೊಂಡು ಹೋಗಿ ಎಳೆದಾಡಲಾಯಿತು, ಒಬ್ಬ ಸಭ್ಯ ಮಹಿಳೆಯು ತನ್ನ ಪಾದರಕ್ಷೆಗಳನ್ನು ಕೈಯ್ಯಲ್ಲಿ ಹಿಡಿದು ಅವರನ್ನು ಥಳಿಸಲು ಆವೇಶದಿಂದ ಹಿಂಬಾಲಿಸಿದರು. ತಮ್ಮ ಪಕ್ಷದ ಕಾರ್ಯಕರ್ತರ ಇಂತಹ ನಡೆಗಳನ್ನು ಮಾನ್ಯ ವಾಜಪೇಯಿಯವರು ಮನ್ನಿಸುತ್ತಿದ್ದರೆ? ಅಂದರೆ, ತಮ್ಮ ಮೌಲ್ಯಗಳನ್ನು ಅನುಷ್ಠಾನಕ್ಕೆ ತರುವಂತಹ ಕಾರ್ಯಕರ್ತರನ್ನು ತಯಾರುಮಾಡಿ ಪಕ್ಷವನ್ನು ಬೆಳೆಸುವುದು ಆಗಲಿಲ್ಲವಲ್ಲ ಎಂಬ ವ್ಯಥೆ ಅವರನ್ನು ಯಾವತ್ತೂ ಬಾಧಿಸುತ್ತಿದ್ದಿರಬೇಕು. ಇಂತಹ ಸೋಲು ಅವರಿಗೆ ಸದಾಕಾಲ ಕಳಂಕವಾಗಿ ಉಳಿಯದಂತೆ ಮಾಡಲು ಭಾರತೀಯ ಜನತಾ ಪಕ್ಷವು ಅಂತರವಲೋಕನ ಮಾಡಿಕೊಳ್ಳಬೇಕಾದ ಸಮಯ ಬಂದಿದೆ. ಗೋರಕ್ಷಣೆಯ ಹೆಸರಲ್ಲಿ ಮನುಷ್ಯ ವ್ಯಾಘ್ರಗಳ ಅಟಾಟೋಪವನ್ನು ವಾಜಪೇಯಿಯವರು ಮನ್ನಿಸಿಯಾರೆ? ಗೋಧ್ರಾ ದುರ್ಘಟನೆ ಮತ್ತು ಗುಜರಾತ್ ಹತ್ಯಾಕಾಂಡದ ನಂತರ ಗುಜರಾತಿಗೆ ಭೇಟಿ ನೀಡಿದ್ದ ಪ್ರಧಾನಿ ವಾಜಪೇಯಿಯವರು ಮುಖ್ಯಮಂತ್ರಿ ಶ್ರೀ. ನರೇಂದ್ರ ಮೋದಿಯವರ ಸಮ್ಮುಖದಲ್ಲೇ "ಗೋಧ್ರಾ ಎಷ್ಟು ಖಂಡನೀಯವೋ ನಂತರದ ಹತ್ಯಾಕಾಂಡವೂ ಅಷ್ಟೇ ಖಂಡನೀಯ" ಎಂದು ಹೇಳಿದ್ದರು. ಭಾರತೀಯ ಜನತಾ ಪಕ್ಷದ ಕಾರ್ಯಕಾರಿ ಸಮಿತಿಯಲ್ಲಿ ಶ್ರೀ. ಮೋದಿಯವರನ್ನು ರಾಜಿನಾಮೆ ನೀಡುವಂತೆ ಆಗ್ರಹಿಸುವ ಇರಾದೆಯೂ ಅವರದಾಗಿತ್ತು, ಆದರೆ ಸಮಿತಿಯ ಸದಸ್ಯರಲ್ಲಿ ಕೆಲವರು ಘೋಷಣೆಗಳನ್ನು ಕೂಗಿ ಅದಾಗದಂತೆ ತಡೆದರೆಂಬುದನ್ನು ಅಧಿಕೃತ ವಲಯಗಳು ದೃಢಪಡಿಸಿವೆ. ಅದು ಪಕ್ಷದ ಆಂತರಿಕ ವಿಷಯವೇನೋ ಸರಿ, ಆದರೆ ಸನ್ಮಾನ್ಯ ವಾಜಪೇಯಿಯವರು ಭಾರತದ ಬಹುತ್ವ ಕಲ್ಪನೆ ಮತ್ತು ಅಭಿವ್ಯಕ್ತಿಗೆ ಮುಕ್ತ ಸ್ವಾತಂತ್ರ್ಯ, ಎಂಬೆರಡು ಸೂತ್ರಗಳನ್ನು ರಾಷ್ಟ್ರೀಯತೆಯ ಅಡಿಪಾಯವೆಂದು ಅಂಗೀಕರಿಸಿದ್ದರೆಂಬುದು ಇಡೀ ದೇಶದ ವಿಷಯ ಮತ್ತು ನಮ್ಮ ಸಂವಿಧಾನದ ವಿಷಯ. ಅದನ್ನು ಕಾರ್ಯತಃ ಜಾರಿಗೊಳಿಸುವುದು ವಾಜಪೇಯಿಯವರ ಪಕ್ಷದ ಆದ್ಯ ಜವಾಬ್ದಾರಿ. ಅಂತೆಯೇ ಕೇಂದ್ರ ಸರ್ಕಾರದ ಜವಾಬ್ದಾರಿ ಸಹ. ಅದರ ನಿರ್ವಹಣೆಯು ಸನ್ಮಾನ್ಯ ವಾಜಪೇಯಿಯವರಿಗೆ ಸಲ್ಲಿಸಬೇಕಾದ ಗೌರವ ಮತ್ತು ಮಾನ್ಯತೆ.

ಶ್ರೀ. ವಾಜಪೇಯಿಯವರ ಇನ್ನೊಂದು ಅನನ್ಯತೆಯೆಂದರೆ ಜಡ್ಡು ಸಂಪ್ರದಾಯಗಳನ್ನು ವೈಯ್ಯಕ್ತಿಕ ಜೀವನದಲ್ಲಿ ಕೈಬಿಟ್ಟಿದ್ದುದು. ಆದರೆ ತಮ್ಮ ಪಕ್ಷದ ಚಿಂತನೆ ಮತ್ತು ಚಟುವಟಿಕೆಗಳಲ್ಲಿ ಅದನ್ನು ಅನುಷ್ಠಾನಗೊಳಿಸುವುದು ಅವರಿಗೆ ಸಾಧ್ಯವಾಗಲಿಲ್ಲ. ಅವರ ಸಂಪುಟದಲ್ಲಿದ್ದ ಪ್ರೊಫೆಸರ್ ಮುರಳಿ ಮನೋಹರ ಜೋಶಿಯಂಥವರು ಅದಕ್ಕೆ ಪ್ರತಿರೋಧ ಒಡ್ಡುತ್ತಿದ್ದರೆಂದು ತೋರುತ್ತದೆ. ಅದೇ ರೀತಿಯಲ್ಲಿ ಶ್ರೀ. ಪ್ರಮೋದ ಮಹಾಜನ್ ಅಂಥವರು ಭ್ರಷ್ಟಾಚಾರದ ಕೂಪದಲ್ಲಿ ಬಿದ್ದು ವಾಜಪೇಯಿಯವರನ್ನು ಇಕ್ಕಟ್ಟಿಗೆ ಸಿಲುಕಿಸಿದ್ದೂ ಉಂಟು. ರಾಷ್ಟ್ರಮಟ್ಟದ ಒಬ್ಬ ಗೌರವಾನ್ವಿತ ನಾಯಕರ ಅಗಲುವಿಕೆಯ ನಂತರ ಕೆಲವೇಳೆ ಭಾವನಾತ್ಮಕ ಮಿತಿಗಳು ಅನಗತ್ಯವಾದ ಉತ್ಪ್ರೇಕ್ಷೆಗಳಿಗೆ ಹಾದಿ ಮಾಡಿಕೊಡುತ್ತವೆ. ಅಷ್ಟೇ ವೇಗದಲ್ಲಿ ಅಂಥವರ ವಿರುದ್ಧ ಬೌದ್ಧಿಕ ಹಲ್ಲೆಗಳೂ ಜರುಗುವುದುಂಟು. ಮಾನ್ಯ ವಾಜಪೇಯಿಯವರ ಪಕ್ಷದಲ್ಲಿ ಕೆಲವರು ಜವಾಹರಲಾಲ್ ನೆಹರು ಮೇಲೆ ಅಂತಹ ಪ್ರಹಾರಗಳನ್ನು ಮಾಡಿರುವುದುಂಟು. ಆ ರೀತಿಯ ಪ್ರಹಾರಗಳು ವಾಜಪೇಯಿಯವರ ಮೇಲೆಂದಾದರೂ ಜರುಗಿದರೆ ಅದು ಅವರ 'ಭಾರತರತ್ನ'ಕ್ಕೆ ಭಂಗ ತಂದೀತೆಂಬ ಎಚ್ಚರ ನಮಗಿರಬೇಕು. ಬೇರೆಯಂತೆ, ಜೆ. ಪಿ. ನೇತೃತ್ವದ ಸಂಪೂರ್ಣ ಕ್ರಾಂತಿಯ ಬುನಾದಿಯ ಮೇಲೆ ಅಧಿಕಾರಕ್ಕೆ ಬಂದ ಶ್ರೀ. ವಾಜಪೇಯಿ ಮತ್ತು ಅವರ ಪಕ್ಷ ಎಂತಹ ಕ್ರಾಂತಿಯನ್ನು ಜರುಗಿಸಿತೆಂಬುದನ್ನು ಮುಂದಿನ ಇತಿಹಾಸವು ದಾಖಲಿಸುತ್ತದೆ.

ಸನ್ಮಾನ್ಯ ಶ್ರೀ. ವಾಜಪೇಯಿಯವರು ಮೊದಲಿಗೆ ಪ್ರಧಾನಿ ಮೊರಾರ್ಜಿ ದೇಸಾಯಿಯವರ ಸಂಪುಟದಲ್ಲಿ ವಿದೇಶಾಂಗ




ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸಚಿವರಾಗಿದ್ದರು. ಭಾರತದ ಅಲಿಪ್ತನೀತಿಗೆ ತಿರುವನ್ನು ಕೊಟ್ಟವರು ಅವರು. ವಿಯೆಟ್ನಾಂ ಮೇಲೆ ಎರಗಿಹೋಗಿ ಅಮೇರಿಕಾ ಭೀಕರ ಸಾವು-ನೋವು ಉಂಟುಮಾಡುತ್ತಿದ್ದ ಸಂದರ್ಭದಲ್ಲಿ ಅದಾವ ವಿಚಿತ್ರ ಕಾರಣದಿಂದಲೋ ಏನೋ **"ವಿಯೆಟ್ನಾಂನಲ್ಲಿ ಅಮೇರಿಕಾ ಭಾರತದ ಯುದ್ಧವನ್ನು ಜರುಗಿಸುತ್ತಿದೆ"** ಎಂದು ಪಾರ್ಲಿಮೆಂಟಿನಲ್ಲಿ ಹೇಳಿ ರೋಷ ಉಕ್ಕಿಸಿದ್ದರು. ಅವರೇ ಪ್ರಧಾನಿಯಾದಾಗ **"ಅಮೇರಿಕಾ ಭಾರತದ ಸಹಜ ಮಿತ್ರ"** ಎಂಬ ನಿಲುವನ್ನು ಘೋಷಿಸಿದರು. ಕಳೆದ ಒಂದು ಶತಮಾನದಲ್ಲಿ ಅಮೇರಿಕಾ ಯಾವ ದೇಶಕ್ಕೂ ಸಹಜ ಮಿತ್ರನಂತೆ ವರ್ತಿಸಿಲ್ಲ. ಅಂದು ಇರಾಕ್ ಮತ್ತು ಇಂದು ಟರ್ಕಿ ಅದಕ್ಕೊಂದು ಚಿಕ್ಕ ಉದಾಹರಣೆ. ಮಾನ್ಯ ವಾಜಪೇಯಿಯವರು ಪ್ರಧಾನಿಯಾಗಿದ್ದಾಗ ಅಮೇರಿಕಾ ಇರಾಕಿನ ಮೇಲೆ ಆಕ್ರಮಣ ನಡೆಸಿತ್ತು; ಅಮೇರಿಕಾದ ಬೆಂಬಲಕ್ಕೆ ನಿಲ್ಲಲು ನಮ್ಮ ಸೈನ್ಯದ ತುಕಡಿಗಳನ್ನು ಇರಾಕಿಗೆ ಕಳಿಸಬೇಕೆಂಬ ಚರ್ಚೆ ನಡೆದು ಅದನ್ನು ವಾಜಪೇಯಿಯವರು ತಳ್ಳಿಹಾಕಿದರೆಂದು ಹೇಳಲಾಗಿತ್ತು. ಅದು ಸ್ವಾಗತಾರ್ಹ ನಿಲುವೇ ಸರಿ. ಈಚಿನ ವರ್ಷಗಳಲ್ಲಿ ನಮ್ಮ ವಿದೇಶಾಂಗ ನೀತಿಯು ಪಲ್ಲಟಗೊಂಡು ವಿಶ್ವಸಂಸ್ಥೆಯಲ್ಲಿ ಭಾರತವು ಅಮೇರಿಕಾದ ನಿಲುವುಗಳ ಸಮರ್ಥನೆಗೆ ನಿಲ್ಲುತ್ತಿರುವುದು ಆತಂಕಕಾರಿಯಾಗಿದೆ. ಮುಶರಫ್ ಪಾಕಿಸ್ತಾನದ ಪ್ರಧಾನಿಯಾಗಿ ಭಾರತಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಸನ್ಮಾನ್ಯ ವಾಜಪೇಯಿಯವರ ನೇತೃತ್ವದಲ್ಲಿ ಕಾಶ್ಮೀರದ ಬಗ್ಗೆ ಒಂದು ಒಡಂಬಡಿಕೆಯ ಹಂತವನ್ನು ತಲುಪಲಾಗಿದ್ದಿತು. ಆ ಸಂದರ್ಭದಲ್ಲಿ ಭಾರತೀಯ ಜನತಾ ಪಕ್ಷದಲ್ಲಿ ಅದಕ್ಕೆ ವಿರೋಧ ವ್ಯಕ್ತವಾಗಿದ್ದು ಇಂದಿನ ವಿದೇಶಾಂಗ ಸಚಿವೆ ಶ್ರೀಮತಿ. ಸುಷ್ಮಾ ಸ್ವರಾಜ್ ಅವರ ಮೂಲಕ ಅದನ್ನು ಪ್ರಕಟಿಸಲಾಗಿತ್ತು ಮತ್ತು ಒಡಂಬಡಿಕೆಯ ಸಾಧ್ಯತೆಯು ಮುರಿದುಬಿತ್ತು. ಶ್ರೀ. ವಾಜಪೇಯಿಯವರ ನೆನಪಿಗೆ ಕಾಣಿಕೆಯಾಗಿ ಇಂದಿನ ಪಾಕಿಸ್ತಾನದ ಹೊಸ ಸರ್ಕಾರದ ಜೊತೆ ಮಾತುಕತೆ ನಡೆಸಿ ಎರಡೂ ದೇಶಗಳಿಗೆ ಅಂಗೀಕಾರಾರ್ಹವಾದ ತೀರ್ಮಾನಕ್ಕೆ ಬರಲು ಸಾಧ್ಯವಾದರೆ ಅದು ವಾಜಪೇಯಿಯವರ ದೂರದರ್ಶಿತ್ವಕ್ಕೆ ಮೆರುಗು ನೀಡಿದಂತಾಗುತ್ತದೆ.

ಮಾನ್ಯ ವಾಜಪೇಯಿಯವರು ಪ್ರಧಾನಿಯಾಗಿದ್ದಾಗ ನಮ್ಮ ದೇಶದ ಸಂವಿಧಾನಕ್ಕೆ ಕೆಲವು ಮಾರ್ಪಾಟುಗಳು ಅಗತ್ಯವೆಂದು ಬಗೆದು ನ್ಯಾಯಮೂರ್ತಿ ಶ್ರೀ. ಎಂ. ಎನ್. ವೆಂಕಟಾಚಲಯ್ಯ ಅವರ ನೇತೃತ್ವದಲ್ಲಿ ಒಂದು ವಿಮರ್ಶಾ ಸಮಿತಿಯನ್ನು ರಚಿಸಿದ್ದರು. ಸಮಿತಿಯು ಅಂತಹ ಮಾರ್ಪಾಟುಗಳು ಸೂಕ್ತವಲ್ಲವೆಂಬ ವರದಿಯನ್ನು ನೀಡಿದ್ದು, ಶ್ರೀ. ವಾಜಪೇಯಿಯವರು ಅದನ್ನು ಸ್ವೀಕರಿಸಿದ್ದರು. ಸಂವಿಧಾನವನ್ನು ಸುಟ್ಟುಹಾಕುವ ತಿಳಿಗೇಡಿಗಳು ಇಂದು ನಮ್ಮ ಮಧ್ಯೆ ಇಣುಕುಹಾಕುತ್ತಿರುವಾಗ ಮತ್ತೆ ವಾಜಪೇಯಿಯವರನ್ನು ಸಂವಿಧಾನದ ಶ್ರೀರಕ್ಷೆಗೆ ಸಾಧನವಾಗಿಸಿಕೊಳ್ಳುವುದು ಸಹ ಅವರಿಗೆ ನಾವು ನೀಡಬಹುದಾದ ಮನ್ನಣೆಯೇ ಸರಿ.

*(ಈ ತಿಂಗಳು ೩ನೇ ಪುಟದಿಂದ)*

ಬೊಫೋರ್ಸ್ ಪ್ರಕರಣ ಏನೂ ಅಲ್ಲ. ಈ ಬಹು ದೊಡ್ಡ ಪ್ರಕರಣ ರಾಷ್ಟ್ರೀಯ ಭದ್ರತೆಯನ್ನು ಶಿಥಿಲಗೊಳಿಸುವುದಾಗಿದೆ ಎಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಈ ಮೂವರೂ ಭಾಜಪದ ಹಿರಿಯ ಸದಸ್ಯರು.

✶ ✶ ✶

ಅಧಿಕಾರಕ್ಕೆ ಬರುವುದಕ್ಕೆ ಮುನ್ನ ಚುನಾವಣೆಗಳ ಸಮಯದಲ್ಲಿ ಭರವಸೆಗಳ ಮಹಾಪೂರವನ್ನೇ ಹರಿಸಬಹುದು. ಮೋದಿ ಅಧಿಕಾರಕ್ಕೇರುವ ಮುನ್ನ ಸ್ವಿಸ್ ಬ್ಯಾಂಕಿನಲ್ಲಿದ್ದ ಕಾಳಧನವನ್ನೆಲ್ಲ ತಂದು ಎಲ್ಲರ ಜೇಬು ತುಂಬುವ ಆಶ್ವಾಸನೆ ನೀಡಿದ್ದು ನೆನಪಿದೆ ತಾನೆ. ಹಾಗೆಯೇ ಮುಖ್ಯಮಂತ್ರಿ ಕುಮಾರಸ್ವಾಮಿಯವರ ರೈತರ ಸಾಲ ಮನ್ನಾ ವಿಚಾರ ಕೂಡ. ಅಧಿಕಾರಕ್ಕೆ ಬಂದ ಮೇಲೆ ತಾನೆ ನಿಜಸ್ಥಿತಿ ಅರಿವಾಗುವುದು. ದೇವಾಲಯಗಳಲ್ಲಿ ಹವನ ಹೋಮ ಮಾಡಿಸಿ ಪುಣ್ಯ ಕಟ್ಟಿಕೊಂಡಂತಲ್ಲ ಆಡಳಿತ ನಡೆಸುವುದು. ಹೇಳಿ ಕೇಳಿ ಕುಮಾರಸ್ವಾಮಿ ಸಮ್ಮಿಶ್ರ ಸರಕಾರ ನಡೆಸುತ್ತಿದ್ದಾರೆ ಕಾಂಗ್ರೆಸ್ಸಿನ ಕೃಪೆಯಿಂದ. ರೈತರ ಸಾಲ ಮನ್ನಾ ಈಗ ಅವರಿಗೆ ಬಿಸಿ ತುಪ್ಪವಾಗಿದೆ. ಅಧಿಕಾರ ವಂಚಿತ ಭಾಜಪ ಅದನ್ನೇ ದೊಡ್ಡದು ಮಾಡಿ ಅವಾಂತರ ಎಬ್ಬಿಸುತ್ತಿದೆ. ರೈತರ ಸಾಲ ಮನ್ನಾ ಹಿಂದೆಲ್ಲಾ ಮಾಡಲಾಗಿದೆ. ಆದರೂ ರೈತರ ಆತ್ಮಹತ್ಯೆ ನಡೆದೇ ಇದೆ. ಸಾಲ ಮನ್ನಾಕಿಂತ ಮುಖ್ಯವಾಗಿ ರೈತರ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಪರಿಹಾರ ಒದಗಿಸುವುದು ಮುಖ್ಯ. ಬೆಂಬಲ ಬೆಲೆ ಬೆಳೆದ ಬೆಳೆಗೆ ಅದರ ಒಂದು ಭಾಗ. ಸಮಿತಿಗಳ ಶಿಫಾರಸ್ಸುಗಳೆಲ್ಲ ಸರಕಾರಿ ಕಚೇರಿಯ ಮೂಲೆಯಲ್ಲಿ ಕೊಳೆಯುತ್ತಿವೆ. ಆಡಳಿತ ನಡೆಸುವವರಿಗೆ ಅದು ಬೇಕಿಲ್ಲ.

ಮೈತ್ರಿ ಸರಕಾರಕ್ಕೆ ಅಗತ್ಯವಾದದ್ದು ಪರಸ್ಪರ ವಿಶ್ವಾಸ. ಅದಿಲ್ಲದೆ ಹೋದರೆ ಕಿತ್ತಾಟ ಎಲ್ಲ ವಿಷಯಗಳಲ್ಲೂ. ಸ್ಥಳೀಯ ಸಂಸ್ಥೆಗಳಿಗೆ ನಡೆಯುವ ಚುನಾವಣೆಗಳಲ್ಲಿ ಕಾಂಗ್ರೆಸ್ - ಜೆಡಿಎಸ್ ಮಧ್ಯೆ ಹೊಂದಾಣಿಕೆ ಇಲ್ಲ. ಎರಡೂ ಪಕ್ಷಗಳು ಪೈಪೋಟಿಯಲ್ಲಿ ತೊಡಗಿಕೊಂಡಿವೆ. ರಾಜ್ಯಮಟ್ಟದಲ್ಲಿ ಈ ವಿಚಾರದಲ್ಲಿ ಹೊಂದಿಕೆ ಇಲ್ಲದೆ ಸ್ಥಳೀಯ ನಾಯಕರ ಮರ್ಜಿಗೆ ಬಿಡಲಾಗಿದೆ ತೀರ್ಮಾನಗಳನ್ನು. ಇದರಿಂದ ಲಾಭ ಯಾರಿಗೆ? ಖಂಡಿತ ಪ್ರತಿಪಕ್ಷದಲ್ಲಿರುವ ಭಾಜಪಗೆ. ಇನ್ನು ಮುಂಬರುವ ಲೋಕಸಭಾ ಚುನಾವಣೆಗಳಲ್ಲಿ ನಿಜವಾಗಿ ಕಾಂಗ್ರೆಸ್ - ಜೆಡಿಎಸ್ ಮಧ್ಯೆ ಎಂಥ ಹೊಂದಾಣಿಕೆಯಾದೀತು ಎನ್ನುವುದೀಗ ಪ್ರಶ್ನೆ. ಇಪ್ಪತ್ತೆಂಟು ಸ್ಥಾನಗಳಲ್ಲಿ ಜಯಗಳಿಸುವ ಭರವಸೆ ನೀಡಿದ್ದ ಯಡಿಯೂರಪ್ಪ ಈಗ ಇಪ್ಪತ್ತೈದು ಸ್ಥಾನಗಳಿಗೆ ತೃಪ್ತರಾಗಿದ್ದಾರೆ. ಕಾಂಗ್ರೆಸ್ - ಜೆಡಿಎಸ್ ಹೊಂದಾಣಿಕೆಯಾಗದಿದ್ದರೆ ಭಾಜಪ ಕನಸು ನನಸಾದೀತು. ರಾಜ್ಯದಲ್ಲಿ ನಡೆದ ಚುನಾವಣೆಗಳ ಸಮಯದಲ್ಲಿ ಕಾಂಗ್ರೆಸ್-ಜೆಡಿಎಸ್ ಒಂದಾಗಿ ಸ್ಪರ್ಧಿಸಿದ್ದರೆ ಭಾಜಪಗೆ ಈಗಿನ ಅರ್ಧದಷ್ಟು ಸ್ಥಾನಗಳು ಲಭಿಸುತ್ತಿದ್ದುವು. ಇದು ವಸ್ತುಸ್ಥಿತಿ.

✶ ✶ ✶

ಪ್ರತಿಸಲ ಮಳೆಗಾಲದಲ್ಲೂ ಗ್ರಾಮಗಳು ಮುಳುಗಡೆಯಾಗುವುದು, ಹೊಲಗದ್ದೆಗಳು ನೀರು ತುಂಬಿಕೊಂಡು ಬೆಳೆ ನಷ್ಟವಾಗುವುದು, ನಗರಗಳಲ್ಲಿ ಮೊಣಕಾಲುದ್ದ ನೀರು ನಿಂತು ಜನಜೀವನ ಅಸ್ತವ್ಯಸ್ತವಾಗುವುದು, ಮನೆಗಳಿಗೆ ನೀರು ನುಗ್ಗುವುದು, ಸಾವು ನೋವುಗಳಾಗುವುದು ಮಾಮೂಲು. ವರ್ಷ ವರ್ಷವೂ ಇದೇ ಕತೆ. ಸಂತ್ರಸ್ತರ ಪಾಡು ಕೇಳುವವರೇ ಇಲ್ಲ. ಈ ಸಲ ಹಲವು ರಾಜ್ಯಗಳಲ್ಲಿ ಮಳೆರಾಯನ ಹಾವಳಿ ವಿಪರೀತಗೊಂಡಿದ್ದು ನೂರಾರು ಮಂದಿ ಸಾವಿಗೀಡಾಗಿದ್ದಾರೆ. ನೆರೆಯ ಕೇರಳ ರಾಜ್ಯದಲ್ಲಂತೂ ನೂರ ಇಪ್ಪತ್ತೊಂಬತ್ತಕ್ಕೂ ಹೆಚ್ಚು ಜನ ಮೃತರಾಗಿದ್ದಾರೆ. ಕೆರೆಕಟ್ಟೆಗಳೆಲ್ಲ ತುಂಬಿ ಕೋಡಿಹರಿಯುತ್ತಿವೆ. ನಮ್ಮ ಕರ್ನಾಟಕ ರಾಜ್ಯದಲ್ಲೂ ಹಲವು ಕಡೆ ಮಳೆಯಿಂದಾಗಿ ಜನ ಪರಿತಪಿಸುತ್ತಿದ್ದಾರೆ. ಕೊಡಗು, ಮಂಗಳೂರು, ಉಡುಪಿ, ಚಿಕ್ಕಮಗಳೂರು ಜಲಾವೃತವಾಗಿವೆ. ಜಲಾಶಯಗಳೆಲ್ಲ ತುಂಬಿ ತುಳುಕಿವೆ. ನೇತ್ರಾವತಿ, ಕಪಿಲಾ ನದಿಗಳು ತುಂಬಿ ಹರಿಯುತ್ತಿದ್ದು ರಸ್ತೆಗಳೆಲ್ಲ ಮುಳುಗಡೆಯಾಗಿವೆ. ಇದಕ್ಕೆಲ್ಲ ಕಾರಣ ಸ್ಥಳೀಯ ಸಂಸ್ಥೆಗಳ ವೈಫಲ್ಯ. ಭ್ರಷ್ಟಾಚಾರದಲ್ಲಿ ಮುಳುಗಿರುವ ಈ ಸಂಸ್ಥೆಗಳು ಅಗತ್ಯವಾದ ಕ್ರಮ ಸಮಯಕ್ಕೆ ಸರಿಯಾಗಿ ಕೈಗೊಳ್ಳುವುದಿಲ್ಲ. ಕೆರೆಕಟ್ಟೆಗಳ ಹೂಳೆತ್ತುವ ಕಾರ್ಯ, ಚರಂಡಿಗಳ ವ್ಯವಸ್ಥೆ ಸಮರ್ಪಕವಾಗಿಲ್ಲದಿರುವುದೇ ದುರಂತಗಳಿಗೆ ಕಾರಣ. ಅತಿವೃಷ್ಟಿಯಾದರೆ ಒಂದು ಗೋಳು, ಅನಾವೃಷ್ಟಿಯಾದರೆ ಇನ್ನೊಂದು ಗೋಳು ಅನುಭವಿಸುವವರು ಜನಸಾಮಾನ್ಯರು ಮಾತ್ರ. ಅಧಿಕಾರಿಗಳು, ಇಂಜಿನಿಯರುಗಳು ಹಾಯಾಗಿರುತ್ತಾರೆ ಲಂಚ ಉಂಡು.

✶ ✶ ✶

ಕಳೆದ ಎರಡು ದಶಕಗಳಿಂದ ಬೆಂಗಳೂರಿನಲ್ಲಿ ಜರುಗುತ್ತಿರುವ ಏರ್‌ಷೋಗೆ ಈಗ ಕತ್ತರಿ ಬೀಳುವ ಸೂಚನೆಗಳಿವೆ. ರಕ್ಷಣಾ ಸಚಿವೆ, ರಾಜ್ಯ ವಿಧಾನ ಸಭೆಯಿಂದ ರಾಜ್ಯ ಸಭೆಗೆ ಆಯ್ಕೆಯಾಗಿರುವ ನಿರ್ಮಲ ಸೀತಾರಾಮನ್ ಈ ಬಗ್ಗೆ ಊಹಾಪೋಹಗಳಿಗೆ ಅವಕಾಶ ಮಾಡಿದ್ದಾರೆ ತಮ್ಮ ಹೇಳಿಕೆಯಿಂದ. ಅಡ್ಡಗೋಡೆಯ ಮೇಲೆ ಇಟ್ಟಂಥ ದೀಪದಂತೆ ಅವರ ಹೇಳಿಕೆ ಅವಾಂತರ ಸೃಷ್ಟಿಸಿದೆ. ಉತ್ತರ ಪ್ರದೇಶದ ಲಕ್ನೋ ನಗರಕ್ಕೆ ಸ್ಥಳಾಂತರವಾದೀತು ಎಂದು ವದಂತಿ ಇದೆ. ಇದರಲ್ಲಿ ಆಶ್ಚರ್ಯವೇನಿಲ್ಲ. ಉತ್ತರ ಪ್ರದೇಶದ ಆದಿತ್ಯನಾಥ ಸರಕಾರಕ್ಕೆ ಎಲ್ಲ ರೀತಿಯ ಸೌಕರ್ಯ ಒದಗಿಸುವುದು ಮೋದಿಯವರ ಇರಾದೆ. ಈ ಮಹಾಯೋಗಿ ಮೋದಿ ಆಯ್ಕೆ ಮಾಡಿದ ವ್ಯಕ್ತಿ. ಈಚೆಗೆ ನಡೆದ ಉಪಚುನಾವಣೆಗಳಲ್ಲಿ ಭಾರಿ ಸೋಲುಂಡಿದೆ ಈ ಪ್ರಾಂತ. ಹಾಗಾಗಿ ಎಲ್ಲ ಬೆಂಬಲ ಬೇಕು ಅದಕ್ಕೆ. ಮುಂಬರುವ ಲೋಕಸಭಾ ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ಮೋದಿ ಈ ತೀರ್ಮಾನ ಕೈಗೊಂಡಿರಬಹುದು. ರಾಜ್ಯ ಭಾಜಪ ನಾಯಕರುಗಳು ಏನೇ ಹೇಳಲಿ, ಅಂತಿಮ ತೀರ್ಮಾನ ಮಾಡುವುದು ಮೋದಿ ತಾನೆ.

✶ ✶ ✶

ಪ್ರಧಾನಿ ನರೇಂದ್ರ ಮೋದಿಯವರು ಈ ವರ್ಷದ ಸ್ವಾತಂತ್ರ್ಯೋತ್ಸವದ ದಿನದಂದು ದೆಹಲಿಯ ಕೆಂಪು ಕೋಟೆಯ ಮೇಲೆ ನಿಂತು ದೇಶವನ್ನುದ್ದೇಶಿಸಿ ಎಂಭತ್ತು ನಿಮಿಷಗಳ ಕಾಲ ಮಾತನಾಡಿದರೆಂದು ವರದಿಯಾಗಿದೆ. ಎಲ್ಲರಿಗೂ ಗೊತ್ತಿರುವ ಅನೇಕ ಪ್ರಮುಖ ಸಮಸ್ಯೆಗಳನ್ನು ಪ್ರಸ್ತಾಪಿಸಿದರಾದರೂ ಯಾವುದಕ್ಕೂ ಪರಿಹಾರೋಪಾಯಗಳ ಬಗ್ಗೆ ನಿರ್ದಿಷ್ಟವಾದ ಕಾರ್ಯಸೂಚಿಯನ್ನು ತೆರೆದಿಡಲಿಲ್ಲ ಎಂಬ ಟೀಕೆಗಳು ಅಲ್ಲಲ್ಲಿ ಕೇಳಿಬಂದಿವೆ. ಪರಿಹಾರಗಳು ಸುಲಭ ಸಾಧ್ಯವಲ್ಲವೆಂಬುದು ಅದಕ್ಕೊಂದು ಕಾರಣವಿದ್ದೀತು. ಅವರು ಭಾಷಣ ನೀಡಲು ಕೋಟೆಯನ್ನೇರುವ ವೇಳೆಗಾಗಲೆ ನಮ್ಮ ರೂಪಾಯಿಯು ತನ್ನ ಮೌಲ್ಯವನ್ನು ಸಾಕಷ್ಟು ಕಳೆದುಕೊಂಡಿದ್ದಿತು. ಈಗಂತೂ ಅದು ಇನ್ನೂ ಹೆಚ್ಚು ಅತಂತ್ರಕ್ಕೆ ಸಿಲುಕಿದೆ. ಭಾರತೀಯ ರಿಸರ್ವ್ ಬ್ಯಾಂಕ್ ನೇರವಾಗಿ ಮಧ್ಯಪ್ರವೇಶ ಮಾಡಿ ರೂಪಾಯಿಯ ಮೌಲ್ಯವನ್ನು ತಕ್ಕಮಟ್ಟಿಗೆ ಕಾಪಾಡಲು ಅಂಜುತ್ತಿರುವುದು ನಮ್ಮ ಆರ್ಥಿಕ ಸನ್ನಿವೇಶವು ಬಿಗಡಾಯಿಸಿರುವುದರ ಖಚಿತ ಸೂಚನೆ. ಒಂದು ಕಡೆ ಸರಕುಗಳ ರಫ್ತಿನಲ್ಲಿ ಹಿಂಜರಿಕೆ, ಮತ್ತೊಂದು ಕಡೆ ಸಾವಿರಗಟ್ಟಲೆ ಕೋಟಿ ರೂಪಾಯಿಗಳನ್ನು ಬ್ಯಾಂಕಿನಿಂದ ಸಾಲವಾಗಿ ಪಡೆದು ತಲೆ ತಪ್ಪಿಸಿಕೊಂಡು ಓಡಿಹೋಗಿರುವ ಖದೀಮರು. ಇವೆರಡರ ಪರಿಣಾಮ ಸಾಲದೆಂಬಂತೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ತೀವ್ರ ಮುಗ್ಗಟ್ಟು. ರೂಪಾಯಿ ಕುಸಿತದಿಂದಾಗಿ ವಾಣಿಜ್ಯ ಮತ್ತು ಆಮದು ವ್ಯವಹಾರವು ನಮ್ಮ ದೇಶಕ್ಕೆ ತುಟ್ಟಿಯಾಗುವುದು ಅನಿವಾರ್ಯ. ಪೆಟ್ರೋಲ್ ಮತ್ತು ಡೀಸಲ್ ಬೆಲೆಗಳು ಗಗನಕ್ಕೇರುವುದು ಖಚಿತ. 'ಮೇಕ್ ಇನ್ ಇಂಡಿಯ' ಮುಂತಾದ 'ಸೊಗಸಾದ' ಯೋಜನೆಗಳು ಹುಟ್ಟಿದಾಗಿನಿಂದಲೇ ನೆಲಕಚ್ಚಿರುವುದು ವಾಸ್ತವ. ಪ್ರಧಾನಿಯವರು ಪ್ರತಿ ತಿಂಗಳೂ ಮನಬಿಚ್ಚಿ ಮಾತನಾಡುತ್ತಾ ಬಂದಿದ್ದಾರೆ. ಅದು ಆಕಾಶವಾಣಿ ಮತ್ತು ದೂರದರ್ಶನಗಳಿಗೆ ಕಾರ್ಯಕ್ರಮವಾಗಿ ಒತ್ತಾಸೆ ನೀಡಿದೆಯೇ ವಿನಾ ಜನರ ಮನಸ್ಸಿಗೆ ನೆಮ್ಮದಿಯನ್ನು ತರುತ್ತಿರುವಂತೆ ಕಾಣುತ್ತಿಲ್ಲ. ಮನ್ ಕಿ ಬಾತ್ ಬದಲು "ಮಾನ್ ಕಿ ಬಾತ್" ಇದ್ದಿದ್ದರೆ ಚೆನ್ನಾಗಿರುತ್ತಿತ್ತೆಂದು ಜನ ಹೇಳಿಕೊಳ್ಳುವಂತಾಗಿದೆ. ಅಂದರೆ, ದೇಶದ ಮಾನ ಉಳಿಯುವುದಕ್ಕೆ ಮತ್ತು ವೃದ್ಧಿಸುವುದಕ್ಕೆ ಅಗತ್ಯವಾದ ಯೋಜನೆಗಳ ಬಗ್ಗೆ ಯೋಚಿಸಬೇಕೆಂಬುದು ಅವರ ಆಗ್ರಹ. ರಫ್ತು ಮಾಡಲು ನಮ್ಮ ಉತ್ಪಾದನಾ ರಂಗವು ಕ್ರಿಯಾಶೀಲವಾಗಬೇಕಿತ್ತು; ಆದರೆ ಕಾರ್ಖಾನೆಗಳು ಮುಚ್ಚುತ್ತಿವೆ ಮತ್ತು ನಿರುದ್ಯೋಗ ಹೆಚ್ಚುತ್ತಿದೆ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬೇಡಿಕೆ ಇರುವಂತಹ ಯಾವ ಸರಕುಗಳನ್ನು ನಾವು ಉತ್ಪಾದಿಸುತ್ತಿದ್ದೇವೆ? 'ಮಾನ್ ಕಿ ಬಾತ್'ನಲ್ಲಿ ಪ್ರಧಾನಿಯವರು ಆ ವಿವರಗಳನ್ನು ಕೊಟ್ಟಿದ್ದರೆ ಅವರಿಗೆ ಶೋಭೆ ಹೆಚ್ಚುತ್ತಿತ್ತು. ಹೊಡಿ, ಬಡಿ ಎಂಬುದನ್ನು ಬಿಟ್ಟು ನಮ್ಮ ಯುವಕ–ಯುವತಿಯರಿಗೆ ಮೂರ್ತವಾದ ಉತ್ಪಾದನಾ ಸಾಧನ ಮತ್ತು ಅವಕಾಶಗಳನ್ನು ಕಲ್ಪಿಸುವತ್ತ ಮನಸ್ಸು ಹರಿಸಿದರೆ ದೇಶದ ಮನಸ್ಸು ಮತ್ತು ಮಾನ ಎರಡೂ ಶುಭ್ರಗೊಳ್ಳುತ್ತವೆ.

* * *

ಮಹಾದಾಯಿ ನದಿ ನೀರಿನ ಹಂಚಿಕೆಗೆ ಕೊನೆಗೂ ತೀರ್ಪು ಬಂದಿದೆ. ನ್ಯಾಯ ಮಂಡಲಿ ಕರ್ನಾಟಕಕ್ಕೆ ೧೩:೪೨ ಟಿಎಂಸಿ ಅಡಿ ನೀರಿನ ಹಂಚಿಕೆ ಮಾಡಿದೆ. ಕರ್ನಾಟಕ ಮತ್ತು ಗೋವಾ ರಾಜ್ಯಗಳು ತಾವು ಮಂಡಿಸಿದ್ದ ಬೇಡಿಕೆಗಿಂತ ಕಡಿಮೆ ಹಂಚಿಕೆಯಾಗಿದೆ ಎಂದು ತಕರಾರು ತೆಗೆದಿವೆ. ಕರ್ನಾಟಕಕ್ಕೆ ಮಹಾದಾಯಿಯಲ್ಲಿ ಪಾಲನ್ನು ನಿರಾಕರಿಸಿದ್ದ ಗೋವಾ ರಾಜ್ಯದ ವಾದವನ್ನು ಸಾರಾಸಗಟು ತಿರಸ್ಕರಿಸಲಾಗಿದೆ. ಇದರಿಂದ ತನ್ನ ನೆಲದಲ್ಲಿಯೇ ಉಗಮವಾಗುವ ನದಿಯ ನೀರಿನ ಮೇಲೆ ಕರ್ನಾಟಕದ ಹಕ್ಕು ಸ್ಥಾಪನೆಯಾಗಿದ್ದು ಈ ತೀರ್ಪಿನ ಮುಖ್ಯ ಅಂಶ. ಇದೇನೇ ಇದ್ದರೂ ಕರ್ನಾಟಕ ಮತ್ತು ಗೋವಾದಲ್ಲಿ ಆಡಳಿತದಲ್ಲಿದ್ದ ಎರಡು ರಾಷ್ಟ್ರೀಯ ಪಕ್ಷಗಳಾದ ಬಿ.ಜೆ.ಪಿ. ಮತ್ತು ಕಾಂಗ್ರೆಸ್ ನ್ಯಾಯಾಲಯದಾಚೆ ವಿವಾದ ಬಗೆಹರಿಸಿಕೊಳ್ಳುವ ಎಲ್ಲ ಸಾಧ್ಯತೆಗಳಿದ್ದಾಗಲೂ ಅದನ್ನು ರಾಜಕೀಯ ಹಿತಾಸಕ್ತಿಯಿಂದಲೇ ನೋಡಿ ಈಗ ನ್ಯಾಯಾಧಿಕರಣದಿಂದ ಅನ್ಯಾಯದ ತೀರ್ಪು ಬಂದಿದೆ ಎಂದು ಹೇಳುವುದು ಹಾಸ್ಯಾಸ್ಪದ. ಕರ್ನಾಟಕ ಗೋವಾ ರಾಜ್ಯಗಳ ಆಡಳಿತ ಪಕ್ಷಗಳು ಈ ವಿವಾದವನ್ನು ರಾಜಕೀಯ ಲೆಕ್ಕಾಚಾರದಲ್ಲಿ ನೋಡುವಾಗ ಕೇಂದ್ರದ ಸರಕಾರವಾದರೂ ಮಧ್ಯಪ್ರವೇಶ ಮಾಡಿ ಎರಡೂ ರಾಜ್ಯಗಳ ಹಿತಾಸಕ್ತಿ ಕಾಪಾಡುವ ಮುತ್ಸದ್ದಿತನ ತೋರಬೇಕಾಗಿತ್ತು. ಆದರೆ ಪ್ರಧಾನಿ ಮೋದಿಯವರು ಸಹ ಈ ವಿವಾದವನ್ನು ರಾಜಕೀಯ ಹಿತಾಸಕ್ತಿಗೇ ಬಳಸಿಕೊಂಡರು. ಕರ್ನಾಟಕ ವಿಧಾನಸಭೆ ಚುನಾವಣೆಯಲ್ಲಿ ಬಹಿರಂಗವಾಗಿಯೇ ರಾಜಕೀಯ ಹೇಳಿಕೆ ಕೊಟ್ಟರು. ಈಗ ಕರ್ನಾಟಕ ಮತ್ತು ಗೋವಾ ರಾಜ್ಯಗಳ ನಡುವೆ ಶಾಶ್ವತವಾದ ಮನಸ್ತಾಪ ಉಂಟಾಗುವ ಸಾಧ್ಯತೆಗಳಿವೆ. ಗೋವಾ ಮತ್ತು ಕರ್ನಾಟಕಕ್ಕೆ ಹಂಚಿಕೆಯಾದ ನೀರಿನ ಪಾಲನ್ನು ಬಳಸಿಕೊಳ್ಳಲು ಯಾವುದೇ ಹೊಸ ಕಾಮಗಾರಿಗಳನ್ನು ಆರಂಭಿಸಬೇಕಾದರೂ ಪೂರ್ವಾನುಮತಿಯ ಷರತ್ತಿದೆ. ಇದರಿಂದಾಗಿ ಸಣ್ಣಪುಟ್ಟ ಕಾಲುವೆ, ನೀರು ನಿಲ್ಲಿಸುವ ವ್ಯವಸ್ಥೆ ಮಾಡಿಕೊಂಡರೂ ತಗಾದೆ ಮಾಡಿ ಹಂಚಿಕೆಯಾದ ನೀರು ಬಳಕೆಗೂ ಅಡ್ಡಿಪಡಿಸುವ ವಾತಾವರಣವಿದೆ. ಈಗಾಗಲೇ ಕಾವೇರಿ ವಿಷಯದಲ್ಲಿ ತಮಿಳುನಾಡು ಕರ್ನಾಟಕದ ವಿರುದ್ಧ ಹಲವಾರು ಆಕ್ಷೇಪಗಳನ್ನು ಎತ್ತಿದೆ. ನದಿ ಹರಿವಿನ ಮೇಲ್ಭಾಗದಲ್ಲಿರುವ ರಾಜ್ಯಕ್ಕೆ ಈ ವಿವಾದ ತಪ್ಪಿದ್ದಲ್ಲ. ಇಂಥ ವಿವಾದಗಳನ್ನು ತಪ್ಪಿಸಲು ಒಂದು ಒಕ್ಕೂಟ ವ್ಯವಸ್ಥೆಯ ಆಡಳಿತ ಕೇಂದ್ರವಾದ ಕೇಂದ್ರ ಸರಕಾರಕ್ಕೆ ಅವಕಾಶವಿತ್ತು. ಎಲ್ಲವನ್ನೂ ನ್ಯಾಯಾಧಿಕರಣ, ನ್ಯಾಯಾಲಯಗಳೇ ಪರಿಹರಿಸಬೇಕಾದರೆ ಚುನಾಯಿತ ಸರಕಾರಗಳ, ಶಾಸಕಾಂಗದ ಅವಶ್ಯಕತೆಯಾದರೂ ಏನಿತ್ತು? ಇನ್ನು ಮುಂದೆ ಮಹದಾಯಿ ನದಿ ಕೊಳ್ಳದಲ್ಲಿ ನೀರಿನ ಹರಿವಿನ ಮೇಲೆ ಸದಾ ಕಳ್ಳಗಣ್ಣಿಟ್ಟು ನೋಡುವ ಕ್ರಿಯೆ ಆರಂಭವಾಗುತ್ತದೆ. ಇದು ಒಕ್ಕೂಟ ವ್ಯವಸ್ಥೆಯಲ್ಲಿ ಎರಡು ರಾಜ್ಯಗಳ ನಡುವಿನ ಸೌಹಾರ್ದತೆಯನ್ನು ಕದಡುತ್ತದೆ. ಒಂದೇ ದೇಶದಲ್ಲಿ ಎರಡು ದೇಶಗಳನ್ನು ನೋಡಿದಂತೆ ಭಾಸವಾಗುತ್ತದೆ. ಇದಕ್ಕೆ ಎರಡೂ ರಾಜ್ಯದ ಜನ ಅವಕಾಶ ಕೊಡಬಾರದು ಎಂದು ಮಾತ್ರ ಆಶಿಸಬಹುದು.

ಮಹಾದಾಯಿ ನದಿ ನೀರಿಗಾಗಿ ಆ ಭಾಗದ ರೈತರು ಮಾಡಿದ ಹೋರಾಟ ಆ ಜನತೆಯ ಎಚ್ಚರವನ್ನೂ ಆತಂಕವನ್ನೂ ತೋರಿಸುತ್ತದೆ. ಈ ಹೋರಾಟ ಸರಕಾರಗಳ ಮೇಲೆ ಪ್ರಭಾವ ಬೀರಿ ಪರಿಣಾಮ ಪಡೆಯಲಾಗಲಿಲ್ಲ. ಕಾರಣ ಆ ಜನ ವಿವಾದವನ್ನು ರಾಜಕೀಯ ಇಚ್ಛಾಶಕ್ತಿಗೆ ಒತ್ತಡ ತರುವಷ್ಟು ರಾಜಕೀಯ ಕಾರ್ಯಕ್ರಮ ರೂಪಿಸಲಿಲ್ಲ. ಅವರ ಹೋರಾಟ ರಾಜಕೀಯ ಬದಲಾವಣೆಗೆ ಕಾರಣವಾಗುತ್ತದೆ ಎಂದಾಗಿದ್ದರೆ ಈ ವಿವಾದ ಎಂದೋ ಬಗೆಹರಿಯುತ್ತಿತ್ತು. ಆದರೂ ಆ ರೈತರ ಹೋರಾಟ ರಾಜ್ಯದ, ಕೇಂದ್ರದ ಗಮನ ಸೆಳೆದಿತ್ತು. ಅದಕ್ಕಾಗಿ ಮಹಾದಾಯಿ ಹೋರಾಟಗಾರರು ಅಭಿನಂದನಾರ್ಹರು. ಮಹಾದಾಯಿ ನೆಲದ ಜನ ಆ ನದಿಯ ನೀರಿನ ಮೇಲೆ ಹಕ್ಕು ಪಡೆದದ್ದೇ ಸದ್ಯದ ಸಮಾಧಾನ.

* * *

ಕೇರಳ, ಕೊಡಗು ಸುರಿದ ಮಳೆಯಿಂದ ಕೊಚ್ಚಿ ಹೋಗುವಾಗ ದೇಶದ ಜನತೆಯ ಸ್ಪಂದನ ಸ್ಮರಣೀಯವಾದದ್ದು. ಆದರೆ ಕೇಂದ್ರ ಸರಕಾರ ಮಾತ್ರ ಇದರಲ್ಲೂ ಮಾಡಿದ ರಾಜಕೀಯ ಖಂಡನೀಯವಾದದ್ದು. ನೀರು ತುಂಬಿ, ಪ್ರವಾಹದ ಮಧ್ಯೆ ಸಿಲುಕಿದ ಜನ ಅನ್ನ ನೀರಿಲ್ಲದೇ ಪರಿತಪಿಸಿದ್ದಾರೆ. ನೀರಿನಲ್ಲಿ ಮುಳುಗಿಹೋಗುತ್ತಿದ್ದರೂ ಕುಡಿಯಲು ನೀರು ಸಿಗದೆ ಮನೆಯ ಮಾಳಿಗೆಯ ಮೇಲೆ ಕುಳಿತು ಮಳೆ ನೀರನ್ನೇ ಪಾತ್ರೆಗಳಲ್ಲಿ ಹಿಡಿದು ಕುಡಿದು ಬದುಕಿದ್ದಾರೆ. ಆದರೆ ಪತ್ರಿಕಾ ವರದಿಗಳ ಪ್ರಕಾರ ಅವರನ್ನು ಹೆಲಿಕಾಪ್ಟರ್‌ಗಳ ಮೂಲಕ ರಕ್ಷಿಸಬಹುದಿತ್ತು ಅಥವಾ ಅವರಿಗೆ ಅನ್ನ, ನೀರು ತಲುಪಿಸಬಹುದಿತ್ತು. ಆದರೆ ಅಷ್ಟು ಹೆಲಿಕಾಪ್ಟರ್‌ಗಳು ಲಭ್ಯವಿರಲಿಲ್ಲ ಎಂದು ವರದಿಯಾಗಿದೆ. ಉಪಗ್ರಹಗಳನ್ನು ಬಾನಿಗೆ ಕಳಿಸಿ ಹೆಮ್ಮೆ ಪಡುವ ನಾವು ನಮ್ಮ ಜನರ ರಕ್ಷಣೆಗಾಗಿ ಕೇರಳದಂಥ ಚಿಕ್ಕ ರಾಜ್ಯಕ್ಕೆ ಒಂದಿಪ್ಪತ್ತು ಹೆಲಿಕಾಪ್ಟರ್‌ಗಳನ್ನು ವ್ಯವಸ್ಥೆ ಮಾಡಲಾಗಲಿಲ್ಲ ಎನ್ನುವುದು ನಾಚಿಕೆಗೇಡಲ್ಲವೇ? ಸರಕಾರಿ, ಖಾಸಗಿವಲಯದಲ್ಲಿ ಸಾಕಷ್ಟು ಹೆಲಿಕಾಪ್ಟರ್‌ಗಳಿದ್ದೂ ಜನರ ರಕ್ಷಣೆಗಾಗಿ ಬಳಸಲಾಗಲಿಲ್ಲ ಎನ್ನುವುದು ರಾಜಕೀಯ ದುರಾಲೋಚನೆ ಎನ್ನುವುದು ವಾಸ್ತವ.

ಕೇರಳದಲ್ಲಿ ಕ್ರಿಶ್ಚಿಯನರೂ, ಮುಸ್ಲಿಮರೂ ಹೆಚ್ಚಿದ್ದಾರೆ, ಅಲ್ಲಿನ ಹಿಂದೂಗಳು ಹಿಂದೂ ಪಕ್ಷವನ್ನು ಬೆಂಬಲಿಸಿಲ್ಲ. ಅವರು ಹಾಳಾಗಿಹೋಗಲಿ, ಅಯ್ಯಪ್ಪ ಸ್ವಾಮಿ ಮುನಿಸಿಕೊಂಡಿದ್ದಾನೆ. ಹೀಗೆ ಸಾಮಾಜಿಕ ಜಾಲತಾಣಗಳಲ್ಲಿ ಅಭಿಪ್ರಾಯಗಳು ಹರಿದಾಡುತ್ತಿವೆ. ಮನುಷ್ಯ ಆರಂಭಿಸಿದ ರಾಜಕೀಯ, ಧಾರ್ಮಿಕ ವ್ಯವಸ್ಥೆಗಳು ಮನುಷ್ಯನನ್ನೇ ಕೊಲ್ಲುತ್ತಿವೆ. ಮನುಷ್ಯರನ್ನು ಅಮಾನುಷವಾಗಿ ವಿಭಜಿಸುತ್ತಿವೆ. ದೇಶದ ಭವಿಷ್ಯವೇನು?




ನಮ್ಮ ಭಾರತವು ಬಹುತ್ವದ ಬೀಡಾಗಿದ್ದು ಪ್ರಜಾಸತ್ತೆಯ ನಾಡೂ ಆಗಿದೆ. ವಿವಿಧ ಧರ್ಮೀಯರು ನೆಲೆನಿಂತು ಸೌಖ್ಯ ಜೀವನವನ್ನು ನಡೆಸುತ್ತಿದ್ದಾರೆ. ಸಾಮಾಜಿಕವಾಗಿಯೂ ವೈವಿಧ್ಯತೆಯನ್ನು ಹೊಂದಿ ಸಾಂಸ್ಕೃತಿಕವಾಗಿಯೂ ಭಿನ್ನ ಆಚರಣೆಗಳನ್ನು ನೇರವೇರಿಸುತ್ತ ಬಂದಿದ್ದಾರೆ. ಸಾಂಪ್ರದಾಯಿಕವಾಗಿ ಅವರವರ ಪದ್ಧತಿ, ಅನುಸರಣೆಗಳು ಹೀಗೆ ಸಾಗಿ ಬರುತ್ತಿವೆ. ಆಚಾರ–ವಿಚಾರ, ಆಹಾರ, ಉಡುಪು, ಭಾಷೆ, ಸಂಸ್ಕಾರ, ಜೀವನ ಪದ್ಧತಿ, ಹಬ್ಬ–ಹರಿದಿನ, ಶಿಷ್ಟಾಚಾರ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಪೌರೋಹಿತ್ಯ, ಪೂಜಾ ವಿಧಿವಿಧಾನಗಳು ಹೀಗೆ ಪ್ರತಿಯೊಂದರಲ್ಲೂ ಭಿನ್ನವಾದ ಕಾರ್ಯರೂಪಗಳನ್ನು ಕಾಣಬಹುದಾಗಿದೆ. ಇಷ್ಟೆಲ್ಲ ಇದ್ದೂ ಕೂಡ ಭಾರತ ಎತ್ತ ಸಾಗುತ್ತಿದೆ ಎಂಬ ಬೃಹತ್ ಪ್ರಶ್ನೆಯೊಂದು ನಮ್ಮೆದುರು ಸೆಟೆದು ನಿಂತಿದೆ. ಉತ್ತರಿಸಲು ತಡಕಾಡುತ್ತಿರುವಾಗಲೇ ಬೆನ್ನ ಹಿಂದೆ ಯಾರೋ ಬಲಪ್ರಯೋಗ ಮಾಡಿದಂತಾಗಿ ಯಾವ ನೆನಪು ಬಾರದೆ ಹೇಳಿದ್ದಕ್ಕೆ ಗೋಣಾಡಿಸುವ ಬೆದರು ಬೊಂಬೆಯಂತಾಗುತ್ತಿದ್ದೇವೆ. ಭಾರತಕ್ಕೆ ಯಾರೂ ಭಾರವೆನಿಸಿಲ್ಲ, ಹಾಗಿದ್ದೂ ನಮ್ಮ ನಡುವೆಯ ಸಾವಿರಾರು ಕಂದಕಗಳು, ಗೋಡೆಗಳು ನಿರ್ಮಾಣವಾಗುತ್ತಿದ್ದು, ಧರ್ಮ, ಸಂಸ್ಕೃತಿ, ಪ್ರಾದೇಶಿಕತೆ, ಭಾಷೆ, ವ್ಯಕ್ತಿ, ಆಹಾರದ ವಿಚಾರಗಳು ಕಾರಣವಾಗಿ ಸಂಘರ್ಷಗಳುಂಟಾಗುವಂತೆ ಮಾಡುತ್ತಿವೆ. ಸಂವಿಧಾನವು ಸಾರುವಂತಹ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಸಮಾನತೆ, ಸಹಬಾಳ್ವೆ, ಜಾತ್ಯತೀತತೆ, ಸಮಾಜವಾದ ಎಂಬ ಪದಗಳಿಗೆ ಕಂಟಕ ಬಂದಂತಿದೆ.

ಭಾಷೆಯ ಕಾರಣವಾಗಿ ಭಾರತವು ಜಗತ್ತಿನಲ್ಲೆ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದ್ದು, ನೂರಾರು ಭಾಷೆಗಳ ಜನ್ಮತಾಣವೆನಿಸಿದೆ. ಪ್ರಪಂಚದಲ್ಲಿನ ಭಾಷೆಗಳ ನಾಲ್ಕನೇ ಒಂದು ಪಾಲಿನಷ್ಟು ಭಾಷೆಗಳು ಭಾರತದಲ್ಲಿಯೇ ಕವಲೊಡೆದು ಹರಡಿ ಹಂಚಿಹೋಗಿದ್ದು ನಾಗರಿಕರು ಆಯಾ ಸಾಮಾಜಿಕ ವಲಯದಲ್ಲಿ ತಮ್ಮದೇ ಆದ ನುಡಿಯನ್ನು ಹಂಚಿಕೊಂಡು ಸೊಗಸಾದ ಜೀವನವನ್ನು ನಡೆಸುತ್ತಿರುವರು. ಆದರೆ ಇದೀಗ ಅವರವರ ಭಾಷೆಯ ನಡುವೆಯೇ ಮತ್ತೊಂದು ಮಗದೊಂದು ಭಾಷೆಗಳ ಪ್ರವೇಶವಾಗಿ ಮೂಲ ಭಾಷೆಯನ್ನು ತುಳಿಯುವ ಹುನ್ನಾರ ಅರಿವಿಗೆ ಬಂದು ನಡೆಯುತ್ತಿದೆ. ಒಮ್ಮೆಗೆ ಪ್ರಾಂತೀಯ ಭಾಷೆಗಳನ್ನು ತುಳಿಯುವ, ಭಾಷೆಗಳನ್ನು ಕಲಿತವರಿಗೆ ವಂಚಿಸುವ ಹುನ್ನಾರ ನಡೆದಿದೆ. ಇದು ಬಹುತ್ವವನ್ನು ಹೊಂದಿದ ಭಾರತತ್ವಕ್ಕೆ ಅಡ್ಡಿಯೆನಿಸುವಂತಹ ಪ್ರಕ್ರಿಯೆಯಾಗಿದೆ.

ಭಾರತವು ವಿಭಜಿತಗೊಂಡು ಹಲವು ವರ್ಷಗಳು ಕಳೆದುಹೋಗಿದ್ದರೂ ಇಂದಿಗೂ ಭಾರತದಲ್ಲಿ ವಿವಿಧ ಧರ್ಮೀಯರು ನೆಲೆಸಿದ್ದಾರೆ. ವೈವಿಧ್ಯತೆಯಲ್ಲಿ ಭಾರತ ಮುಂದಡಿಯಿಟ್ಟು ಎಲ್ಲರಿಗೂ ಸಮಾನ ಜೀವನ ಹಕ್ಕನ್ನು ದಯಪಾಲಿಸಿ ಏಕತೆಯನ್ನು ಪ್ರತಿಪಾದಿಸುತ್ತಿದೆ. ಯಾವ ಒತ್ತಾಯಕ್ಕೂ ಕಟ್ಟುಬೀಳದೆ ಎಲ್ಲ ಧರ್ಮೀಯರು ತಮ್ಮಾದಿಯಾಗಿ ಮನದಿಚ್ಛೆಯಂತೆ ಧಾರ್ಮಿಕ ಕ್ರಿಯಾ ವಿಧಿವಿಧಾನಗಳನ್ನು ನಡೆಸಿಕೊಂಡು




ಬರುತ್ತಿದ್ದು, ಸಹಕಾರಿ ಜೀವನ ನಡೆಸುತ್ತಿರುವರು. ಹೀಗಿರುವಾಗ ಧರ್ಮದ ಕಾರಣವಾಗಿ ಸಂಘರ್ಷಗಳು ಇದೀಗ ಶುರುವಿಟ್ಟುಕೊಂಡಿವೆ. ಬಹುತ್ವದ ಸಂಕೇತವೇ ಭಾರತವಾಗಿದ್ದು ಈ ರೀತಿಯ ಸಂಘರ್ಷಗಳು ಉಚಿತವಲ್ಲವೆನಿಸುತ್ತವೆ. ಹಾಗೂ ಅವುಗಳ ನಿರ್ಬಂಧಿಸುವಿಕೆಗೆ ಪ್ರಯತ್ನಿಸಬೇಕಿದೆ. ಈ ಹಿಂದೆ ಇದ್ದದ್ದೂ ಕೇವಲ ಮನುಷ್ಯ ಧರ್ಮವೊಂದೆ. ಆದರೂ ಕ್ರಮೇಣವಾಗಿ ಮನುಷ್ಯ ಧರ್ಮವೂ ಭಿನ್ನಭಿನ್ನ ರೂಪ ಸ್ವರೂಪಗಳನ್ನು ಪಡೆಯುತ್ತಾ ಸಾಗಿತು. ಹೊಸ ಧರ್ಮಗಳ ಜೊತೆಗೆ ಹೊಸ ನೇತಾರರು ಹುಟ್ಟಿಕೊಂಡರು. ಇಲ್ಲಿ ಧರ್ಮ ಮತ್ತು ಧರ್ಮಕ್ಕೆ ಸಂಬಂಧಿಸಿದ ವ್ಯಕ್ತಿಗಳು ಇಲ್ಲವೇ ಸುಧಾರಕ ಸಂತರು ಭಾರತಕ್ಕೆ ಸಲ್ಲುವವರಾಗಿದ್ದಾರೆ. ಕೇವಲ ಸೀಮಿತ ವರ್ಗಗಳಿಗಷ್ಟೇ ಅವರು ಮೀಸಲಾಗಬಾರದು. ಧರ್ಮವೆಂದರೆ ಇಲ್ಲಿ ಕೇವಲ ಹಿಂದು–ಮುಸ್ಲಿಂ–ಕ್ರೈಸ್ತವಷ್ಟೆ ಅಲ್ಲ. ಮನುಷ್ಯತ್ವ ಇಲ್ಲವೇ ಮಾನವೀಯತೆಯನ್ನು ಬೋಧಿಸುವ ಯಾವ ತತ್ವವಾದರೂ ಅದೂ ಧರ್ಮವೇ ಹಾಗೂ ಅದರ ಪ್ರತಿಪಾದಕರು ಧರ್ಮ ಬೋಧಕರೆ ಸರಿ. ಯಾರೆ ಹಿತವಾದದ್ದನ್ನು ಹೇಳಿದರೂ ಸ್ವೀಕಾರಾರ್ಹವೆ. ಅದಾಗಲೇ ಭಾರತದಲ್ಲಿ ಧರ್ಮವನ್ನು ವಿಭಜಿಸುವ, ನಾಯಕರನ್ನು ಕೆಲ ಸಮುದಾಯಗಳಿಗೆ ಸೀಮಿತಗೊಳಿಸುವ ಕೆಲಸ ಶುರುವಾಗತೊಡಗಿದ್ದು, ಅದೆಷ್ಟು ಸಮಾರಂಭ ಸಂಭ್ರಮಾಚರಣೆಗಳೂ ನಡೆಯುತ್ತಿವೆಯೆಂದರೆ ಹೇಳತೀರದು. ಹುಟ್ಟಿನ ಆಧಾರದ ಮೇಲೆ ಕೇವಲ ಅದೇ ವರ್ಗದಲ್ಲಿ ಅವರನ್ನು ಪೂಜನೀಯವಾಗಿ ಕಾಣಲಾಗುತ್ತಿದೆ. ಇತರರಿಗೆ ಅವರು ಸಲ್ಲಕೂಡದು ಎಂಬ ನಿರ್ಬಂಧಗಳನ್ನು ಹೇರಲಾಗುತ್ತಿದೆ. ಇಲ್ಲಿ ಇದನ್ನು ತೊಡೆದುಹಾಕಿ ಪ್ರತಿ ಸಂತ, ನಾಯಕ, ಧರ್ಮದವ ನಮ್ಮವನೆಂಬುದನ್ನು ತಿಳಿಯಬೇಕಾದ ಅಗತ್ಯವಿದೆ. ಎಲ್ಲ ಕಾಲದಲ್ಲಿನ ಎಲ್ಲ ಧರ್ಮಗಳನ್ನು ಹಾಗೂ ಪ್ರತಿಪಾದಕರನ್ನು ಎಲ್ಲರ ಪೋಷಕರಂತೆ ಕಾಣುವ ಮನೋಭಾವ ಬರಬೇಕಿದೆ. ಸೀಮಿತ ಪರಿಧಿಯನ್ನು ತೊರೆದಾಗಲೆ ಮತ್ತಷ್ಟು ವಿಸ್ತಾರ ಸಾಧ್ಯ.

*ಚಿತ್ರದುರ್ಗ* **ಮಂಜುನಾಥ ಬಿ. ಟಿ.**

ರಾಜ್ಯದ ವಿವಿಧ ಕಾನೂನು ಮಹಾ ವಿದ್ಯಾಲಯಗಳಿಂದ ಕಾನೂನು ಪದವಿ ಪಡೆದ ಪದವೀಧರರು ವಕೀಲರಾಗಿ ವೃತ್ತಿ ಪ್ರಾರಂಭಿಸಲು ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿನಲ್ಲಿ ನೋಂದಾಯಿತರಾಗಬೇಕಾಗುತ್ತದೆ. ಬೆಂಗಳೂರಿನ ರಾಷ್ಟ್ರೀಯ ಕಾನೂನು ವಿ. ವಿ.ಯಿಂದ ಕಾನೂನು ಪದವಿ ಪಡೆದ ರಾಷ್ಟ್ರದ ನೈರುತ್ಯಭಾಗದ ಮಣಿಪುರ ರಾಜ್ಯದ ವಿದ್ಯಾರ್ಥಿಗಳು ನೋಂದಣಿ ಪ್ರಕ್ರಿಯೆಯ ಬಗ್ಗೆ ವಕೀಲರ ಪರಿಷತ್ತಿನ ಕಾರ್ಯದರ್ಶಿಯಾದ ನನ್ನ ಬಳಿ ಬಂದಾಗ ಅವರು ನನ್ನೊಂದಿಗೆ, ನಮಸ್ಕಾರ ಸರ್, ವಕೀಲರಾಗಲು ಏನು ಮಾಡಬೇಕೆಂದು ವಿವರಗಳ ಕುರಿತು ಅಚ್ಚಕನ್ನಡದಲ್ಲಿ ವಿಚಾರಿಸಿದರು.

ಐದು ವರ್ಷಗಳ ಕಾನೂನು ಪದವಿ ಕುರಿತು ಅಧ್ಯಯನ ಮಾಡಲು ರಾಜ್ಯಕ್ಕೆ ಬಂದ ಮಣಿಪುರ ರಾಜ್ಯದ ವಿದ್ಯಾರ್ಥಿಗಳು ಅಚ್ಚಕನ್ನಡದಲ್ಲಿ ಮಾತನಾಡಿದುದು ನ್ಯಾಯವಾದಿಯಾಗಿ, ಸಾರ್ವಜನಿಕ ಅಭಿಯೋಜಕನಾಗಿ ಕಳೆದ ೩೭ ವರ್ಷಗಳಿಂದ ನ್ಯಾಯಾಲಯದ ಒಳಗೆ, ದೈನಂದಿನ ವ್ಯವಹಾರದಲ್ಲಿ ಕನ್ನಡವನ್ನು ಬಳಸುತ್ತಿರುವ ನನಗೆ ಖುಷಿಕೊಟ್ಟಿತು.

ಮರುದಿನ ನಾನು ಪರಿಷತ್ತಿನ ದಾಖಲೆಗಳನ್ನು ಪರಿಶೀಲಿಸುತ್ತಿರುವಾಗ ಬೆಂಗಳೂರಿನವರಾದ ಕಾನೂನು ಪದವೀಧರರ ತಂದೆಯವರೊಬ್ಬರು ಅವರ ಮಗನ ನೋಂದಣಿ ಬಗ್ಗೆ ಮಾಹಿತಿ ಪಡೆಯಲು ಬಂದ ಅವರನ್ನು "ಶರಣು ಬನ್ನಿ" ಎಂದು ಬರಮಾಡಿಕೊಂಡಾಗ ಅವರು ಆಂಗ್ಲ ಭಾಷೆಯಲ್ಲಿ "ಗುಡ್ ಮಾರ್ನಿಂಗ್ ಸರ್" ಎಂದು ನನ್ನ ಮನವಿಯನ್ನು ಸ್ವೀಕರಿಸಿ ಕುರ್ಚಿಯಲ್ಲಿ ಕುಳಿತು ಆಂಗ್ಲ ಭಾಷೆಯಲ್ಲಿ "ವಾಟಿಜ್ ದಿ ಪ್ರೊಸಿಜರ್ ಫಾರ್ ಎನ್ರೋಲ್‌ಮೆಂಟ್" ಎಂದು

ಕೇಳಿದಾಗ ನಾನವರಿಗೆ ತಮ್ಮ ಊರು ಯಾವುದು ಎಂದು ಕೇಳಿದೆನು. ಅದಕ್ಕವರು "ಐ ಯಾಮ್ ಬಾರ್ನ್ ಆ್ಯಂಡ್ ಬ್ರಾಟಪ್ ಆ್ಯಟ್ ಬೆಂಗಳೂರು. ನೌ ಸೆಟಲ್ಡ್ ಆ್ಯಟ್ ದೆಲ್ಲಿ" ಎಂದುತ್ತರಿಸಿದರು. ಆಗ ನಾನವರಿಗೆ "ಕರ್ನಾಟಕದವರಾದ ನಾವು ನಮ್ಮ ಮಾತೃಭಾಷೆಯಲ್ಲಿ ಮಾತನಾಡುವಾ, ನಂತರ ಉಳಿದ ಭಾಷಿಕರು ನಮ್ಮ ಭಾಷೆಯನ್ನು ಬಳಸಲು ಕೋರವಾ" ಎಂದು ಮನವಿ ಮಾಡಿಕೊಂಡಾಗ ಅವರು ಅದಕ್ಕೆ ಸಮ್ಮತಿಸಿ ಕನ್ನಡದಲ್ಲಿ ಮಾಹಿತಿ ಪಡೆದುಕೊಂಡರು.

ಹೊರ ರಾಜ್ಯದಿಂದ ಅಧ್ಯಯನಕ್ಕೆ ಬಂದ ವಿದ್ಯಾರ್ಥಿಗಳು ಅಚ್ಚ ಕನ್ನಡದಲ್ಲಿ ಮಾತನಾಡಲು ಮುಂದಾಗುವಾಗ ನಮ್ಮವರೂ ಕನ್ನಡದಲ್ಲಿ ಮಾತನಾಡುವಂತೆ ಕೋರುತ್ತೇನೆ.

*ಬೆಂಗಳೂರು* ***ಬಸವರಾಜ ಹುಡೇದಗಡ್ಡಿ***

✉ ೨೦೧೮ರ ಆಗಸ್ಟ್ ತಿಂಗಳ 'ಹೊಸತು' ಸಂಚಿಕೆಯಲ್ಲಿ ಮೂಡಿಬಂದ "ಉಳುವಾ ಯೋಗಿಯ ನೋಡಲ್ಲಿ" ಲೇಖನಕ್ಕೆ ಡಾ॥ ಸಿದ್ದನಗೌಡ ಪಾಟೀಲ್ ಅವರನ್ನು ಕೇವಲ ಅಭಿನಂದಿಸದೇ ಈ ಲೇಖನಕ್ಕೆ, ಓರ್ವ ಕೃಷಿಕನಾಗಿ, ನಾಲ್ಕು ಸಾಲುಗಳ ಪ್ರತಿಕ್ರಿಯೆ ನೀಡುವುದೇ ಸೂಕ್ತ ಗೌರವ ಎಂಬ ಕಾರಣಕ್ಕೆ ಈ ನನ್ನ ವೈಯಕ್ತಿಕ ಅಭಿಪ್ರಾಯಗಳು.

ಲೇಖಕರು ನಮೂದಿಸಿರುವ ಸಂಗತಿಗಳನ್ನು ಓರ್ವ ವ್ಯವಸಾಯಗಾರನ ದೃಷ್ಟಿಕೋನದಲ್ಲಿ ಗಮನಿಸುವುದೋ ಅಥವಾ ಓರ್ವ ಸಾಮಾನ್ಯ ಸಾರ್ವಜನಿಕನಾಗಿ ಪ್ರತಿಕ್ರಿಯಿಸುವುದೋ ಎಂಬುದೇ ಮೊದಲ ಗೊಂದಲವಾಗಬಹುದು... ಬಹುತೇಕ ಪೋಷಕರು ತಮ್ಮ ಮಕ್ಕಳು ಮೇರು ಹುದ್ದೆಗಳಲ್ಲಿ ಹೆಚ್ಚು ಜವಾಬ್ದಾರಿ ಇಲ್ಲದೇ, ಅತೀ ಹೆಚ್ಚು ಆದಾಯ ಗಳಿಸುವಂತಾಗಲಿ ಎಂದು ಆಶಿಸುತ್ತಾರೆಯೇ ಹೊರತು ಯಾರೊಬ್ಬರೂ ಸಹ ತನ್ನ ಸಂಸಾರದ ಕುಡಿ ಅನ್ನದಾತನಾಗಲೆಂದು ಅಪೇಕ್ಷೆಪಡುವುದು ಬಹು ವಿರಳ. ಇಂತಹ ವಿಪರ್ಯಾಸದ ಸನ್ನಿವೇಶದ ನಡುವೆಯೂ ಸಹ ದೇಶದ ಶೇಕಡ ೬೧ರಷ್ಟು ಮಂದಿ "ದುಡಿಮೆಗೆ ತಕ್ಕ ಹಣಕಾಸಿನ ಆದಾಯ ತಂದು ಕೊಡದ" ಕೃಷಿ ವಲಯದಲ್ಲಿ ತೊಡಗಿಸಿಕೊಂಡಿರುವುದು ಹೆಮ್ಮೆಯ ವಿಚಾರವಲ್ಲವೇ ? ಹಣದಲ್ಲಿಯೇ ನೆಮ್ಮದಿ ಕಾಣುವ ಅನಿವಾರ್ಯತೆ ಎದುರಾಗಿರುವ ಕಾರಣಕ್ಕೆ ಗ್ರಾಮೀಣ ಭಾಗದ ಮಂದಿ ಹೆಚ್ಚಿನ ಆದಾಯ ವನ್ನು ಅರಸಿ ನಗರಗಳತ್ತ ವಲಸೆ ಹೋಗುವುದರಲ್ಲಿ ತಪ್ಪಿಲ್ಲದಿದ್ದರೂ ಸಹ ಕೃಷಿ ಇಲ್ಲದೇ ಜೀವನ ಇರಲು ಸಾಧ್ಯವಿಲ್ಲ ಎಂಬ ಯಥಾರ್ಥವನ್ನು ಅರಿಯಲೇ ಬೇಕಾಗುತ್ತದೆ. ಒಂದು ಸಂದರ್ಭದಲ್ಲಿ ವ್ಯವಸಾಯ ಎಂಬುದು ಜೀವನೋಪಾಯದ ಮಾರ್ಗವಾಗಿದ್ದು ಇಂದು ಅಪ್ಪಟ ವ್ಯವಹಾರ ವಾಗಿರುವ ಹಿನ್ನೆಲೆಯಲ್ಲಿ ಒಂದೆರಡು ಸತ್ಯಾಂಶ ಗಳನ್ನು ಅರಿಯುವುದು ಅವಶ್ಯ.

ಹಸಿರು ಕ್ರಾಂತಿಗೂ ಮುನ್ನ ಒಕ್ಕಲುತನದಲ್ಲಿ ಬೇಕಾದ ಸಕಲ ಪರಿಕರಗಳನ್ನು (ಇನ್‌ಪುಟ್) ರೈತಾಪಿ ಮಂದಿ, ಶ್ರಮವಹಿಸಿ, ಆಂತರಿಕವಾಗಿ (ಇನ್ ಹೌಸ್) ತಯಾರಿಸಿಕೊಳ್ಳುತ್ತಿದ್ದ ಪರಿಸ್ಥಿತಿ ಬದಲಾಗಿ ಎಲ್ಲವನ್ನೂ ಮಳಿಗೆಗಳಿಂದಲೇ ಕೊಳ್ಳುವ ಕಾರಣಕ್ಕೆ ಇಂದಿನ ಆಧುನಿಕ ಕೃಷಿ ತುಟ್ಟಿಯಾಗಿದ್ದು ಮಾತ್ರವಲ್ಲ, ಮಣ್ಣಿನ ಫಲವತ್ತತೆಯೂ ಹಾಳಾಗು ತ್ತಿರುವುದೇ ಮಹತ್ಸಾಧನೆ ! ಇಂದು ನಿರಾಯಾಸ ವಾಗಿ ರಾಸಾಯನಿಕ ಒಕ್ಕಲುತನಕ್ಕೆ ಒಗ್ಗಿದ ರೈತಾಪಿ ವರ್ಗವನ್ನು ಪುನಃ ಬಹು ಶ್ರಮದಿಂದ ಕೂಡಿದ ನೈಸರ್ಗಿಕ ವ್ಯವಸಾಯ ಪದ್ಧತಿಗೆ ಮರಳಿಸುವುದು ಸುಲಭಸಾಧ್ಯವೇ ? ಈ ಎಲ್ಲ ವಾಸ್ತವದ ಹಿನ್ನೆಲೆಯಲ್ಲಿ ಕೃಷಿಯಲ್ಲಿ ಖರ್ಚುಗಳು ಹೆಚ್ಚಾಗಿ ಆದಾಯ ಕ್ಷೀಣಿಸಿದೆ, ಆರೋಗ್ಯ ಹದ ಗೆಟ್ಟಿದೆ, ಸವಾಲುಗಳು ಅಧಿಕವಾಗಿವೆ, ಪೈಪೋಟಿ ತಾರಕಕ್ಕೇರಿದೆ, ರೈತರ ಬೇಕುಗಳು ಉಲ್ಬಣಿಸಿವೆ. ರೈತ ಮುಖಂಡರು ರಾಜಕಾರಣಿಗಳಾಗಿದ್ದು ಗ್ರಾಮ ಸಂಪರ್ಕದಿಂದ ದೂರವಾಗಿ ನಗರಗಳಲ್ಲಿ ವಾಸಿಸ ತೊಡಗಿದ್ದಾರೆ, ಗ್ರಾಮೀಣ ಮಂದಿಯ ಒಳಿತಿಗೆ ಆದ್ಯತೆ ಕೇವಲ ಚರ್ಚೆಗಳಿಗೆ ಸೀಮಿತವಾಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಉಳುವ ಯೋಗಿಯೇ ಕಾರ್ಯಪ್ರವೃತ್ತನಾಗಬೇಕು, ಅನ್ಯರ ಮೇಲಿನ ಅವಲಂಬನೆ ಕಡಿಮೆಯಾಗಿ ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳುವಲ್ಲಿ ಕೇವಲ ಹೋರಾಟಕ್ಕಿಂತ ಚಿಂತನೆಗಳು ಕಾರ್ಯರೂಪಕ್ಕೆ ಬರುವಂತಾಗಬೇಕು !

*ಹಾಸನ* ***ರಾಜೀವ್ ಎನ್. ಮಾಗಲ್***

### ನಾಡು ಒಡೆಯಲು ಹೊರಟ ಮನೆ ಮುರುಕರು

✉ ಅಪಾರ ತ್ಯಾಗ–ಬಲಿದಾನದಿಂದ ಕಟ್ಟಿದ ಅಖಂಡ ಕರ್ನಾಟಕವನ್ನು ಒಡೆದು ಹೋಳು ಹೋಳು ಮಾಡುವ ಅಪಸ್ವರ ಮತ್ತೆ ಕೇಳಿ ಬರುತ್ತಿವೆ. ಈ ಅಪಸ್ವರಗಳಿಗೆ ತೀವ್ರ ವಿರೋಧವೂ ವ್ಯಕ್ತವಾಗುತ್ತಿದೆ. ಈ ಹಿಂದಿನಂತೆ ಅಖಂಡ ಭಾರತ ನಿರ್ಮಿಸಲು ಹೊರಟವರ ಪಕ್ಷದಿಂದಲೇ ಅಖಂಡ ಕರ್ನಾಟಕವನ್ನು ವಿಭಜಿಸುವ ಮಾತುಗಳು ಕೇಳಿಬರುತ್ತಿವೆ.

ಪ್ರತಿ ವಿಧಾನಸಭೆ ಚುನಾವಣೆ ಫಲಿತಾಂಶ ಬಂದಾಗ, ಸೋತ ಪಕ್ಷದ ಕೆಲವರಿಂದ ಇಂಥ ಮಾತುಗಳು ಹೊರಹೊಮ್ಮುತ್ತವೆ. ತಮಗೆ ಮಂತ್ರಿಯಾಗುವ ಅವಕಾಶ ಸಿಗದಿದ್ದರೆ, ಪ್ರತ್ಯೇಕ ಕರ್ನಾಟಕದ ಧ್ವನಿ ಎತ್ತುತ್ತಾರೆ. ಅಧಿಕಾರದಲ್ಲಿ ಇದ್ದಾಗ, ಇಂತಹ ಮಾತುಗಳು ಅವರಿಂದ ಕೇಳಿ ಬರುವುದಿಲ್ಲ. ಆಗ ತಮ್ಮ ಅಧಿಕಾರವನ್ನು ಬಳಸಿಕೊಂಡು ತಮ್ಮ ಹಿತಾಸಕ್ತಿ ರಕ್ಷಣೆಗಾಗಿ ಕಸರತ್ತು ನಡೆಸುತ್ತಾರೆ.

ಪ್ರತ್ಯೇಕ ರಾಜ್ಯದ ಬಗ್ಗೆ ಉತ್ತರ ಕರ್ನಾಟಕದ ಜನ ತಲೆ ಕೆಡಿಸಿಕೊಂಡಿಲ್ಲ. ಆದರೆ ಒಂದೇ ಒಂದು ಬಾರಿ ಶಾಸಕರಾದರೆ ಸಾಕು, ಬೆಂಗಳೂರಿನಲ್ಲಿ ಮನೆ ಮಾಡಿಕೊಂಡು ಅಲ್ಲಿ ಉದ್ದಿಮೆಗಳನ್ನು ಸ್ಥಾಪಿಸಿಕೊಂಡು ಶಾಲಾ ಕಾಲೇಜುಗಳನ್ನು ಕಟ್ಟಿಕೊಂಡು ಪುರಸೊತ್ತಾದಾಗ ತಮ್ಮ ಮತಕ್ಷೇತ್ರಗಳಿಗೆ ಹೋಗಿ ಬರುವ ಅನಿವಾಸಿ ಜನ ಪ್ರತಿನಿಧಿ ಗಳಿಂದಲೇ ಇಂಥ ಮಾತು ಕೇಳಿ ಬರುತ್ತವೆ. ಈ ಹಿಂದೆ ಬಿಜೆಪಿ ಈ ರಾಜ್ಯದಲ್ಲಿ ಅಧಿಕಾರದಲ್ಲಿತ್ತು. ಈಗ ಪ್ರತ್ಯೇಕ ರಾಜ್ಯದ ಬಗ್ಗೆ ಮಾತನಾಡುವವರು ಆಗ ಅಧಿಕಾರದಲ್ಲಿ ಇದ್ದರು. ಅಧಿಕಾರದಲ್ಲಿದ್ದಾಗ, ಇವರು ಏನು ಕಡಿದು ಕಟ್ಟೆಹಾಕಿದ್ದಾರೆಂದು ಜನರಿಗೆ ಗೊತ್ತಿದೆ.

ಉತ್ತರ ಕರ್ನಾಟಕದ ಅಭಿವೃದ್ಧಿಗಾಗಿ ಹೋರಾಡುವ ಬದಲು ಪ್ರತ್ಯೇಕ ರಾಜ್ಯದ ಬೇಡಿಕೆ ಇಡುವುದು ಸದುದ್ದೇಶದಿಂದಲ್ಲ. ಕರ್ನಾಟಕ ರಾಜ್ಯ ಎಂಬುದು ಸುಮ್ಮನೆ ಅಸ್ತಿತ್ವಕ್ಕೆ ಬರಲಿಲ್ಲ. ಅಕ್ಕಪಕ್ಕದ ರಾಜ್ಯಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡ ಭಾಷಿಕ ಪ್ರದೇಶಗಳನ್ನು ಒಂದುಗೂಡಿಸಲು ದೊಡ್ಡ ಹೋರಾಟವೇ ನಡೆಯಿತು. ಅನೇಕರು ತ್ಯಾಗ–ಬಲಿದಾನ ಮಾಡಿದರು.

ಉತ್ತರ ಕರ್ನಾಟಕ ಹಿಂದುಳಿದಿರುವಿಕೆಗೆ ಪ್ರತ್ಯೇಕ ರಾಜ್ಯ ನಿರ್ಮಾಣ ಪರಿಹಾರವಲ್ಲ. ಈ ರೀತಿ ನಿರ್ಮಾಣಗೊಂಡ ಪ್ರತ್ಯೇಕ ರಾಜ್ಯಗಳಲ್ಲಿ ಅಭಿವೃದ್ಧಿ ಸಾಧಿಸಿದ ಉದಾಹರಣೆಗಳಿಲ್ಲ. ಆಂಧ್ರದಿಂದ ತೆಲಂಗಾಣ ಪ್ರತ್ಯೇಕಗೊಂಡ ನಂತರ, ಆಂಧ್ರದಲ್ಲಿ ಸಂಪನ್ಮೂಲದ ಕೊರತೆ ಉಂಟಾಗಿ ಸರ್ಕಾರಿ ನೌಕರರ ಸಂಬಳ ಕೊಡಲು ಸಹ ಪರದಾಡುವಂತಾಗಿದೆ.

ಉತ್ತರ ಕರ್ನಾಟಕ ಈಗ ಮುಂಚಿನಷ್ಟು ಹಿಂದುಳಿದಿಲ್ಲ. ಈ ಭಾಗದಲ್ಲಿ ೪೦ಕ್ಕೂ ಹೆಚ್ಚು ಸಕ್ಕರೆ ಕಾರ್ಖಾನೆಗಳಿವೆ. ಅನೇಕ ಶಾಲಾಕಾಲೇಜು ಮತ್ತು ವಿಶ್ವವಿದ್ಯಾಲಯಗಳು ತಲೆಯೆತ್ತಿವೆ. ಚಾಲುಕ್ಯರ ಸಾಮ್ರಾಜ್ಯ, ರಾಷ್ಟ್ರಕೂಟರ, ವಿಜಯನಗರದ ಐತಿಹಾಸಿಕ ಹಿನ್ನೆಲೆ ಜೊತೆಗೆ ೯೦೦ ವರ್ಷಗಳ ಹಿಂದೆಯೇ ಸಮಾನತೆಯ ಸಂದೇಶ ಸಾರಿದ ಬಸವಣ್ಣನವರ ವಚನ ಚಳವಳಿ ಪ್ರಭಾವ ಇಲ್ಲಿದೆ. ಸಾಂಸ್ಕೃತಿಕವಾಗಿ ಇದು ಅತ್ಯಂತ ಮುಂದುವರೆದ ಪ್ರದೇಶ. ಇದು ಹಿಂದುಳಿದಿದ್ದರೆ, ಅದು ಕೈಲಾಗದ ಸ್ವಾರ್ಥ ಸಾಧಕ ರಾಜಕಾರಣಿಗಳಿಂದ ಮಾತ್ರ.

*ಕಲಬುರ್ಗಿ* ***ಸನತ್ ಕುಮಾರ ಬೆಳಗಲಿ***

### ಬಿ. ಎಸ್. ಮಯೂರ ಅವರಿಗೆ ನಮನ

ನವಕರ್ನಾಟಕ ಪ್ರಕಾಶನದ ಲೇಖಕರ ಲ್ಲೊಬ್ಬರಾದ ಶ್ರೀಮತಿ ಬಿ. ಎಸ್. ಮಯೂರ ಅವರು ಆಗಸ್ಟ್ ೧೫ರಂದು ನಿಧನ ರಾಗಿದ್ದಾರೆ. ಇವರ 'ಸ್ಟೀಫನ್ ಹಾಕಿಂಗ್ : ಬದುಕು ಮತ್ತು ವಿಚಾರ' ಮತ್ತು 'ನೆರೆಯ ಬಿಂಬಗಳು' ಕೃತಿಗಳು ನವಕರ್ನಾಟಕದಿಂದ ಪ್ರಕಟಗೊಂಡಿವೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗ ನೋವಿನ ನಮನಗಳನ್ನು ಸಲ್ಲಿಸುತ್ತದೆ.

## ಜೀವೂಬಾಯಿ ಲಕ್ಷ್ಮಣರಾವ್ ಅವರಿಗೆ ನಮನ

ಜುಲೈ ೨೬ರಂದು ನಿಧನ ಹೊಂದಿದ ಜೀವೂಬಾಯಿ ಅವರಿಗೆ 'ಹೊಸತು' ನಮನ ಸಲ್ಲಿಸುತ್ತದೆ. ಇವರು ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಇವರ ಪತ್ನಿ. ಕನ್ನಡಕ್ಕೆ ಅನುವಾದ ಮಾಡುವುದರಲ್ಲಿ ನಿಷ್ಣಾತರು. ಇವರು ಅನುವಾದಿಸಿದ ''ಶೋಧ'', ''ಚಾರ್ಲ್ಸ್ ಡಾರ್ವಿನ್ ಆತ್ಮಕಥೆ'' ಮತ್ತು ''ಕಾರ್ಲ್ ಮಾರ್ಕ್ಸ್: ಆಧುನಿಕ ಕಮ್ಯುನಿಸಮ್‌ನ ಸ್ಥಾಪಕ'' ಕೃತಿಗಳನ್ನು ನವಕರ್ನಾಟಕ ಪ್ರಕಟಿಸಿದೆ.

### ಗುಬ್ಬಿ ಮೇಲೆ ಬ್ರಹ್ಮಾಸ್ತ್ರ

✉ ನಿರುದ್ಯೋಗ ನಿವಾರಣೆಗೆ ಬದಲು, ನಿರುದ್ಯೋಗ ಹೆಚ್ಚಳವಾಗುತ್ತಿದೆ. ಇಂತಹ ಪರಿಣಾಮದಿಂದಾಗಿ ಬಹುತೇಕ ನಿರುದ್ಯೋಗಿಗಳು ಆಟೋ ಮತ್ತು ಟ್ಯಾಕ್ಸಿ ಚಾಲಕರಾಗಿ ಜೀವನ ನಿರ್ವಹಿಸುತ್ತಿದ್ದಾರೆ. ಹೀಗಾಗಿ ಚಾಲನಾ ವೃತ್ತಿಗೆ ಪದವೀಧರರು, ಸ್ನಾತಕೋತ್ತರರು, ಇತರೆ ವೃತ್ತಿಪರ ಪದವೀಧರರು ಕೂಡ ಪ್ರವೇಶಿಸುತ್ತಿದ್ದಾರೆ.

ಇಂತಹ ಉದ್ಯೋಗಾಂಕ್ಷಿಗಳು ಶೇ. ೯೦ರಷ್ಟು ಆಟೋ ಮತ್ತು ಟ್ಯಾಕ್ಸಿ ಚಾಲಕರು ಖಾಸಗಿ ಫೈನಾನ್ಸ್‌ಗಳಿಂದಲೇ ಸಾಲ ಪಡೆದು ಸ್ವಯಂ–ಉದ್ಯೋಗಿಗಳಾಗಿದ್ದಾರೆ. ಇನ್ನೊಂದೆಡೆ ಮಧ್ಯಮ ವರ್ಗದವರ ಅಗತ್ಯಕ್ಕಿಂತ ಹೆಚ್ಚಿನ ರೀತಿಯಲ್ಲಿ ವಾಹನಗಳ ಖರೀದಿಯ ಭರಾಟೆ. ಜೊತೆಗೆ ದೂರದೃಷ್ಟಿ ಇಲ್ಲದೆ, ನಗರ ಯೋಜನೆಗಳು ವಿಕೇಂದ್ರೀಕರಣವಿಲ್ಲದೆ ಗಂಭೀರ ಸಮಸ್ಯೆಯಾಗಿ ತಲೆದೋರಿರುವ 'ಟ್ರಾಫಿಕ್ ಸಮಸ್ಯೆಗಳು' ಹೆಚ್ಚಾಗುತ್ತಿವೆ. ಹೀಗೆ ಹೆಚ್ಚಾಗಿರುವ ವಾಹನಗಳ ಪೈಪೋಟಿ, ಇಂಧನಗಳ ದರ ಹೆಚ್ಚಳ, ಅಧಿಕ ಶುಲ್ಕಗಳು, ದಂಡಗಳು, ಕಿರುಕುಳ ಮುಂತಾದ ಕಾರಣಗಳಿಂದಾಗಿ, ಸಾರಿಗೆ ಕ್ಷೇತ್ರದ ದುಡಿಯುವ ಜನತೆಯ ಆದಾಯ ಕುಸಿಯುತ್ತಿದೆ. ಆಟೋ ಮತ್ತು ಟ್ಯಾಕ್ಸಿ ಚಾಲಕರಿಗೆ ಇ.ಎಸ್.ಐ., ಪಿ.ಎಫ್., ಪಿಂಚಣಿ, ಇಂತಹ ಯಾವುದೇ ಸಾಮಾಜಿಕ ಸುರಕ್ಷಾ ಸೌಲಭ್ಯಗಳಿಲ್ಲ. ಟೋಲ್‌ಗಳ ಶುಲ್ಕಗಳ ಏರಿಕೆ, ಇನ್ಸೂರೆನ್ಸ್ ಪ್ರೀಮಿಯಂ ಶೇ. ೧೦೦ಕ್ಕಿಂತ ಹೆಚ್ಚು. ಹೀಗೆ ಸಾರಿಗೆ ಕ್ಷೇತ್ರದಲ್ಲಿ ದುಡಿಯುವವರಿಗೆ ಮತ್ತು ಸಾಮಾನ್ಯ ಜನರಿಗೆ ದುಸ್ಥಿತಿಯಲ್ಲಿರುವ ಸಮಸ್ಯೆಗಳ ಮೂಲವನ್ನು ಭೇದಿಸಲು ನಗರ ವಿಕೇಂದ್ರೀಕರಣ ಯೋಜನೆಗಳನ್ನು ಜಾರಿಗೆ ತರುವುದು ಹಾಗೂ ಸಾರಿಗೆ ಕ್ಷೇತ್ರದ ಅಸಂಘಟಿತ ಜನತೆಗೆ ಸಾಮಾಜಿಕ ಭದ್ರತೆ ಒದಗಿಸದೆ 'ಗುಬ್ಬಿ ಮೇಲೆ ಬ್ರಹ್ಮಾಸ್ತ್ರ' ಎಂಬಂತೆ ಕೇಂದ್ರ ಸರಕಾರ 'ಮೋಟಾರು ವಾಹನ (ತಿದ್ದುಪಡಿ) ಮಸೂದೆ–೨೦೧೭'ಯನ್ನು ಜಾರಿಗೊಳಿಸಲು ಮುಂದಾಗಿದೆ.

"ರಸ್ತೆ ಸುರಕ್ಷತೆ ಮತ್ತು ಅಪಘಾತಗಳನ್ನು ತಡೆಗಟ್ಟುವ ಉದ್ದೇಶಕ್ಕಾಗಿ ಮಸೂದೆ" ಹೆಸರಲ್ಲಿ ಅಮಾನವೀಯವಾಗಿ ದಂಡ ವಸೂಲಿಗೆ ಮುಂದಾಗಿರುವುದು ಕೇಂದ್ರ ಸರಕಾರದ ಧೋರಣೆಯನ್ನು ಪ್ರದರ್ಶಿಸುತ್ತದೆ.

ದುಬಾರಿ ದಂಡಗಳಿಂದ ಪಾರಾಗಲು, ದುಬಾರಿ ಹಣ ನೀಡಿ ಎಫ್.ಸಿ., ಖಾಸಗಿ ಕಂಪನಿಗಳ ಅಧಿಕೃತ ಏಜೆನ್ಸಿ ಯಾಂತ್ರೀಕೃತ ಟೆಸ್ಟಿಂಗ್‌ಅನ್ನು ಸ್ಟೇಷನ್‌ಗಳಲ್ಲಿ ಮಾಡಿಸಬೇಕು. ಅದರಿಂದಲೇ ಸರ್ಟಿಫಿಕೇಟ್ ಪಡೆಯಬೇಕು, ವಾಹನಗಳು ಸುಸ್ಥಿತಿಯಲ್ಲಿದ್ದರೂ ಉತ್ಪಾದಕ ಕಂಪನಿಗಳ ಮಾನದಂಡಗಳಿಗೆ ಅನುಗುಣವಾಗಿರಬೇಕು. ಇಲ್ಲವಾದಲ್ಲಿ ದುಬಾರಿ ಹಣ ವ್ಯಯಿಸಬೇಕು.

ವಾಹನ ತಯಾರಕರು, ಮಾರಾಟಗಾರರು, ಏಕಸ್ವಾಮ್ಯವನ್ನು ಹೊಂದಲು ಈ ಪ್ರಾಸ್ತಾವಿಕ ಕಾಯಿದೆ ಅವಕಾಶ ಮಾಡಿಕೊಡುತ್ತದೆ. ಸರಕಾರಿ ಆರ್.ಟಿ.ಓ. ಕಛೇರಿಗಳು ಹಲ್ಲು ಕಿತ್ತ ಹಾವಿನಂತೆ ಆಗುತ್ತವೆ. ಮುಂದಿನ ದಿನಗಳಲ್ಲಿ 'ನೋಂದಣಿ ಅಧಿಕಾರಿ' ಕಛೇರಿಗಳು ಖಾಸಗಿ ಕಂಪನಿಗಳ ಪಾಲಾಗುತ್ತವೆ.

ಸಾರಿಗೆ ಕ್ಷೇತ್ರದಲ್ಲಿ 'ಮೋಟಾರು ವಾಹನ (ತಿದ್ದುಪಡಿ) ಮಸೂದೆ–೨೦೧೭'ಅನ್ನು ಹಿಂಪಡೆಯಬೇಕೆಂದು ಅಸಂಘಟಿತ ಸಾರಿಗೆಯ ದುಡಿಯುವ ಜನತೆಗೆ ಸುರಕ್ಷಾ ಕಾಯ್ದೆ ಜಾರಿಗೆ ತಂದು, ಸಾರ್ವಜನಿಕರಿಗೂ ಅನುಕೂಲಕರ ನೀತಿಗಳನ್ನು ರೂಪಿಸಬೇಕೆಂದು ರಾಷ್ಟ್ರವ್ಯಾಪಿ ಸಾರಿಗೆ ಕ್ಷೇತ್ರದಲ್ಲಿನ ದುಡಿಯುವ ಜನರು ಮುಷ್ಕರ ನಡೆಸುತ್ತಿದ್ದಾರೆ. ಪ್ರಜ್ಞಾವಂತ ಜನತೆ ಇಂತಹ ಜನಮುಖಿ ಚಳುವಳಿಯನ್ನು ಬೆಂಬಲಿಸಬೇಕು.

*ಬೆಂಗಳೂರು* ***ಬಿ. ರಾಜಶೇಖರಮೂರ್ತಿ***

✉ 'ಹೊಸತು' ಮಾಸಿಕ ಹದಿ ವಯಸ್ಸು ದಾಟಿ ೨೦ರ ಪ್ರಾಯಕ್ಕೆ ಕಾಲಿಟ್ಟಿರುವುದು ನನ್ನ ದೃಷ್ಟಿಯಲ್ಲಿ ಒಂದು ವಿಶೇಷವಾದ ಘಟ್ಟ ಎಂದು ಪರಿಗಣಿಸುತ್ತೇನೆ... ಕಾರಣ, ಇಂದಿನ ಡಿಜಿಟಲ್ ಯುಗದಲ್ಲಿ, ಮುದ್ರಣ ಮಾಧ್ಯಮ ತನ್ನ ಅಸ್ತಿತ್ವಕ್ಕೆ ಎದುರಿಸುತ್ತಿರುವ ಕಠೋರ ಪೈಪೋಟಿ ಹಾಗೂ ಕ್ಷೀಣಿಸುತ್ತಿರುವ ಓದುಗರ ಹಿನ್ನೆಲೆಯಲ್ಲಿಯೂ ಪತ್ರಿಕೆ ನಿರಂತರವಾಗಿ ಬೆಳೆದಿರುವುದು, ಬೆಳೆಯುತ್ತಿರುವುದು. ಜೀವನದ ಸಂಧ್ಯಾಕಾಲದಲ್ಲಿರುವ ನನಗೆ ಖುಷಿ ತಂದಿದೆ. ಇಂತಹ ಬದಲಾದ ಸನ್ನಿವೇಶದಲ್ಲಿ 'ಹೊಸತು' ಮಾಸಿಕ ಪತ್ರಿಕೆ ಓದುಗರನ್ನು ಹೆಚ್ಚಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಲಿ ಎಂದು ತುಂಬು ಹೃದಯದಿಂದ ಹಾರೈಸುತ್ತೇನೆ.

ಆಗಸ್ಟ್ ೨೦೧೮ರ ಸಂಚಿಕೆಯಲ್ಲಿ ಶ್ರೀ ಸಿ. ಆರ್. ಕೃಷ್ಣರಾವ್ ಅವರ 'ಪತ್ರಿಕೆ ನಡೆಸುವ ಹಾದಿ ಸುಗಮವಲ್ಲ' ಎಂಬ ಅನುಭವ ಲೇಖನಕ್ಕೆ ಸಹಮತ ಸೂಚಿಸಲು ಮುಂದಾಗುತ್ತ ಮುಂದಿನ ದಿನಗಳಲ್ಲಿ ಮುದ್ರಣ ಮಾಧ್ಯಮದ ಪ್ರಾಮುಖ್ಯತೆಯ ಬಗ್ಗೆ ಮುದ್ರಣ ಮಾಧ್ಯಮದ ಅನುಕೂಲತೆಯ ಬಗ್ಗೆ, ಹೆಚ್ಚು ಒತ್ತು ನೀಡಿ ಸಮಾಜಕ್ಕೆ ಮುಟ್ಟಿಸುವಲ್ಲಿ 'ಹೊಸತು' ಯಶಸ್ಸು ಕಾಣಲಿ.

ಮಾಸಿಕದ ಸಂಪಾದಕ ಮಂಡಳಿಯನ್ನು, ಓದುಗರನ್ನು, ವೃತ್ತಿಪರ ಲೇಖಕರನ್ನು, ಹವ್ಯಾಸಿ ಲೇಖಕರನ್ನು, ಜಾಹೀರಾತುಗಾರರನ್ನು ಹಾಗೂ ಪತ್ರಿಕೆಯ ಬೆಳವಣಿಗೆಯಲ್ಲಿ ಹೆಗಲು ನೀಡಿರುವ ಸಕಲರಿಗೂ ಅಭಿನಂದಿಸುವ ಬೆನ್ನಲ್ಲೇ ನನ್ನ ಮನದಾಳದ ಮಾತೊಂದನ್ನು (ಫಿರ್ಯಾದು ಎಂದೇ ಭಾವಿಸಿ!!!) ತಮ್ಮಲ್ಲಿ ಹಂಚಿಕೊಳ್ಳದೆ ಈ ನನ್ನ ಅಭಿಪ್ರಾಯವನ್ನು ಮುಕ್ತಾಯ ಮಾಡುವಂತಿಲ್ಲ.

ನಮ್ಮ ದೇಶದ ಸರಾಸರಿ ಸಾಕ್ಷರತೆಯ ಮಟ್ಟ ಶೇಕಡ ೭೪ ಇದ್ದು, ಕೇರಳ ರಾಜ್ಯ ಮುಂಚೂಣಿಯಲ್ಲಿ ಹಾಗೂ ಬಿಹಾರ ಅತ್ಯಂತ ಹಿಂದುಳಿದಿರುವ ರಾಜ್ಯವಾಗಿದೆ. ಕರ್ನಾಟಕದಲ್ಲಿ ಇದು ಶೇಕಡ ೭೫ರಷ್ಟಿದ್ದರೂ ಸಹ ಮಹಿಳೆಯರ ಸಾಕ್ಷರತೆ ಅತ್ಯಂತ ಕೆಳಮಟ್ಟದಲ್ಲಿ, ಅಂದರೆ ಶೇಕಡ ೬೮ರಷ್ಟಿದ್ದು ಅಭಿವೃದ್ಧಿ ವಂಚಿತವಾಗಿರುವ ಗ್ರಾಮೀಣ ಭಾಗವೇ ಮಹಿಳೆಯರ ಈ ಕೆಳಮಟ್ಟದ ಸಾಕ್ಷರತೆಗೆ ಕಾರಣೀಭೂತವಾಗಿರಬಹುದು. ಅಂದರೆ, ಕನ್ನಡ ನಾಡಿನ ಗ್ರಾಮೀಣ ಭಾಗ ಮೂಲಭೂತ ಸೌಕರ್ಯಗಳನ್ನು ಪಡೆಯುವಲ್ಲಿ ಸತತವಾಗಿ ಹಿಂದೆ ಬಿದ್ದಿರುವ ಹಾಗೆ ಮಹಿಳೆಯರ ಸಾಕ್ಷರತೆಯಲ್ಲಿಯೂ ಕಡೆಗಣನೆಗೆ ಗುರಿಯಾಗಿರುವುದು ನಾಡಿನ ಜನತೆಗೆ, ವಿಶೇಷವಾಗಿ ಮಹಿಳೆಯರಿಗೆ ತಲೆ ತಗ್ಗಿಸುವ ಹಾಗೆ ಮಾಡಿದೆ. ಈ ಅಂಕಿ – ಅಂಶಗಳಲ್ಲಿನ ಸತ್ಯಾಸತ್ಯತೆಯನ್ನು ಪ್ರಶ್ನೆ ಮಾಡದೆ ಹೋದರೂ, ವಾಸ್ತವದಲ್ಲಿ ಗ್ರಾಮೀಣ ಭಾಗದಲ್ಲಿನ ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ನೋಂದಣಿಯಲ್ಲಿ ಇಳಿಕೆ, ಬಹುತೇಕ ಪತ್ರಿಕೆಗಳಲ್ಲಿ, ಮಾಸಿಕಗಳಲ್ಲಿ, ನಿಯತಕಾಲಿಕಗಳಲ್ಲಿ ಹವ್ಯಾಸಿ, ವೃತ್ತಿಪರ ಬರಹಗಾರರು – ಬಹುತೇಕರು ನಗರ, ಪಟ್ಟಣ ಪ್ರದೇಶದಲ್ಲಿ ವಾಸಿಸುವವರೇ ಎಂದರೆ ಅತಿಶಯೋಕ್ತಿಯಾಗದು! ಅಂದಮಾತ್ರಕ್ಕೆ ಗ್ರಾಮೀಣ ಭಾಗದ ಮಂದಿಗೆ ವಿಚಾರಗಳ ಅರಿವು ಇರುವುದಿಲ್ಲ ಎಂದರ್ಥವಲ್ಲ! ಗ್ರಾಮೀಣ ಭಾಗದ ಮಂದಿ ಮಾಹಿತಿ ಸಂಗ್ರಹದಲ್ಲಿ ಆಸಕ್ತಿ ಹೊಂದಿರುವುದಿಲ್ಲ ಎಂದರ್ಥವಲ್ಲ! ಈ ಸಾಮಾನ್ಯ ವಿಶ್ಲೇಷಣೆಯೊಂದಿಗೆ ತಮ್ಮಲ್ಲಿ ಮನವಿ ಮಾಡುವುದೇನೆಂದರೆ ಗ್ರಾಮೀಣ ಭಾಗದ ಬರಹಗಾರರ ಲೇಖನಗಳ ಪ್ರಕಟಣೆಗೆಂದೇ ಒಂದೆರಡು ಪುಟಗಳನ್ನು ಸಂಪೂರ್ಣವಾಗಿ ಮೀಸಲಿಡಬಹುದೇ 'ಹೊಸತು' ಮಾಸಿಕ? ಎರಡು ದಶಕಗಳ ಸುದೀರ್ಘ ಅನುಭವ ಹೊಂದಿರುವ ಹೊಸತು ಸಂಪಾದಕ ಮಂಡಳಿ ಈ ನಿಟ್ಟಿನಲ್ಲಿ ಗಮನ ಹರಿಸಲಿ, ಗ್ರಾಮೀಣ ಭಾಗದ ಮಂದಿಗೆ ಪ್ರೋತ್ಸಾಹ ನೀಡುವಲ್ಲಿ ಯೋಜನೆಗಳನ್ನು ರೂಪಿಸಿ ತನ್ನ ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸಲಿ, ಗ್ರಾಮೀಣ ಭಾಗದಲ್ಲಿ 'ಹೊಸ ಚಿಗುರು' ಮೂಡಿ, ಕ್ರಮೇಣ ಹೆಮ್ಮರವಾಗಿ ಬೆಳೆಯಲಿ ಎಂದು ಹಾರೈಸುತ್ತೇನೆ!

*ಬೆಂಗಳೂರು* ***ಸುಶೀಲಾ ಬಿ. ಆರ್. ರಾಮಣ್ಣ***



# ಕೌಟಿಲ್ಯನ ಅರ್ಥಶಾಸ್ತ್ರ
## ಒಂದು ಟಿಪ್ಪಣಿ

ವಿಶಾಖದತ್ತನ ‘ಮುದ್ರಾರಾಕ್ಷಸ’ ಎಂಬ ನಾಟಕದಲ್ಲಿ “ಕೌಟಿಲ್ಯಃ ಕುಟಿಲಮತಿಃ” ಎಂದು ಕೌಟಿಲ್ಯನನ್ನು ಛೇಡಿಸಲಾಗಿದೆ. ವಿಷ್ಣುಗುಪ್ತ ಮತ್ತು ಚಾಣಕ್ಯ ಎಂಬ ಹೆಸರುಗಳನ್ನೂ ಅವನಿಗೆ ನೀಡಲಾಗಿದೆ. ‘ಅರ್ಥಶಾಸ್ತ್ರ’ ಎಂಬ ಗ್ರಂಥದ ಕರ್ತೃ ವಿಷ್ಣುಗುಪ್ತನು ಚಂದ್ರಗುಪ್ತ ಮೌರ್ಯನ ಸಮಾಕಾಲೀನನೆ? ನಂದರ ಸಾಮ್ರಾಜ್ಯವನ್ನು ಅಳಿಸಿಹಾಕಿ ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಲು ಕಾರಣನಾದನೆಂದು ಹೇಳಲಾಗುವ ಚಾಣಕ್ಯನು ಇದೇ ವಿಷ್ಣುಗುಪ್ತನಿರಬಹುದೆ? ಅವನಿಗೆ ಕೌಟಿಲ್ಯನೆಂಬ ಹೆಸರೂ ಇದ್ದಿತೆ? ಹಾಗಿದ್ದರೆ ಆ ಹೆಸರು ಬಂದಿದ್ದೇಕೆ? ಇವೆಲ್ಲಾ ಪ್ರಶ್ನೆಗಳಿಗೆ ಸಮಂಜಸ ಉತ್ತರಗಳಿಲ್ಲ, ಆದರೆ ‘ಅರ್ಥಶಾಸ್ತ್ರ’ ಎಂಬ ಗ್ರಂಥದ ಪರಾಮರ್ಶೆಗೆ ಅದರಿಂದ ತೊಡಕುಗಳು ಇದ್ದಂತೆ ತೋರುವುದಿಲ್ಲ.

**ಡಾ॥ ಜಿ. ರಾಮಕೃಷ್ಣ**

ಮೈಸೂರಿನ ಮಹಾರಾಜ ಕೃಷ್ಣರಾಜೇಂದ್ರ ಒಡೆಯರ್ ಒಮ್ಮೆ ವಿದೇಶ ಪ್ರವಾಸಕ್ಕೆ ತೆರಳಿದ್ದಾಗ ಯಾರೋ ಒಬ್ಬ ವಿದ್ವಾಂಸನಿಗೆ ಅವರನ್ನು ಪರಿಚಯ ಮಾಡಿಕೊಡಲಾಯಿತಂತೆ. “ಓಹೋ, ನೀವು ಮೈಸೂರಿನ ಮಹಾರಾಜರೇನು? ಅದೇ, ಡಾ॥ ಆರ್. ಶಾಮಾಶಾಸ್ತ್ರಿ ಇದ್ದಾರಲ್ಲ, ಅವರ ಮೈಸೂರೇ ಏನು ನಿಮ್ಮದು?” ಎಂದು ಆತ ಕೇಳಿದನಂತೆ. ಪಾಪ, ಮಹಾರಾಜರಿಗೆ ಶಾಮಾಶಾಸ್ತ್ರಿಗಳು ಅಷ್ಟಾಗಿ ಗೊತ್ತಿರಲಿಲ್ಲ. ವಿದ್ವಾಂಸನೇ ಹೇಳಿದನಂತೆ: “ಅರ್ಥಶಾಸ್ತ್ರ ಎಂಬ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ, ಬಹಳ ಸ್ವಾರಸ್ಯಕರವಾದ ಗ್ರಂಥ ಅದು”, ಎಂದು. ಮೈಸೂರಿಗೆ ಹಿಂದಿರುಗಿದನಂತರ ಈ ಶಾಮಾಶಾಸ್ತ್ರಿಗಳು ಯಾರೆಂದು ತಿಳಿದು ಅವರನ್ನು ಮಹಾರಾಜರು ಬರಮಾಡಿಕೊಂಡರಂತೆ. “ನೀವು ನಮ್ಮ ರಾಜ್ಯವನ್ನು ವಿದೇಶಗಳಿಗೆ ಪರಿಚಯಿಸಿದ್ದೀರಿ. ಆ ಬಗ್ಗೆ ನಮಗೆ ಬಹಳ ಹೆಮ್ಮೆ ಇದೆ. ಆದರೆ ನಮಗೆ ನಿಮ್ಮ ಬಗ್ಗೆ ತಿಳಿದಿರಲಿಲ್ಲ, ಕ್ಷಮಿಸಿ” ಎಂದರಂತೆ ಮಹಾರಾಜರು. ೧೯೦೯ರಲ್ಲಿ ಮೊಟ್ಟಮೊದಲಿಗೆ ಅರ್ಥಶಾಸ್ತ್ರ ಗ್ರಂಥವನ್ನು ಪ್ರಕಟಿಸಿದ ಕೀರ್ತಿ ಶಾಮಾಶಾಸ್ತ್ರಿಗಳದು. ‘ದಶಕುಮಾರ ಚರಿತ’ ಎಂಬ ಸಂಸ್ಕೃತ ಗದ್ಯಗ್ರಂಥದಿಂದ ಹಿಡಿದು ಅನೇಕ ಸಂಸ್ಕೃತ ಗ್ರಂಥಗಳಲ್ಲಿ ಅರ್ಥಶಾಸ್ತ್ರದ ಬಗ್ಗೆ ಪ್ರಸ್ತಾಪವಿದ್ದಿತಾದರೂ ಆ ಗ್ರಂಥವು ಲಭ್ಯವಿರಲಿಲ್ಲ. ಮೈಸೂರಿನಲ್ಲಿರುವ ಇಂದಿನ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯ ಅಂದಿನ ಮುಖ್ಯಸ್ಥರಾಗಿದ್ದ ಡಾ॥ ಶಾಮಾಶಾಸ್ತ್ರಿಗಳು ಅದರ ಹಸ್ತಪ್ರತಿಯೊಂದನ್ನು ಕಂಡಾಗ, ಕೂಡಲೆ ವಿದ್ವತ್ಪೂರ್ಣ ಮುನ್ನುಡಿಯೊಂದಿಗೆ ಅದನ್ನು ಪ್ರಕಟಿಸಿದರು, ನಂತರ ಅದೇ ಗ್ರಂಥದ ಬೇರೆ ಹಸ್ತಪ್ರತಿಗಳು ಬೇರೆಡೆಗಳಲ್ಲಿಯೂ ದೊರೆತು ಪ್ರಕಟಗೊಂಡವು. ಜರ್ಮನ್ ಭಾಷೆಯೂ ಸೇರಿದಂತೆ ಅದು ಹಲವು ಭಾಷೆಗಳಿಗೆ ಅನುವಾದಗೊಂಡಿತು. ಸ್ವತಃ ಶಾಮಾಶಾಸ್ತ್ರಿಗಳೇ ಅದರ ಮೊದಲ ಆಂಗ್ಲ ಅನುವಾದವನ್ನು ಪ್ರಕಟಿಸಿದ್ದರು. ೧೯೦೯, ೧೯೧೯ ಮತ್ತು ೧೯೨೪, ಹೀಗೆ ಗ್ರಂಥದ ಮೂರು ಆವೃತ್ತಿಗಳು ಡಾ॥ ಆರ್. ಶಾಮಾಶಾಸ್ತ್ರಿಗಳ ನಿರ್ದೇಶಕತ್ವದಲ್ಲಿ ಹೊರಬಂದುವು. ತಿರುವನಂತಪುರದ ಟಿ. ಗಣಪತಿಶಾಸ್ತ್ರಿ ತಮಗೆ ದೊರೆತ ಹಸ್ತಪ್ರತಿಯನ್ನಾಧರಿಸಿ ಅದನ್ನು ಪ್ರಕಟಿಸುವಾಗ ಅದಕ್ಕೆ ಸಂಸ್ಕೃತ ಮತ್ತು ಮಲಯಾಳಂ ವ್ಯಾಖ್ಯಾನಗಳನ್ನೂ ಬರೆದಿದ್ದರು. ತರುವಾಯದಲ್ಲಿ ಪ್ರಾಚೀನವಾದ ‘ಜಯಮಂಗಲ’ ಎಂಬ ಭಾಷ್ಯವೂ ದೊರೆತು ಪ್ರಕಟವಾಯಿತು. ಈ ಭಾಷ್ಯಕಾರನು ಕಾಮಸೂತ್ರ ಮತ್ತು ನೀತಿಸಾರ ಎಂಬ ಗ್ರಂಥಗಳಿಗೂ ಭಾಷ್ಯಗಳನ್ನು ರಚಿಸಿದ್ದುದುಂಟು. “ಚಾಣಕ್ಯ ನೀತಿ” ಎಂಬ ಬೇರೊಂದು ಗ್ರಂಥವಿದೆ; ಅದು ಸುಭಾಷಿತಗಳ ಸಂಗ್ರಹ ಅಷ್ಟೆ. ತನ್ನ ಗ್ರಂಥದ ಮೌಲ್ಯವನ್ನು ಕೃತಕವಾಗಿ ಹೆಚ್ಚಿಸಿಕೊಳ್ಳಲು ಕರ್ತೃವು ಅದಕ್ಕೆ ಚಾಣಕ್ಯನ ಹೆಸರನ್ನು ಜೋಡಿಸಿಬಿಟ್ಟಿದ್ದಾನೆ !

ನಂದವಂಶದ ಸಾಮ್ರಾಜ್ಯವನ್ನು ಬುಡಮೇಲು ಮಾಡಿ ಅದರ ಜಾಗದಲ್ಲಿ ಮೌರ್ಯರ ರಾಜ್ಯಭಾರವನ್ನು ಸ್ಥಾಪಿಸಲು ಚಾಣಕ್ಯ ಅಥವಾ ಕೌಟಿಲ್ಯ ಕಾರಣನಾದನೆಂಬ ಪ್ರತೀತಿ ಇದೆ. “ಮುರಾ” ಎಂಬ ಒಂದು ಸಾಮಾಜಿಕ ವಿಭಾಗದಿಂದ ಬಂದಿದ್ದ ಚಂದ್ರಗುಪ್ತನನ್ನು ಮೊದಲ ಮೌರ್ಯ ರಾಜನಾಗಿಸಿದ್ದು ಚಾಣಕ್ಯನೆಂದು ಹೇಳಲಾಗಿದೆ. “ಮುರಾ” ಎಂಬುದರ ಪದನಿಷ್ಪತ್ತಿಯ ಬಗ್ಗೆ ಡಾ॥ ಡಿ. ಎಲ್. ನರಸಿಂಹಾಚಾರ್ ಅವರು ೧೯೫೦ರ ಸುಮಾರಿನಲ್ಲಿ ಒಂದು ಸಂಶೋಧನಾ ಲೇಖನವನ್ನು ಪ್ರಕಟಿಸಿದ್ದರು. ಕೌಟಿಲ್ಯನ ಬಗ್ಗೆ ಹೆಚ್ಚು ಪ್ರಸಿದ್ಧಿ ಪಡೆದ ಕೃತಿಯೆಂದರೆ ವಿಶಾಖದತ್ತನ ನಾಟಕ ‘ಮುದ್ರಾರಾಕ್ಷಸ.’ ನಂದರ ಮಂತ್ರಿಯಾಗಿದ್ದ ಅಮಾತ್ಯರಾಕ್ಷಸನನ್ನು ಚಂದ್ರಗುಪ್ತ ಮೌರ್ಯನ ಮುಖ್ಯ ಸಚಿವವನ್ನಾಗಿಸದಿದ್ದರೆ ಮೌರ್ಯ ಆಳ್ವಿಕೆಯು ಉಳಿಯಲಾರದೆಂದು ತರ್ಕಿಸಿದ್ದ ಕೌಟಿಲ್ಯನು ಅಮಾತ್ಯರಾಕ್ಷಸನನ್ನು ತನ್ನ ಷಡ್ಯಂತ್ರದಿಂದ ಚಂದ್ರಗುಪ್ತನ ಮಂತ್ರಿಯನ್ನಾಗಿಸುವುದು ಆ ನಾಟಕದ ವಸ್ತುವಾಗಿದೆ. ಆದರೆ ಇದಾವುದರ ಸೂಚನೆಯೂ ‘ಅರ್ಥಶಾಸ್ತ್ರ’ದಲ್ಲಂತೂ ಇಲ್ಲ. ಅಂತೆಯೇ, ಅರ್ಥಶಾಸ್ತ್ರದಂಥ

ಬೇರೊಂದು ಗ್ರಂಥವೂ ಇಲ್ಲವೆಂದರೆ ತಪ್ಪಾಗಲಾರದು. ಅದನ್ನು ರಾಜ್ಯಾಡಳಿತದ ಕೈಪಿಡಿಯೆಂದು ಆಗಾಗ್ಗೆ ಹೇಳುವುದುಂಟು. ಮೌರ್ಯರ ಆಡಳಿತವು ಅರ್ಥಶಾಸ್ತ್ರದ ಸೂತ್ರಗಳಿಂದ ನಿರ್ದೇಶಿಸಲ್ಪಟ್ಟಿದ್ದಿತೆಂಬುದಕ್ಕೆ ಯಾವ ಪುರಾವೆಯೂ ಇಲ್ಲ. ಆಡಳಿತಕ್ಕೆ ಪ್ರಯೋಗಿಸಬಹುದಾದ ಕೆಲವು ಮೌಲಿಕ ಸೂತ್ರಗಳು ಇಲ್ಲಿವೆಯೆಂದು ಹೇಳಬಹುದಾದರೂ ಎಲ್ಲವನ್ನೂ ಯಥಾವತ್ತಾಗಿ ಪ್ರಯೋಗಿಸುವ ಸಾಧ್ಯತೆಯ ಬಗ್ಗೆ ಅನುಮಾನಗಳು ಮೂಡುತ್ತವೆ. ಇಟಲಿಯ ಪುನರುತ್ಥಾನದ ಕಾಲದಲ್ಲಿ ಮ್ಯಾಕಿಯಾವೆಲಿ (೧೪೬೭–೧೫೨೭) "ರಾಜಕುಮಾರ" ಎಂಬ ಗ್ರಂಥವನ್ನು ಬರೆದಿದ್ದ. ಅಧಿಕಾರವನ್ನು ಪಡೆದು ಅದನ್ನು ಉಳಿಸಿಕೊಳ್ಳಬೇಕಾದರೆ ರಾಜಕುಮಾರರು ಹೇಗೆ ವರ್ತಿಸಬೇಕಾಗಬಹುದು ಎಂಬುದನ್ನವನು ವಿಶದೀಕರಿಸುತ್ತಾನೆ. ಸ್ವಾರ್ಥದ ಅನೈತಿಕತೆಯು ಕಾರ್ಯಸಾಧುವಾಗಿಯೇ ತೀರುತ್ತದೆ ಎಂಬುದು ಅವನ ಪ್ರಮೇಯವಲ್ಲ. ಕೌಟಿಲ್ಯನನ್ನು ಅವನೊಡನೆ ಹೋಲಿಸುವುದು ರೂಢಿಯಲ್ಲಿದೆ. ಅದು ಅಷ್ಟೇನೂ ಸಮಂಜಸವಲ್ಲವೆಂದು ತೋರುತ್ತದೆ. ಆಡಳಿತವೇ ಆಗಲಿ, ಆಕ್ರಮಣವೇ ಆಗಲಿ, ಎಷ್ಟೆಷ್ಟು ಕ್ರಿಯಾ ಸಾಧ್ಯತೆಗಳಿರಬಲ್ಲವು ಎಂಬುದನ್ನಷ್ಟೇ ಗ್ರಂಥವು ಪ್ರತಿಪಾದಿಸುತ್ತದೆ. ಇಲ್ಲಿ ಸೂಚಿಸಲ್ಪಟ್ಟಿರುವ ವಿಧಾನಗಳನ್ನು ಯಶಸ್ವಿಯಾಗಿ ಅನುಸರಿಸಿದ್ದರೆ ನಮ್ಮ ದೇಶದ ಯಾವ ರಾಜರೂ ಯಾರ ವಿರುದ್ಧವೂ ಸೋಲಬೇಕಾಗಿರಲಿಲ್ಲ ಎನಿಸುವುದು ಸಹಜ, ಆದರೆ ನಮ್ಮ ಇತಿಹಾಸದಲ್ಲಿ ನಾವು ಸೋತಿರುವುದೇ ಹೆಚ್ಚು ಎಂಬುದಂತೂ ನಿಜ.

ವಿಷಯದ ದೃಷ್ಟಿಯಿಂದ ಅಗಾಧವಾದ ಕೃತಿ 'ಅರ್ಥಶಾಸ್ತ್ರ'. ಇಲ್ಲಿ ಚರ್ಚೆಗೆತ್ತಿಕೊಂಡಿರುವ ಶಾಸ್ತ್ರಗಳು ಅನೇಕ: ಆಯುರ್ವೇದ, ಧನುರ್ವೇದ, ರಸವಾದ, ಸಂಗೀತಾದಿ ಲಲಿತ ಕಲೆಗಳು, ಭೂಗರ್ಭಶಾಸ್ತ್ರ, ರತ್ನ ಪರೀಕ್ಷೆ, ಅಶ್ವವಿದ್ಯೆ, ಮುಂತಾದ ಹಲವು ಶಿಸ್ತುಗಳು ಇಲ್ಲಿ ಮೇಳೈಸಿವೆ. ಮೂಲತಃ ಮಾನವನ ಸ್ವಪ್ರಯತ್ನಕ್ಕೆ ಒತ್ತು ಕೊಡುವ ಗ್ರಂಥ ಇದು. ನಕ್ಷತ್ರಗಳು ಮತ್ತು ಗ್ರಹಗಳು ಯಾವುದೇ ವ್ಯಕ್ತಿಯ ಜೀವನವನ್ನು ನಿಯಂತ್ರಿಸುವುದು ಅಶಕ್ಯವೆಂಬ ದೃಢವಾದ ನಿಲುವು ಇಲ್ಲಿದೆ. "ಅರ್ಥಸಂಪಾದನೆಗೆ ಶುಭವಾದ ವಾರ, ನಕ್ಷತ್ರಗಳನ್ನು ವಿಚಾರಿಸುತ್ತಾ ಕುಳಿತವನು ಅಜ್ಞನೆನಿಸಿಕೊಳ್ಳುತ್ತಾನೆ; ಅರ್ಥವೇ ಅರ್ಥವನ್ನು ಪ್ರಕಾಶಿಸುವ ನಕ್ಷತ್ರ" ಎನ್ನುತ್ತದೆ ಈ ಗ್ರಂಥ (ನಕ್ಷತ್ರಮಿತಿ ಪೃಚ್ಛಂತಂ ಬಾಲಂ ಅರ್ಥಃ ಅತಿವರ್ತತೇ । ಅರ್ಥೋಽಹಿ ಅರ್ಥಸ್ಯ ನಕ್ಷತ್ರಂ ಕಿಂ ಕರಿಷ್ಯಂತಿ ತಾರಕಾಃ॥). ಈ ಗ್ರಂಥದಲ್ಲಿ 'ಅರ್ಥ' ಎಂದರೆ ಹಣವಲ್ಲ; ಅದು ಭೂಮಿಯನ್ನು ನಿರ್ದೇಶಿಸುವ ಪದ. ಗ್ರಂಥದ ಆರಂಭದ ಮಾತುಗಳಿವು: ನಮಃ ಶುಕ್ರ ಬೃಹಸ್ಪತಿಭ್ಯಾಂ। ಪೃಥಿವ್ಯಾಃ ಲಾಭೇ ಪಾಲನೇ ಚ ಯಾವಂತಿ ಅರ್ಥಶಾಸ್ತ್ರಾಣಿ ಪೂರ್ವಾಚಾರ್ಯೈಃ




ಪ್ರಸ್ಥಾಪಿತಾನಿ ಪ್ರಾಯಶಃ ತಾನಿ ಸಂಗೃಹ್ಯ ಏಕಮಿದಂ ಅರ್ಥಶಾಸ್ತ್ರಂ ಕೃತಂ॥ (ಶುಕ್ರಾಚಾರ್ಯ ಮತ್ತು ಬೃಹಸ್ಪತಿ, ಇಬ್ಬರೂ ಈ ಶಾಸ್ತ್ರದ ನಿರೂಪಕರು. ಭೂಮಿಯನ್ನು ಪಡೆಯುವುದು ಮತ್ತು ಪಡೆದದ್ದನ್ನು ಪಾಲಿಸುವುದು, ಇದೇ ರಾಜ್ಯಾಡಳಿತದ ಮೂಲೋದ್ದೇಶ. ಅದನ್ನು ಅನೇಕ ಪ್ರಾಚೀನ ಆಚಾರ್ಯರು ವಿವರಿಸಿ ಹೇಳಿದ್ದಾರೆ. ಅವನ್ನು ಸಂಗ್ರಹಿಸಿ ಪ್ರಸ್ತುತ ಗ್ರಂಥದ ರಚನೆಯಾಗಿದೆ.) ಗ್ರಂಥದ ಕೊನೆಯ ಭಾಗದಲ್ಲಿ ಬರುವ ೧೮೦ನೆಯ ಅಧಿಕರಣದಲ್ಲಿ ಇದನ್ನು ಮತ್ತೆ ಪ್ರಸ್ತಾಪಿಸಲಾಗಿದೆ: "ಮಾನವರ ಜೀವನಾಧಾರವು ಸಂಪತ್ತು, ಅಂದರೆ ಭೂಮಿ. ಅದನ್ನು ಪಡೆಯುವುದು ಮತ್ತು ಪೋಷಿಸುವುದು ಅರ್ಥಶಾಸ್ತ್ರದ ಮೂಲ ವಿಷಯ" (ಮನುಷ್ಯಾಣಾಂ ವೃತ್ತಿಃ ಅರ್ಥಃ, ಮನುಷ್ಯವತೀ ಭೂಮಿರಿತ್ಯರ್ಥಃ। ತಸ್ಯಾಃ ಪೃಥಿವ್ಯಾ ಲಾಭ ಪಾಲನೋಪಾಯಃ ಶಾಸ್ತ್ರಂ ಅರ್ಥಶಾಸ್ತ್ರಮಿತಿ॥).

ಇದರ ನಂತರ ಗ್ರಂಥದಲ್ಲಿ ವಿಶದೀಕರಿಸಲಾಗುವ ವಿಷಯಗಳ ಪಟ್ಟಿಯನ್ನು ನೀಡಲಾಗಿದೆ. ಅದನ್ನೇ ಇಂದು ನಮ್ಮ ಪುಸ್ತಕಗಳಲ್ಲಿ ವಿಷಯಾನುಕ್ರಮಣಿಕೆ ಎನ್ನುತ್ತೇವೆ. ಸಂಸ್ಕೃತ ಗ್ರಂಥಗಳಲ್ಲಿ ಈ ಪದ್ಧತಿಯು ಬಹಳ ಅಪರೂಪ. ಆದರೆ ಇಲ್ಲಿ ೧೫೦ ಅಧ್ಯಾಯಗಳಲ್ಲಿ ೧೮೦ ಪ್ರಕರಣಗಳನ್ನು ಮಂಡಿಸಲಾಗುವುದು ಎಂದು ಹೇಳಿ ಅಷ್ಟೂ ಪ್ರಕರಣ ಅಥವಾ ವಿಷಯಗಳನ್ನು ನಮೂದಿಸಲಾಗಿದೆ. ಪ್ರಕರಣಗಳನ್ನು ಅಧಿಕರಣವೆಂದು ಸಹ ಹೆಸರಿಸಲಾಗಿದೆ. ಅಷ್ಟನ್ನೂ ಇಲ್ಲಿ ಪಟ್ಟಿ ಮಾಡಲಾಗದು. ಉದಾಹರಣೆಗೆಂದು ಕೆಲವನ್ನು ಗಮನಿಸಬಹುದು: ಮಂತ್ರಿಗಳ ನೇಮಕ (ಅಧಿಕರಣ ೪), ಗೂಢಕಾರ್ಯಗಳಿಗೆ ನೇಮಕ (೭), ಶತ್ರು ಪಕ್ಷದವರನ್ನು ಓಲೈಸುವುದು (೧೦), ದೂತರು ಅನುಸರಿಸಬೇಕಾದ ಕ್ರಮಗಳು (೧೨), ರಾಜನಿಗೆ ನಿಯಮಗಳು (೧೬), ಕೃಷಿಯೇತರ ಭೂಮಿಯ ಬಳಕೆಯ ವಿಧಾನ (೨೦), ಅಧಿಕಾರಿಗಳಿಂದ ಆದಾಯದ ದುರ್ಬಳಕೆ ಮತ್ತು ಅದರ ವಸೂಲಾತಿ (೨೬), ಕೋಶಾಗಾರಕ್ಕೆ ಬರುವ ರತ್ನಗಳ ಪರೀಕ್ಷೆ (೨೯), ಗಣಿ ಮತ್ತು ಕಾರ್ಖಾನೆಗಳ ಸ್ಥಾಪನೆ (೩೦), ವ್ಯಾಪಾರದ ಅಧೀಕ್ಷಕ (೩೪), ಕೃಷಿಯ ಅಧೀಕ್ಷಕ (೪೧), ಪ್ರಾಣಿಗಳ ಹತ್ಯೆಯ ಅಧ್ಯಕ್ಷ (೪೩), ಗಣಿಕೆಯರ ಅಧೀಕ್ಷಕ (೪೪),. ಸೇನಾಧ್ಯಕ್ಷ (೫೧), ಗೂಢಚಾರರ ಉಸ್ತುವಾರಿ (೫೫), ವಿವಾಹ, ಆಸ್ತಿವಿಭಾಗ, ಸ್ಥಿರಾಸ್ತಿ ನಿಯಂತ್ರಣ (೫೯–೬೧), ಆಸ್ತಿ ಸಂಬಂಧ (೭೦), ಜೂಜು – ಪಣ (೭೪), ಕನ್ಯೆಯರ ಮೇಲಿನ ಅತ್ಯಾಚಾರ (೮೭), ಶಾಂತಿ ಮತ್ತು ಯೋಜನೆ (೯೭), ಪ್ರಜೆಗಳ ಅಸಮಾಧಾನಕ್ಕೆ ಕಾರಣಗಳು (೧೦೯), ಶಾಂತಿ ಮತ್ತು ಯುದ್ಧ ನೀತಿಗಳು (೧೧೮), ಯುದ್ಧ ಸನ್ನಿವೇಶದ ಆಯಾಮಗಳು (೧೪೭–೧೫೯), ಶತ್ರುಪಾಳೆಯದಲ್ಲಿ ಅಶಾಂತಿಯ ಭುಗಿಲಿಗೆ ಕ್ರಮ (೧೭೧), ಮೌಢ್ಯಾಚರಣೆಯಿಂದ ತೆರಿಗೆ ಸಂಗ್ರಹ (೧೭೮–೧೭೯).

ಸಹಜವಾಗಿಯೇ ಈ ವಿಷಯಗಳನ್ನೆಲ್ಲಾ ವಿವರವಾಗಿ ಉಲ್ಲೇಖಿಸುವುದು ಸಾಧ್ಯವಾಗದ ಸಂಗತಿ. ಎರಡು ಪ್ರಮುಖ ಪ್ರತಿಪಾದನೆಗಳನ್ನು ವಿಶೇಷವಾಗಿ ಗಮನಿಸುವುದು ಪ್ರಸ್ತುತ ಲೇಖನದ ಉದ್ದೇಶ: (ಅ) ಅರ್ಥಶಾಸ್ತ್ರವು ಭೌತವಾದಿ ಪ್ರಕ್ರಿಯೆಗೆ ಮಾನ್ಯತೆ ನೀಡುತ್ತದೆ ಅಥವಾ ಬದ್ಧವಾಗಿದೆ; (ಆ) ತರ್ಕಬದ್ಧವಾದ ಚಿಂತನೆ ಅಥವಾ ವೈಚಾರಿಕತೆಯು ಅರ್ಥಶಾಸ್ತ್ರದ ಚಿಂತನಾ ಪದ್ಧತಿಯ ಹೂರಣ. ಆಳುವವರ ಮನೋಭಾವವು ಅದಕ್ಕೆ ತೆರೆದುಕೊಳ್ಳುವಂತಿರಬೇಕು, ಆದರೆ ಖಜಾನೆಯನ್ನು ತುಂಬಿಸಿಕೊಳ್ಳಲು ಅಧಿಕ ತೆರಿಗೆ ವಿಧಿಸುವ ಅವಶ್ಯಕತೆಯಿದ್ದರೆ ಆಳ್ವಿಕೆಗೆ ಒಳಗಾಗುವವರಲ್ಲಿ ಕೆಲವು ಮೂಢನಂಬಿಕೆಗಳನ್ನು, ಮೌಢ್ಯಾಚರಣೆಗಳನ್ನು, ಮನೆ ಮಾಡುವಂತೆ ಆಯೋಜಿಸುವುದು ನಿಷಿದ್ಧವಲ್ಲ.

ಇವೆರಡೂ ಪರಸ್ಪರ ವೈರುಧ್ಯದಿಂದ ಕೂಡಿರುವುದು ಸ್ಪಷ್ಟವಾಗಿದೆ. ರಾಜ್ಯಭಾರ ನಡೆಸುವವರಲ್ಲಿ ಅಂತಹ ವೈರುಧ್ಯವು ಅಸಹಜವಲ್ಲ. ಕೆಲವೇಳೆ ಅದು ಉತ್ತಮ ಸಾಧನ ಆಗಬಲ್ಲದು, ಅನಿವಾರ್ಯವೆನಿಸುವ ಯೋಜನೆಯೂ ಆಗಬಹುದು. ಪದ್ಯ, ಗದ್ಯ ಮತ್ತು ಸೂತ್ರ ರೂಪಗಳಲ್ಲಿ ಗ್ರಂಥವು ತನ್ನೆಲ್ಲ ವಿಚಾರಗಳನ್ನು ವಿಸ್ತರಿಸುವುದು ಇನ್ನೊಂದು ವಿಶೇಷ. ಸಾಮಾನ್ಯವಾಗಿ ಅವುಗಳಲ್ಲಿ ಯಾವುದಾದರೂ ಒಂದನ್ನು ಆಶ್ರಯಿಸಿ ಗ್ರಂಥ ರಚನೆ ಮಾಡುವುದು ರೂಢಿ. ಸಂಸ್ಕೃತದಲ್ಲಿ ಶಾಸ್ತ್ರಗ್ರಂಥಗಳು ಅದನ್ನು ನಿಯಮವೆಂಬಂತೆ ಪಾಲಿಸುತ್ತವೆ. ವಿಷ್ಣುಗುಪ್ತನ ಅರ್ಥಶಾಸ್ತ್ರವು ಅದಕ್ಕೊಂದು ಅಪವಾದ ಎಂಬಂತೆ ಮಿಶ್ರರೂಪದಲ್ಲಿ ನಿಬದ್ಧವಾಗಿದೆ.

ಮೊದಲ ಅಧ್ಯಾಯದಲ್ಲಿ ಗ್ರಂಥವು ಒಳಗೊಳ್ಳುವ ವಿಷಯಗಳನ್ನು ಸೂಚಿಸಿದ ತರುವಾಯ ಎರಡನೆಯ ಅಧ್ಯಾಯದಿಂದ ಗ್ರಂಥದ ವಿಸ್ತೃತ

ಚರ್ಚೆಯು ನಿರೂಪಣೆಗೊಳ್ಳುತ್ತದೆ ಎಂಬುದನ್ನು ನಾವೀಗಾಗಲೆ ನೋಡಿದ್ದೇವೆ. ಗ್ರಂಥದ ಪ್ರಕರಣ ಅಥವಾ ಅಧಿಕರಣಗಳು ಆರಂಭವಾಗುವುದು ಇಲ್ಲಿಂದಲೇ. ಅದನ್ನು ಎರಡನೆಯ ಅಧ್ಯಾಯವೆಂದು ಗುರುತಿಸಲಾಗಿದೆ ಮತ್ತು ಅದನ್ನು "ವಿದ್ಯಾ ಸಮುದ್ದೇಶ" ಎಂದು ಕರೆಯಲಾಗಿದೆ. "ತತ್ತ್ವಶಾಸ್ತ್ರದ ಅವಶ್ಯಕತೆಯ ವಿಚಾರ" (ಆನ್ವೀಕ್ಷಿಕೀ ಸ್ಥಾಪನಾ) ಎಂಬ ಶೀರ್ಷಿಕೆಯನ್ನು ಸಹ ನೀಡಲಾಗಿದೆ.

ಚರ್ಚೆ ಆರಂಭವಾಗುವುದು ಹೀಗೆ: 'ವಿದ್ಯೆ' ಎಂದರೆ ಅದರಲ್ಲಿ ಅಡಕಗೊಳ್ಳುವ ಶಿಸ್ತುಗಳು ಯಾವುವು? ಅವು ನಾಲ್ಕು: ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಶ್ಚ ಇತಿ ವಿದ್ಯಾ॥ ಅಂದರೆ, ತತ್ತ್ವಶಾಸ್ತ್ರ – ಮೂರು ವೇದಗಳು – ವಿತ್ತಶಾಸ್ತ್ರ (ಅರ್ಥಶಾಸ್ತ್ರ) ಮತ್ತು ದಂಡನೀತಿ (ರಾಜ್ಯಶಾಸ್ತ್ರ), ಈ ನಾಲ್ಕು ವಿದ್ಯೆಗಳು ಎನಿಸಿಕೊಳ್ಳುತ್ತವೆ. ಬಹುಶಃ ಒಬ್ಬ ರಾಜನಿಗೆ ಅಪೇಕ್ಷಣೀಯವಾದ ವಿದ್ಯಾಶಾಖೆಗಳು ಇವು. (ವಿಷ್ಣುಗುಪ್ತ ಅಥವಾ ಕೌಟಿಲ್ಯನ ಈ ತಿಳಿವಳಿಕೆಗೆ ಭಿನ್ನವಾಗಿ) ಮನುಸಂಪ್ರದಾಯದವರು ತತ್ತ್ವಶಾಸ್ತ್ರವನ್ನು ಕೈಬಿಟ್ಟು ಇನ್ನುಳಿದ ಮೂರನ್ನು ಮಾತ್ರ ಮಾನ್ಯ ಮಾಡುತ್ತಾರೆ. (ಈ ಮನುವು ಬೇರೆ, ಮನುಸ್ಮೃತಿಯ ಮನು ಬೇರೆ, ಏಕೆಂದರೆ ಆ ಮನುವು ಕೌಟಿಲ್ಯನು ಹೇಳಿರುವ ನಾಲ್ಕನ್ನೂ 'ವಿದ್ಯೆ'ಯೆಂದು ಪರಿಗಣಿಸುತ್ತಾನೆ; ೭.೪೩). ಅವರ ಪ್ರಕಾರ ಮೂರೇ ಸಾಕು, ಏಕೆಂದರೆ ತತ್ತ್ವಶಾಸ್ತ್ರವು ಅವರ ಪ್ರಕಾರ ತ್ರಯೀ (ಮೂರು ವೇದಗಳು) ಎಂಬುದರಲ್ಲಿ ಅಂತರ್ಗತವಾಗಿದೆ (ತ್ರಯೀ ವಿಶೇಷೋ ಹಿ ಆನ್ವೀಕ್ಷಿಕೀ ಇತಿ).

"ಅರ್ಥಶಾಸ್ತ್ರ"ದ ವೈಶಿಷ್ಟ್ಯವನ್ನು ಇದರಿಂದ ಅರ್ಥ ಮಾಡಿಕೊಳ್ಳಬೇಕು. ಬೇರೆ ಪಂಥಗಳವರು ಉಪೇಕ್ಷೆಗೆ ಗುರಿಮಾಡಿದ ಆನ್ವೀಕ್ಷಿಕೀ ಕೌಟಿಲ್ಯನಿಗೆ ಪ್ರಧಾನವಾದ್ದು. "ಯಾವುದರಿಂದ ಮುಂದಿನ ಒಂದು ತಿಳುವಳಿಕೆ ಮೂಡುತ್ತದೋ" ಅದು ಆನ್ವೀಕ್ಷಿಕೀ. ಇದು ತರ್ಕಶಾಸ್ತ್ರದ ಒಂದು ಹೆಸರು. ತರ್ಕದಲ್ಲಿ ಅನುಮಾನ ಪ್ರಮಾಣಕ್ಕೆ ವಿಶೇಷವಾದ ಮಹತ್ವವಿದೆ, ಏಕೆಂದರೆ ಅಲ್ಲಿ ಕಾರ್ಯ – ಕಾರಣ ಸಂಬಂಧದ ನಿಷ್ಕೃಷ್ಟ ವಿವೇಚನೆ ಇರುತ್ತದೆ. "ಬೆಟ್ಟದಲ್ಲಿ ಹೊಗೆ ಕಾಣಿಸುತ್ತಿದೆ, ಆದ್ದರಿಂದ ಬೆಟ್ಟದಲ್ಲಿ ಬೆಂಕಿ ಬಿದ್ದಿದೆ" ಎಂಬುದು ಅನುಮಾನ ಪ್ರಮಾಣಕ್ಕೆ ಒಂದು ಸರಳ ಉದಾಹರಣೆ. ಪ್ರತ್ಯಕ್ಷವಾಗಿ ಕಾಣುವುದು ಹೊಗೆ; ಅದನ್ನನುಸರಿಸಿ ಬೇರೊಂದರ ಜ್ಞಾನವನ್ನು ಪಡೆಯುವುದು ಅಥವಾ ತರ್ಕಿಸುವುದು 'ಆನ್ವೀಕ್ಷಿಕೀ.' ಮೀಮಾಂಸಾ ಮತ್ತು ವೇದಾಂತದ ತತ್ತ್ವಶಾಸ್ತ್ರ ಶಾಖೆಗಳು ವೈದಿಕ ಸಾಹಿತ್ಯದ ಉಕ್ತಿಗಳನ್ನು ಆಧರಿಸಿರುತ್ತವೆ. "ಬೃಹದಾರಣ್ಯಕ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯನು 'ವಿಜ್ಞಾತಾರಂ ಅರೇ ಕೇನ ವಿಜಾನೀಯಾತ್' ಎಂದು ಹೇಳಿದ್ದಾನೆ (ಎಲ್ಲವನ್ನೂ ತಿಳಿಯುವವನನ್ನು ಯಾವುದರಿಂದ ತಿಳಿಯಲಾದೀತು?), ಆದ್ದರಿಂದ ಅದಕ್ಕೆ ಬೇರೊಂದು ಪ್ರಮಾಣದ ಅಗತ್ಯವಿಲ್ಲ" ಎನ್ನುವುದು ವೇದಾಂತ. ವೈದಿಕ ಸಾಹಿತ್ಯದ ಅಧಿಕಾರವಾಣಿಗೆ ಮನ್ನಣೆಯೇ ವಿನಾ ಕಾರ್ಯ–ಕಾರಣ ಸಂಬಂಧದ ತಿಳಿವಳಿಕೆಗಲ್ಲ ಎಂಬ ಚಿಂತನಾ ಶಾಖೆಗಳಿಗೆ "ತ್ರಯೀ" ಸಾಕು, ಆದರೆ ಅದಕ್ಕಿಂತಲೂ ಆನ್ವೀಕ್ಷಿಕೀ ಹೆಚ್ಚು ಪ್ರಮುಖವೆಂಬುದು

# ವ್ಯಾಟ್ಸಾಪ್‌ಗೆ ನಮಸ್ಕಾರ



**ಈ** ವ್ಯಾಟ್ಸಾಪ್‌ನ
ಹೆತ್ತವರ್‍ಯಾರೋ
ಹಗಲು ರಾತ್ರಿ ಎನ್ನದೆ
ಬುಳುಕ್ ಬುಳುಕ್
ಅನ್ನುತ್ತಲೇ ಇರುತ್ತದೆ!

ಹುಟ್ಟುಹಬ್ಬ, ವಿವಾಹ
ವಾರ್ಷಿಕೋತ್ಸವ, ಹೆರಿಗೆ
ಅವಳಿಮಕ್ಕಳು, ಮಗನಿಗೆ
ಕೆಲಸ ಸಿಕ್ಕಿದ್ದು
ಮಗಳು ತಾನೇ
ಗಂಡು ಹುಡುಕಿಕೊಂಡಿದ್ದು

ವ್ಯಾಟ್ಸಾಪ್‌ನ ಜಾರು ಬಂಡೆಯಲ್ಲಿ
ಸಂದೇಶಗಳ ಟ್ರಾಫಿಕ್ ಜಾಮ್...

ಬೊಜ್ಜು ಕರಗಿಸಲು
ಸರಳ ಉಪಾಯಗಳು
ಈರುಳ್ಳಿ ಮೊದಲೇ
ಕತ್ತರಿಸಿಟ್ಟರೆ ಆಗುವ
ಅಪಾಯಗಳು
ಗಂಡನ ಮಂಡಿಯಿಂದ
ಪಾದದವರೆಗೆ ನೆಲೆಗೊಂಡ
ದೇವರುಗಳು
ಒತ್ತುತ್ತಾ ಬಂದರೆ,
ಹೆಂಡತಿಗೆ ಧನಲಕ್ಷ್ಮೀ
ಯೋಗ...

ಹೈಸ್ಕೂಲಿನಲ್ಲಿ ಹೇಳಿಕೊಳ್ಳಲಾಗದ
ಪ್ರೇಮದ ಅನಾವರಣ
ಬ್ರಹ್ಮಕಮಲ ಅರಳಿದಾಗ
ಗುಡ್‌ಮಾರ್ನಿಂಗ್, ಗುಡ್‌ನೈಟ್...

ಹಬೆಯಾಡುವ ಕಾಫಿ
ಚಿತ್ರಕಂಡು
ಮುನಿಸುಗಳ ಮಾಫಿ
ಎದೆಯಾಳದ ಮಾತುಗಳು
ಇಂಡಿಕೇಟರ್ ದೀಪಗಳಂತೆ
ಫಳಕ್ ಫಳಕ್ಕೆಂದು
ಹೊತ್ತಿ... ಆರಿ, ಹೊತ್ತಿ... ಆರಿ
ನಿಲುಗಡೆಗೆ ಜಾಗ ಹುಡುಕುತ್ತವೆ.

ದೇಶೋದ್ಧಾರ ಆದಾಯ ತೆರಿಗೆ
ಜೀವನ್ಮುಕ್ತಿಯ ಮಾರ್ಗ
ಬಿಗ್ ಬಜಾರಿನ ಮೆಗಾ ಕಡಿತ
ಗೆಳೆಯ ಕಳಿಸಿದ
ಸ್ಮೈಲೀ ನೋಡಿ
ಮೈ ಉರಿತ!!
ಎರಡು ಮಾತನಾಡಲು
ಇವರಿಗೇನು ನಾಲಗೆಗೆ
ಗರ ಬಡಿದಿದೆಯೆ?

ಮಸಾಲೆದೋಸೆ
ತಿನ್ನುವಾಗಲೂ ಎಡಗೈಯಲ್ಲಿ
ವ್ಯಾಟ್ಸಾಪ್‌ನ ತಂತಿ
ಮೀಟುತ್ತಾಳೆ...

ಇವಳೇ ಏನು
ನನ್ನ ಗೆಳತಿ?

ಇದು ನನ್ನ ಮೊಮ್ಮಗು
ಅದು ಪಕ್ಕದ ಮನೆಯವರದು
ಬಲು ಚೂಟಿ
ಈ ಸ್ಮೈಲೀ ನಾನೇ ತೆಗೆದಿದ್ದು
ಸ್ವಲ್ಪ ಸಣ್ಣ ಆಗಿಲ್ಲವಾ...?

ಮಹತಾಯಿ ಬೆಚ್ಚಗೆ
ಎರಡು ಮಾತು ಆಡುತ್ತೀಯಾ
ಕಣ್ಣಲ್ಲಿ ಕಣ್ಣು ನೆಟ್ಟು...
ಇಲ್ಲದಿದ್ದರೆ ಇದೋ ಹೊರಟೆ
ನಮಸ್ಕಾರ.

**ಬಿ. ಎಸ್. ಮಧುಮತಿ**
# ೨೧, ೧ನೇ 'ಸಿ' ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ಗಿರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

ಕೌಟಿಲ್ಯನ ನಿಲುವು. 'ಮಾನವ' ಶಾಖೆಯನ್ನು ಮೀರಿಸುವಂಥದು ಬೃಹಸ್ಪತಿ ಶಾಖೆ, ಏಕೆಂದರೆ ಅದರ ಪ್ರಕಾರ ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರಗಳೆರಡೇ ಜ್ಞಾನಶಾಖೆಗಳು; ತ್ರಯೀ ಎಂಬುದು ಕೇವಲ ಒಂದು ಹೊದಿಕೆ (ವಾರ್ತಾ ದಂಡನೀತಿಶ್ಚ ಇತಿ ಬಾರ್ಹಸ್ಪತ್ಯಾಃ – ಸಂವರಣಮಾತ್ರಂ ಹಿ ತ್ರಯೀ ಲೋಕಯಾತ್ರಾವಿದಃ ಇತಿ). ಲೋಕ ವ್ಯವಹಾರವನ್ನು ತಿಳಿದವರಿಗೆ 'ತ್ರಯೀ' ಏಕೆ ಬೇಕು? "ತನ್ನನ್ನು ಎಲ್ಲಿ ನಾಸ್ತಿಕನೆಂದುಬಿಡುತ್ತಾರೋ" ಎಂಬ ಅಂಜಿಕೆಯನ್ನು ದೂರಮಾಡಲು ಅದು ಬೇಕು. ಅದು ಬೃಹಸ್ಪತಿಯ ಅಭಿಮತ. ಲೋಕಾಯತವನ್ನು ಬೃಹಸ್ಪತಿ ಪ್ರಣೀತವೆಂದು ಹೇಳುವುದು ಈ ಕಾರಣಕ್ಕೇ ಇರಬಹುದು. ಏನೇ ಇರಲಿ, ಕೌಟಿಲ್ಯನು 'ವಿದ್ಯೆ' ಎಂದಾಗ "ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಶ್ಚ" ಎಂದು ನಾಲ್ಕನ್ನು ಗುರುತಿಸುತ್ತಾನೆ. ತ್ರಯೀ (ಮೂರು ವೇದಗಳು) ನೀಡುತ್ತವೆನ್ನಲಾದ ಜ್ಞಾನವು ಸಾಲದು, ಲೌಕಿಕ ಜ್ಞಾನಕ್ಕೆ ಆನ್ವೀಕ್ಷಿಕೀ ಸಹ ಅಗತ್ಯವೆನ್ನುವುದು ಅದರ ಇಂಗಿತ. "ತ್ರಯೀ" ಎಂದು ಮೂರು ವೇದಗಳನ್ನು ಅಂಗೀಕರಿಸುವಾಗ ನಾಲ್ಕನೆಯ ಅಥರ್ವವೇದವನ್ನು ದೂರೀಕರಿಸಲಾಗಿದೆ. ಅದಕ್ಕೆ ಕಾರಣ ಅದು ಅಗ್ನಿ, ಇಂದ್ರ, ವರುಣ, ಮುಂತಾದ ದೇವತೆಗಳನ್ನು ಮಾತ್ರವೇ ಶ್ಲಾಘಿಸದೆ ತಕ್ಮನ್ (ಜ್ವರ), ಶತ್ರುನಾಶನ, ವಾಜೀಕರಣ, ಯಕ್ಷ್ಮನಾಶನ, ಯಾತುಧಾನಕ್ಷಯಣ, ಮುಂತಾದುವನ್ನು ಒಳಗೊಂಡಿದೆ. ಇವೆಲ್ಲಾ ಪ್ರಾಚೀನ ಮಾಂತ್ರಿಕತೆಯ ಸೂಚಕಗಳು. ಅವನ್ನು ದೂರಮಾಡಿದವರು ಆನ್ವೀಕ್ಷಿಕೀಯನ್ನೂ ದೂರ ಸರಿಸಿದ್ದರು. ಆದರೆ ಧರ್ಮ ಮತ್ತು ಅರ್ಥಗಳ, ಅಥವಾ ದೈವಿಕ ಮತ್ತು ಲೌಕಿಕ ಉದ್ದೇಶಗಳ, ಸಾಧನೆಗೆ ನಾಲ್ಕು ವಿದ್ಯೆಗಳು ಅಗತ್ಯವೆಂದು ಕೌಟಿಲ್ಯನು ಅಭಿಪ್ರಾಯಪಟ್ಟಿದ್ದಾನೆ. (ತಾಭಿಃ ಧರ್ಮಾರ್ಥೌ ಯದ್ವಿದ್ಯಾತ್ ತದ್ವಿದ್ಯಾನಾಂ ವಿದ್ಯಾತ್ವಂ). ಒಂದೇ ಮಾತಿನಲ್ಲಿ ಹೇಳುವುದಾದರೆ, ಕೌಟಿಲ್ಯನು ಧರ್ಮ ಮತ್ತು ಧರ್ಮನಿರಪೇಕ್ಷ ಎಂಬ ಎರಡೂ ಬಗೆಯ ವಿದ್ಯೆಗಳನ್ನು ಮಾನ್ಯ ಮಾಡುತ್ತಾನೆ.

'ಅರ್ಥಶಾಸ್ತ್ರ' ಗ್ರಂಥದ ಮುಂದಿನ ಪ್ರತಿಪಾದನೆಯು ಇದನ್ನೇ ಇನ್ನೂ ಹೆಚ್ಚು ಪ್ರಖರವಾಗಿ ಮಂಡಿಸುತ್ತದೆ. ನಾಲ್ಕು ವಿದ್ಯೆಗಳಲ್ಲಿ ಆನ್ವೀಕ್ಷಿಕೀ ಸಹ ಒಂದು ಎಂದು ಸ್ಥಾಪಿಸಿದ ನಂತರ ಅದರಡಿ ಬರುವ ಶಾಖೆಗಳನ್ನು ಹೇಳಬೇಕಲ್ಲವೆ? ಅದನ್ನು ಹೇಳುವಾಗ ಕೌಟಿಲ್ಯನು ಸಂಪೂರ್ಣವಾಗಿ ಭೌತವಾದದ ಪ್ರತಿಪಾದಕನಾಗುತ್ತಾನೆ. ಅವನ ಒಂದು ಮಾತು ಹೀಗಿದೆ: "ಎಲ್ಲ ವಿದ್ಯೆಗಳಿಗೂ ಬೆಳಕು ನೀಡುವುದು ಆನ್ವೀಕ್ಷಿಕೀ, ಎಲ್ಲ ಕ್ರಿಯೆಗಳಿಗೂ ಸಾಧನವಾಗುವುದು ಆನ್ವೀಕ್ಷಿಕೀ ಮತ್ತು ಎಲ್ಲ ನೀತಿ ಹಾಗೂ ನಿಯಮಗಳಿಗೂ ಶಾಶ್ವತವಾಗಿ ಬೆಂಬಲವಾಗಿ ನಿಲ್ಲುವುದು ಆನ್ವೀಕ್ಷಿಕೀ" (೨.೧.೧೨: ಪ್ರದೀಪಃ ಸರ್ವವಿದ್ಯಾನಾಂ ಉಪಾಯಃ ಸರ್ವಕರ್ಮಣಾಂ। ಆಶ್ರಯಃ ಸರ್ವ ಧರ್ಮಾಣಾಂ ಶಶ್ವತ್ ಆನ್ವೀಕ್ಷಿಕೀ ಮತಾ॥). ಅಂತಹ ಆನ್ವೀಕ್ಷಿಕೀ ಎಂಬುದರಡಿ ಮೂರು ಶಾಖೆಗಳು ಮಾತ್ರ ಕೌಟಿಲ್ಯನಿಂದ ಉಕ್ತವಾಗಿದೆ. ಅವು ಸಾಂಖ್ಯ, ಯೋಗ ಮತ್ತು ಲೋಕಾಯತ (೨.೧.೧೦: ಸಾಂಖ್ಯಂ ಯೋಗೋ ಲೋಕಾಯತಂ ಚ ಇತಿ ಆನ್ವೀಕ್ಷಿಕೀ). ಭಾರತೀಯ ತತ್ತ್ವಶಾಸ್ತ್ರ ಶಾಖೆಗಳಲ್ಲಿ ಸಾಂಖ್ಯ ಮತ್ತು ಲೋಕಾಯತಗಳೆರಡೂ ಸಂಪೂರ್ಣವಾಗಿ ಭೌತವಾದಿ ಪ್ರಣಾಲಿಕೆಗಳು ಎಂಬುದನ್ನು ಕಟ್ಟಾ ಸಂಪ್ರದಾಯವಾದಿಗಳು ಸಹ ಮಾನ್ಯ ಮಾಡುತ್ತಾರೆ. ಸಾಂಖ್ಯ ದರ್ಶನದ ವಿಚಾರವು ಛಾಂದೋಗ್ಯ ಉಪನಿಷತ್ತಿನಲ್ಲಿ ಚರ್ಚೆಗೆ ಬಂದಿದೆ: "'ಸತ್' ಎಂಬುದು ಮೊದಲಿಗೆ ಒಂದೇ ಇದ್ದಿತು, ಬೇರೇನೂ ಇರಲಿಲ್ಲ. ಬೇರೆ ಕೆಲವರು ಹೇಳುತ್ತಾರೆ, ಮೊದಲಿಗೆ 'ಅಸತ್' ಮಾತ್ರವೇ ಇದ್ದಿತು ಮತ್ತು ಅದರಿಂದ 'ಸತ್' ಎಂಬುದು ಬಂದಿತು, ಎಂದು. ಆದರೆ ಮಗು, ನೀನೇ ಹೇಳು, ಅಸತ್‌ನಿಂದ ಸತ್ ಎಂಬುದು ಬರುವುದಾದರೂ ಹೇಗೆ? ಆದ್ದರಿಂದ ಮೊದಲಿಗೆ ಇದ್ದುದು 'ಸತ್' ಒಂದೇ. ಏಕೈಕವಾಗಿದ್ದ ಆ 'ಸತ್' ಬಹುವಾಗಿ ಉತ್ಪಾದಿತಗೊಳ್ಳಲು ಮುಂದಾಯಿತು. ಅದರಿಂದ ಕ್ರಮೇಣ ತೇಜಸ್, ನೀರು, ಅನ್ನ, ಇತ್ಯಾದಿಗಳೆಲ್ಲಾ ಬಂದವು" (ಛಾಂದೋಗ್ಯ ೬. ೨. ೧–೪: ಸದೇವ ಸೋಮ್ಯ ಇದಮಗ್ರೇ ಆಸೀತ್ ಏಕಮೇವ ಅದ್ವಿತೀಯಂ। ತದ್ಧೈಕ ಆಹುಃ ಅಸತ್ ಏವ ಅಗ್ರೇ ಆಸೀತ್ ಏಕಮೇವ ಅದ್ವಿತೀಯಂ ತಸ್ಮಾತ್ ಅಸತಃ ಸತ್ ಜಾಯತ॥ ಕುತಸ್ತು ಖಲು ಸೋಮ್ಯ ಏವಂ ಸ್ಯಾತ್ ಇತಿ ಹೋವಾಚ ಕಥಂ ಅಸತಃ ಸತ್ ಜಾಯೇತ॥ ಸತ್ ತು ಏವ ಸೋಮ್ಯ ಇದಮಗ್ರೇ ಆಸೀತ್ ಏಕಮೇವಾದ್ವಿತೀಯಂ॥ ತತ್ ಐಕ್ಷತ ಬಹು ಸ್ಯಾಂ ಪ್ರಜಾಯೇಯ ಇತಿ...). 'ಸತ್' ಎಂಬುದು ಒಂದು ಭೌತ ದ್ರವ್ಯ; ಅದು ತನ್ನಿಂದ ತಾನೆ ವಿಕಾಸ ಹೊಂದುತ್ತಾ ಹೋಯಿತು. ಅದಕ್ಕೆ ಬಾಹ್ಯವಾದ ಏನೊಂದೂ ಅದರ ವಿಕಾಸಕ್ಕೆ ಕಾರಣವಲ್ಲ. ಇದು ಪ್ರಸ್ತುತ ಉಪನಿಷದ್ವಾಕ್ಯದ ತಾತ್ಪರ್ಯ. ಪ್ರಕೃತಿಗೆ ತನ್ನಿಂದ ಹೊರತಾದ ಯಾವುದರ ಮಧ್ಯಪ್ರವೇಶವೂ ಇಲ್ಲದೆಯೇ ವಿಕಾಸ ಹೊಂದುವ ಗುಣವಿದೆ, ಸಾಮರ್ಥ್ಯವಿದೆ, ಎಂಬುದು ಅದರ ಸೂಚನೆ. ಅರ್ಥಾತ್, ಅದು ನಿಷ್ಕೃಷ್ಟವಾಗಿ ಭೌತವಾದಿ ತತ್ತ್ವಶಾಸ್ತ್ರವಾಗಿದೆ. ಆದರೆ "ಅದು ಅದರ ಅರ್ಥವಲ್ಲ; ಶ್ರುತಿವಾಕ್ಯಕ್ಕೆ ಬೇರೆಯೇ ಅರ್ಥವಿದೆ" ಎಂಬಿತ್ಯಾದಿಯಾಗಿ ಬ್ರಹ್ಮಸೂತ್ರ ಗ್ರಂಥವು ತನ್ನದೇ ಮೂಗಿನ ನೇರಕ್ಕೆ ವ್ಯಾಖ್ಯಾನಿಸಿತು (೧.೧.೫). ಅದನ್ನೇ ಶಂಕರ ಮುಂತಾದ ಆಚಾರ್ಯರು ಅತಾರ್ಕಿಕವಾಗಿ ಸ್ವೀಕರಿಸಿ ಸಾಂಖ್ಯತತ್ವವನ್ನು ಉಪನಿಷತ್ತು ಪ್ರತಿಪಾದಿಸಿಲ್ಲವೆಂಬ ಮೊಂಡುವಾದವನ್ನು ಹೂಡಿದರು. ಆಚಾರ್ಯರುಗಳೆಲ್ಲಾ ಎಷ್ಟೇ ಪುಂಖಾನುಪುಂಖವಾಗಿ ಶಬ್ದಾಡಂಬರವನ್ನು ಮೆರೆಯಲಿ, ಪ್ರಕೃತಿಯು ತನ್ನ ಲಕ್ಷಣವನ್ನು ಬದಲಾಯಿಸಿಕೊಳ್ಳುವುದಿಲ್ಲ. ಸ್ಟೀಫನ್ ಹಾಕಿಂಗ್ ಇದನ್ನು ಒಂದು ವಾಕ್ಯದಲ್ಲಿ ಸಂಗ್ರಹಿಸಿ ಹೇಳಿರುವುದುಂಟು: "ತನ್ನನ್ನು ತಾನು ಸ್ವತಂತ್ರವಾಗಿ ನಿಭಾಯಿಸಿಕೊಳ್ಳುವ ಸಾಮರ್ಥ್ಯವು ವಿಶ್ವಕ್ಕಿದೆ." ಅದೇ ಭೌತವಾದ ಮತ್ತು ಕೌಟಿಲ್ಯನು ಅದನ್ನು ಆನ್ವೀಕ್ಷಿಕೀ ಎಂಬುದರ ಒಂದು ಅಂಗವೆಂದು ಸ್ವೀಕರಿಸಿದ್ದಾನೆ.

ಲೋಕಾಯತ ದರ್ಶನವು ಭೌತವಾದೀ ತತ್ವವನ್ನು ಹೊಂದಿದೆ ಎಂಬುದರ ಬಗ್ಗೆ ಯಾರದೂ ತಕರಾರಿಲ್ಲ. ಭೂತದ್ರವ್ಯಗಳು ಸ್ವತಂತ್ರವಾಗಿ, ವೈವಿಧ್ಯಮಯವಾಗಿ, ಪರಿಣಮಿಸುತ್ತವೆ ಎಂಬುದು ಅದರ ನಿಲುವು. ಅದನ್ನು ದೇಹಾತ್ಮವಾದವೆಂದು ಕರೆಯಲಾಗಿದೆ. ಅಂದರೆ, ದೇಹದಿಂದ ಪ್ರತ್ಯೇಕವಾದ ಆತ್ಮವೆಂಬುದೇನೂ ಇಲ್ಲವೆಂಬ ನಿಲುವು. ಅದನ್ನು ಕೌಟಿಲ್ಯನು 'ವಿದ್ಯೆ' ಮತ್ತು 'ಆನ್ವೀಕ್ಷಿಕೀ'

**ನಿಮ್ಮ ಬಲಿದಾನ ಮರೆಯುವುದಿಲ್ಲ, ನಮ್ಮ ಹೋರಾಟ ನಿಲ್ಲುವುದಿಲ್ಲ.**

**ನಮನಗಳು**



ಹತ್ಯೆಯಾದ ದಿನಗಳು : ನರೇಂದ್ರ ದಾಭೋಲ್ಕರ್ ೨೦-೮-೨೦೧೩, ಗೋವಿಂದ ಪಾನ್ಸರೆ ೨೦-೨-೨೦೧೫, ಎಂ. ಎಂ. ಕಲಬುರ್ಗಿ ೩೦-೮-೨೦೧೫, ಗೌರಿ ಲಂಕೇಶ್ ೫-೯-೨೦೧೭

ಎಂಬುವುಗಳಡಿ ದಾಖಲಿಸಿದ್ದಾನೆ. ಲೋಕಾಯತವೆಂದರೆ ಏನೋ ಅನಿಷ್ಟವೆಂದು ಮೂಗುಮುರಿಯುವವರ ಮೂಗಿನ ಮೇಲೆ ಗುದ್ದಿದಂತಿದೆ ಇದು. ಪ್ರಾಚೀನ ಭಾರತದ ಶಿಷ್ಟ ಪರಂಪರೆಯಲ್ಲಿ ಲೋಕಾಯತಕ್ಕೆ ಸಾಕಷ್ಟು ಮಾನ್ಯತೆ ಇದ್ದಿತೆಂಬುದಕ್ಕೆ ಪುರಾವೆಗಳನ್ನು ಒದಗಿಸುವ ಅಗತ್ಯವಿಲ್ಲ. ದ್ರುಪದನ ಆಸ್ಥಾನದಲ್ಲಿ ಲೋಕಾಯತರಿರುತ್ತಿದ್ದರು, ಚರ್ಚೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು, ಅಂತಹ ಎಷ್ಟೋ ವೇಳೆಗಳಲ್ಲಿ ದ್ರುಪದನ ಮಗಳು ದ್ರೌಪದಿ ತನ್ನ ತಂದೆಯ ತೊಡೆಯ ಮೇಲೆ ಕುಳ್ಳಿರುತ್ತಿದ್ದಳು, ಎಂದು ಮಹಾಭಾರತದಲ್ಲಿ ಉಲ್ಲೇಖವಿದೆ. ರಾಮಾಯಣದಲ್ಲಿ ಲೋಕಾಯತರನ್ನು ಮೂದಲಿಸಿರುವುದೂ ಉಂಟು: ರಾಮನನ್ನು ನೋಡಿ ಪಾದುಕೆಗಳನ್ನು ಪಡೆದ ಭರತನಿಗೆ ಅರಣ್ಯದಲ್ಲಿ ರಾಮನ ಉಪದೇಶದ ಒಂದು ಭಾಗದಲ್ಲಿ 'ಲೋಕಾಯತರನ್ನು ಹತ್ತಿರ ಸೇರಿಸಿಕೊಳ್ಳಬೇಡ' ಎಂಬ ಮಾತಿದೆ. ಕೌಟಿಲ್ಯನಿಗೆ ರಾಮನ ಅಂಕೆಯೇನೂ ಇಲ್ಲ; ರಾಜರು ಲೋಕಾಯತ ವಿದ್ಯೆ ತಿಳಿದಿರಬೇಕೆಂದು ಅವನು ಆಗ್ರಹಿಸುವುದು ಸ್ಪಷ್ಟವಿದೆ. 'ಲೋಕಾಯತ' ಎಂಬುದಕ್ಕೆ ಎರಡು ಅರ್ಥಗಳಿವೆ: ಲೋಕಾಯ ಬುದ್ಧಿಂ ತನೋತಿ (ಲೋಕದ ಜನರಿಗೆ ಬುದ್ಧಿಯ ವರ್ಧನೆ ಮಾಡುತ್ತದೆ) ಮತ್ತು ಲೋಕದ ವ್ಯವಹಾರಗಳ ಬಗ್ಗೆ ಅಮೂಲ್ಯವಾದ ತಿಳುವಳಿಕೆ ನೀಡುತ್ತದೆ (ಐಹಿಕ ವ್ಯವಹಾರ ಪ್ರಸಾಧನಪರಂ ಲೋಕಾಯತಿಕಂ).

ಆನ್ವೀಕ್ಷಿಕೀಯಲ್ಲಿ ಇನ್ನುಳಿದದ್ದು ಯೋಗ. ಇದು ಪತಂಜಲಿಯ ಯೋಗವಲ್ಲ ಎಂಬುದನ್ನು ಒತ್ತಿಹೇಳಬೇಕು. ಪಾರಿಭಾಷಿಕವಾಗಿ ಅದು ನ್ಯಾಯ ಮತ್ತು ವೈಶೇಷಿಕ ದರ್ಶನಗಳನ್ನು ಸೂಚಿಸುತ್ತದೆ. ಅವೆರಡೂ ಭೌತವಾದಿ ತತ್ತ್ವಶಾಸ್ತ್ರ ಪ್ರಣಾಲಿಕೆಗಳೇ ಆಗಿವೆ. ಪತಂಜಲಿಯ ಪ್ರಕಾರ ಅವನ ಯೋಗಶಾಖೆಯು ಪ್ರತ್ಯೇಕ ದಾರ್ಶನಿಕ ಶಾಖೆಯೇ ಅಲ್ಲ. ಅದನ್ನವನು "ಸಾಂಖ್ಯಪ್ರವಚನ" ಯೋಗವೆಂದು ಕರೆದಿದ್ದಾನೆ. ಸಾಂಖ್ಯದಲ್ಲಿ ಈಶ್ವರನಿಲ್ಲ, ಪತಂಜಲಿಯ ಯೋಗದಲ್ಲಿ ಪುರುಷ ವಿಶೇಷನಾಗಿ ಈಶ್ವರನಿದ್ದಾನೆ, ಅಷ್ಟೇ ವ್ಯತ್ಯಾಸ. ಈ ಕಾರಣದಿಂದ ಯೋಗವನ್ನು "ಸೇಶ್ವರಸಾಂಖ್ಯ" ಎನ್ನಲಾಗಿದೆ. ಯೋಗದ ಈಶ್ವರನು ಸೃಷ್ಟಿಕರ್ತನೂ ಅಲ್ಲ, ನೈತಿಕ ಅಧೀಶ್ವರನೂ ಅಲ್ಲ, ಅವನೊಬ್ಬ ಗಾಳಿಯಲ್ಲಿ ತೇಲಾಡುವ ಪುರುಷ ವಿಶೇಷ, ಅಷ್ಟೆ; ಅವನಿಗೆ ಯಾವ ದೈವಿಕ ಲಕ್ಷಣಗಳೂ ಇಲ್ಲ. ಅದೇನೇ ಇರಲಿ, ಕೌಟಿಲ್ಯನು ಆನ್ವೀಕ್ಷಿಕೀ ಎಂಬುದರ ಒಂದು ಅಂಗವಾಗಿ ಹೇಳಿರುವ ಯೋಗವು ಪತಂಜಲಿಯ ಯೋಗವಲ್ಲ. ಹಾಗಿದ್ದರೆ ಅದನ್ನು ನ್ಯಾಯ – ವೈಶೇಷಿಕವೆಂದು ಗುರುತಿಸಲು ಯಾವ ಪುರಾವೆಗಳಿವೆ?

ಮೊದಲನೆಯದಾಗಿ, ಸಾಂಖ್ಯ ಮತ್ತು ಲೋಕಾಯತಗಳ ಜೊತೆ ಉಲ್ಲೇಖಿಸುವಾಗ ಕೌಟಿಲ್ಯನು ಹೇಳುವ ಯೋಗವು ಹೇಗಾದರೂ ಸರಿಯೇ ಅವೆರಡಕ್ಕಿಂತ ತೀರಾ ಭಿನ್ನವಾಗಬಾರದಲ್ಲವೆ? ಅವೆರಡೂ "ಅವೈದಿಕ" ವಾದವು ಮತ್ತು ಭೌತವಾದಿ ತತ್ವಗಳು. ಆದ್ದರಿಂದ ಕೌಟಿಲ್ಯನ ಯೋಗವು ಆ ಎರಡು ಲಕ್ಷಣಗಳನ್ನು ಹೊಂದಿರಬೇಕೆಂದು ನಿರೀಕ್ಷಿಸುವುದು ಸಮಂಜಸ ಎನಿಸುತ್ತದೆ. ಎರಡನೆಯದಾಗಿ, ಈ ಬಗ್ಗೆ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರು ಸಾದರಪಡಿಸಿರುವ ವಾದವು ಅಂಗೀಕಾರಾರ್ಹವೆನಿಸುತ್ತದೆ. ಅವರ ವಾದವನ್ನು ಹೀಗೆ ಸಂಗ್ರಹಿಸಬಹುದು: ಗೌತಮನ ನ್ಯಾಯಸೂತ್ರ ೧.೧.೨೯ರ ಮೇಲಿನ ಭಾಷ್ಯದಲ್ಲಿ ವಾತ್ಸ್ಯಾಯನನು ನ್ಯಾಯ ಸಿದ್ಧಾಂತವನ್ನು 'ಪ್ರತಿತಂತ್ರ ಸಿದ್ಧಾಂತ'ವೆಂದು ಕರೆದಿದ್ದಾನೆ. ಯಾವ ಸಿದ್ಧಾಂತವು ಇತರ ಸಂವಾದಿ ಶಾಖೆಗಳಲ್ಲಿ ಮಾನ್ಯತೆ ಪಡೆಯುತ್ತದೋ ಅದು ಪ್ರತಿತಂತ್ರ ಸಿದ್ಧಾಂತ. ಸಂವಾದಿಯಲ್ಲದ ಶಾಖೆಗಳು ಅಂತಹ ಸಿದ್ಧಾಂತವನ್ನು ಮಾನ್ಯ ಮಾಡುವುದಿಲ್ಲ. ವಾತ್ಸ್ಯಾಯನನು ಕೊಡುವ ಉದಾಹರಣೆ ಸಾಂಖ್ಯವು ನಿರೂಪಿಸುವ ಸತ್ಕಾರ್ಯವಾದ. ಅದನ್ನು ನಾವೀಗಾಗಲೆ ಪರಿಚಯಿಸಿ ಕೊಂಡಿದ್ದೇವೆ. ಮೊದಲಿಗೆ ಇದ್ದ 'ಸತ್' ಮತ್ತೆ ಹೊಸದಾಗಿ ಅಸ್ತಿತ್ವಕ್ಕೆ ಬರುವುದಿಲ್ಲ, ಆದರೆ ಅದು ಪರಿಣಾಮ ಹೊಂದುತ್ತದೆ. ಇರುವುದು ನಾಶವಾಗುವುದಿಲ್ಲ ಮತ್ತು ಇಲ್ಲದಿರುವುದು ಅಸ್ತಿತ್ವಕ್ಕೆ ಬರುವುದಿಲ್ಲ. ಸಾಂಖ್ಯದ ಈ ವಾದವು ನ್ಯಾಯದರ್ಶನಕ್ಕೆ ಸಮ್ಮತವಲ್ಲ. ಆದ್ದರಿಂದ ಅದು 'ಪ್ರತಿತಂತ್ರ ಸಿದ್ಧಾಂತ' ಎನಿಸಿಕೊಳ್ಳಲಾರದು. ನ್ಯಾಯ ದರ್ಶನದ ನಿಲುವೇನು? ಅದನ್ನು ಅಸತ್‌ಕಾರ್ಯವೆನ್ನುತ್ತಾರೆ. ಅಂದರೆ, ಹಿಂದೆ ಇರದಿದ್ದ ಒಂದು ವಸ್ತುವು ಅಸ್ತಿತ್ವಕ್ಕೆ ಬರುತ್ತದೆ. ಇದಕ್ಕೆ ಆರಂಭವಾದವೆಂಬ ಹೆಸರೂ ಇದೆ. ಮೊದಲು ಬಟ್ಟೆ ಇರಲಿಲ್ಲ, ನಂತರ ಅದು ಅಸ್ತಿತ್ವಕ್ಕೆ ಬಂದಿತು ಎಂಬುದು ಇದಕ್ಕೆ ಉದಾಹರಣೆ. ಈ ಪ್ರಕ್ರಿಯೆಯನ್ನು ವಾತ್ಸ್ಯಾಯನನು "ಯೋಗ" ಎಂದು ಹೆಸರಿಸಿದ್ದಾನೆ. ಈ ಯೋಗಸಿದ್ಧಾಂತವು ಸಾಂಖ್ಯಕ್ಕೆ ಮಾನ್ಯವಲ್ಲ. ಅರ್ಥಾತ್, ಅಸತ್ಕಾರ್ಯವಾದವು ನ್ಯಾಯ ಮತ್ತು ವೈಶೇಷಿಕ ದರ್ಶನಗಳಿಗೆ ಪ್ರತಿತಂತ್ರ ಸಿದ್ಧಾಂತ. ಇದೆಲ್ಲದರಿಂದ ತೀರ್ಮಾನಿಸಬಹುದಾದ್ದು ಏನೆಂದರೆ "ಯೋಗ" ಎಂಬುದು ನ್ಯಾಯ ವೈಶೇಷಿಕದ ಇನ್ನೊಂದು ಹೆಸರು ಎಂದು.

ನ್ಯಾಯ ಮತ್ತು ವೈಶೇಷಿಕ ದರ್ಶನಗಳು ಸಂವಾದಿ ದರ್ಶನಗಳಾದ್ದರಿಂದ ಅವನ್ನು ನ್ಯಾಯ – ವೈಶೇಷಿಕವೆಂದು ಕರೆಯಲಾಗುತ್ತದೆ. ನ್ಯಾಯವು ಜ್ಞಾನ ಪಡೆಯುವ ವಿಧಾನವನ್ನು ಹೇಳುತ್ತದಾದ್ದರಿಂದ ಅದು ಪ್ರಮಾಣಶಾಸ್ತ್ರ. ಯಾವುದರ ಬಗ್ಗೆ ಜ್ಞಾನ ಎಂಬುದನ್ನು ಹೇಳುವ ವೈಶೇಷಿಕವು ಪ್ರಮೇಯಶಾಸ್ತ್ರ. ಅವೆರಡೂ ಒಂದಕ್ಕೊಂದು ಸಂಗತವಾದವು. ಎರಡನ್ನೂ ಒಂದಾಗಿಸಿ ಅದಕ್ಕೆ 'ಯೋಗ' ಎಂಬ ಹೆಸರು ಕೊಡಲಾಗಿದೆ, ಯೋಗ ಎಂಬುದು ನ್ಯಾಯ – ವೈಶೇಷಿಕದ ಮೊದಲ ಹೆಸರು ಎಂದು ಫಣಿಭೂಷಣ ತರ್ಕವಾಗೀಶ ಮತ್ತು ಎಸ್. ಕುಪ್ಪುಸ್ವಾಮಿಶಾಸ್ತ್ರಿ ತಮ್ಮ ತಮ್ಮ ಗ್ರಂಥಗಳಲ್ಲಿ ಬಹಳ ಹಿಂದೆಯೇ ದಾಖಲಿಸಿದ್ದಾರೆ. ಗುಣರತ್ನ ಎಂಬುವನು ನೈಯ್ಯಾಯಿಕರನ್ನು "ಯೌಗಿಕರು" (ಅಂದರೆ ಯೋಗ ಸಿದ್ಧಾಂತದವರು) ಎಂದಿದ್ದಾನೆ. ಕುಪ್ಪುಸ್ವಾಮಿಶಾಸ್ತ್ರಿಗಳ ಪ್ರಕಾರ ಕೌಟಿಲ್ಯನು ನ್ಯಾಯ – ವೈಶೇಷಿಕವೆಂದು ಹೇಳದೆ ಕೇವಲ ಆನ್ವೀಕ್ಷಿಕೀ ಎಂದು ಹೇಳಿ, ವೈಶೇಷಿಕವನ್ನು 'ಯೋಗ' ಎಂದು ಕರೆದಿದ್ದಾನೆ. ವೈಶೇಷಿಕವು ಪರಮಾಣುಗಳ ಸಂಯೋಗ ದಿಂದ ಆವರೆಗೆ ಇರದಿದ್ದ ಒಂದು ಪದಾರ್ಥವು ಅಸ್ತಿತ್ವಕ್ಕೆ ಬರುತ್ತದೆಂದು ವಾದಿಸುವ ಪರಮಾಣುವಾದ. ಪರಮಾಣುವು ನಿತ್ಯ, ಆದರೆ ಅವುಗಳಿಂದ ಉಂಟಾಗುವ ಪದಾರ್ಥವು ಅನಿತ್ಯ. ಮಡಕೆ ಒಡೆದುಹೋಗಬಲ್ಲದು, ಆದರೆ ಅದರ ಪರಮಾಣುಗಳು ನಾಶವಾಗುವುದಿಲ್ಲ.

ಈಗ ಕೌಟಿಲ್ಯನ ಭೌತವಾದಿ ನಿಲುವು ಸುಸ್ಪಷ್ಟ: ಸಾಂಖ್ಯ, ಲೋಕಾಯತ, ಮತ್ತು ನ್ಯಾಯ – ವೈಶೇಷಿಕ ಮೂರೂ ಭೌತವಾದಿ ದರ್ಶನಗಳು. ಅವನ್ನು ಕೌಟಿಲ್ಯನು ಆನ್ವೀಕ್ಷಿಕೀ ಎಂದಿದ್ದಾನೆ. ನಿಜವಾದ ತತ್ತ್ವಶಾಸ್ತ್ರಗಳೆಂದರೆ ಇವೇ. ವೈದಿಕ ಪರಂಪರೆಯ ಮೀಮಾಂಸಾ ಮತ್ತು ವೇದಾಂತ ಅವನ ದೃಷ್ಟಿಯಲ್ಲಿ ರಾಜನಿಗೆ ಮಹತ್ವವಲ್ಲದ ತತ್ತ್ವಶಾಸ್ತ್ರ ಶಾಖೆಗಳು. ಈ ಪರಿಯಲ್ಲಿ ಕೌಟಿಲ್ಯನ ಮತಧರ್ಮ ನಿರಪೇಕ್ಷತೆ, ವೈಚಾರಿಕತೆ ಮತ್ತು ಭೌತವಾದ, ಮೂರೂ ವ್ಯಕ್ತವಾಗಿವೆ. ವಿರೋಧಾಭಾಸವೇನೆಂದರೆ ಕೌಟಿಲ್ಯ ಮತ್ತು ಅವನ ದೃಷ್ಟಿಯಲ್ಲಿರುವ ಆಳುವ ರಾಜರು ಈಶ್ವರವಾದಿ ಆಸ್ತಿಕರು! 'ಯೋಗ' ಎಂಬ

## 'ಜಲ ಪ್ರಳಯ'

ಯಾರು ತಂದರು ನೀರ
ಎಷ್ಟು ನೋವಿನ ಭಾರ
ಅಟ್ಟಹಾಸದ ರೂಪ
ಮುಗಿಲಿಗೇತಕೆ ಕೋಪ

ಕರಗಿ ಹೋಯಿತು ಕರುಣ
ಅಡವಿಯಾಯಿತು ಮಸಣ
ಮರುಗಿತು ಬರಿ ಮೌನ
ರೋದಿಸಿತು ಜನಮನ

ಕರಗಿದವು ಕಾರ್ಮೋಡ
ಉರುಳಿದವು ಮರಗಿಡ
ವರುಣದೇವನ ಮುನಿಸೆ
ಭಗೀರಥನ ಕನಸೆ ?

ಸ್ಮರಿಸಿ ಮುಗಿವೆವು ನಾವು
ಅಳಿದು ಹೋಗಲಿ ನೋವು
ತೋರು ಕರುಣೆಯ ದೇವ
ಮಮತೆ ಮಡಿಲಿನ ತಾವ.

**ಬಾಗೂರು ಮಂಜುನಾಥ**
ಹೊನ್ನತಮ್ಮ ಗುಡಿ ಹಿಂಭಾಗ, ಬಾಗೂರು ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ನ್ಯಾಯ–ವೈಶೇಷಿಕವು ಆಸ್ತಿಕವಲ್ಲ. ನ್ಯಾಯ ದರ್ಶನದಲ್ಲಿ ಈಶ್ವರನಿದ್ದಾನೆ, ಅವನ ಕೆಲಸ ಬಹಳ ಸೀಮಿತವಾದ್ದು: ಮೊದಲ ಪರಮಾಣುಗಳನ್ನು ಜೊತೆಗೂಡಿಸುವುದಷ್ಟೆ ಅವನ ಸೃಷ್ಟಿಕ್ರಿಯೆ. ಉಳಿದಂತೆ ಪರಮಾಣುಗಳು ಸ್ವಯಂಚಲನೆಗೆ ಸಮರ್ಥವಾಗಿವೆ. ಒಟ್ಟಿನಲ್ಲಿ ಪ್ರಾಚೀನ ಭಾರತದ ವೈಚಾರಿಕ ಪರಂಪರೆಯಲ್ಲಿ ಕೌಟಿಲ್ಯನಿಗೆ ಮಹತ್ವದ ಸ್ಥಾನವಿದೆ.

ಇಂತಹ ಕೌಟಿಲ್ಯನು ಆಳುವ ರಾಜನಿಗೆ ಅಗತ್ಯವಿದ್ದರೆ ಮೌಢ್ಯಾಚರಣೆಗಳನ್ನು ಧಾರಾಳವಾಗಿ ಬಳಸಬಹುದೆಂದು ಪರವಾನಗಿ ಮತ್ತು ಸಲಹೆ ನೀಡುತ್ತಾನೆ. ಮೂಢನಂಬಿಕೆಗಳನ್ನು ರಾಜನು ಪೋಷಿಸಬೇಕಾಗಿಲ್ಲ, ಆದರೆ ತೆರಿಗೆ ವಿಧಿಸಲು ಅನುಕೂಲ ಕಲ್ಪಿಸುತ್ತದಾದರೆ ಪ್ರಜೆಗಳಲ್ಲಿರುವ ಮೂಢನಂಬಿಕೆಗಳ ಲಾಭ ಪಡೆಯಲು ಅವನದೇನೂ ಅಡ್ಡಿಯಿಲ್ಲ. ಅಷ್ಟೇ ಏಕೆ, ಭೌತವಾದಿಯಾದ ಕೌಟಿಲ್ಯನು ಆಯಾ ವರ್ಣದವರಿಗೆ ನಿಗದಿತವಾದ ಕೆಲಸಗಳನ್ನು ಆಯಾ ವರ್ಣದವರು ತಪ್ಪದೆ ಮಾಡುತ್ತಿರುವಂತೆ ನಿಯಂತ್ರಿಸಬೇಕೆಂದು ತಿಳಿಸುತ್ತಾನೆ ಕೂಡ. ಅವನಿಗೂ ಭಗವದ್ಗೀತೆಗೂ ಈ ಸಂಬಂಧದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಕೌಟಿಲ್ಯನ ಮಾತು ಹೀಗಿದೆ: ಏಷ ತ್ರಯೀಧರ್ಮಃ ಚತುರ್ಣಾಂ ವರ್ಣಾನಾಂ ಆಶ್ರಮಾಣಾಂ ಚ ಸ್ವಧರ್ಮಸ್ಥಾಪನಾತ್ ಔಪಕಾರಿಕಃ (೩.೪). ಇತರ ವರ್ಣದವರ ಶುಶ್ರೂಷೆ ಮಾಡಬೇಕಾದ ಶೂದ್ರರಿಗೆ ಕೌಟಿಲ್ಯನು ಪಶುಸಂಗೋಪನೆ ಮತ್ತು ವ್ಯಾಪಾರಗಳನ್ನೂ ಮಾನ್ಯ ಮಾಡುತ್ತಾನೆಂಬುದೊಂದೇ ವ್ಯತ್ಯಾಸ (೩.೫: ಶೂದ್ರಸ್ಯ ದ್ವಿಜಾತಿ ಶುಶ್ರೂಷಾ ವಾರ್ತಾ ಕಾರುಕುಶೀಲವ ಕರ್ಮ ಚ).

ಮೂಢನಂಬಿಕೆಯ ವಿಷಯವನ್ನು ಕುರಿತಂತೆ ಕೌಟಿಲ್ಯನು ಪ್ರಾಚೀನ ಗ್ರೀಸಿನ ಪ್ಲೇಟೊ, ಪೊಲಿಬಿಯಸ್, ಸ್ಟ್ರಾಬೊ, ಮುಂತಾದವರಂತೆ 'ಅನುಕೂಲಸಿಂಧು' ಎಂದೇ ಪರಿಗಣಿಸುತ್ತಾನೆ. "ಅನುಕೂಲಕರವಾದ ಸುಳ್ಳು" ಪ್ಲೇಟೊ ಪ್ರಕಾರ ಆಳುವ ವರ್ಗಕ್ಕೆ ಮಹತ್ಸಾಧನವಾದ್ದರಿಂದ ಯುವಕರಲ್ಲಿ ಅದನ್ನು ಯಥೇಚ್ಛವಾಗಿ ತುಂಬುವುದು ಅವಶ್ಯಕ. "ಸಮಯೋಚಿತ ಸುಳ್ಳು ಅಥವಾ ಉದಾತ್ತವಾದ ಸುಳ್ಳೊಂದನ್ನು ಸಾಧ್ಯವಾದರೆ ಆಡಳಿತಗಾರರೂ ಸೇರಿದಂತೆ ಇಡೀ ಜನಸಮುದಾಯವು ಒಪ್ಪಿಕೊಳ್ಳುವಂತೆ ಮಾಡುವುದು ಹೇಗೆ?" ಎಂಬ ಪ್ರಶ್ನೆಯನ್ನು ಪ್ಲೇಟೊ ತನ್ನ 'ರಿಪಬ್ಲಿಕ್' ಎಂಬ ಗ್ರಂಥದಲ್ಲಿ ಕೇಳಿಕೊಂಡಿದ್ದಾನೆ. "ಹಿರಿಯ ಅಧಿಕಾರಿಗಳಿಂದ ಬಂದ ಆಜ್ಞೆಯನ್ನು ಶಿರಸಾವಹಿಸುವುದು ಸಾಮಾನ್ಯ ಜನತೆಗೆ ಅಭ್ಯಾಸವಾಗಬೇಕು" ಎನ್ನುವ ಐಸೋಕ್ರೇಟಿಸ್ ಅದಕ್ಕಾಗಿ ಮೂಢನಂಬಿಕೆಗಳನ್ನು ಬೆಂಬಲಿಸುತ್ತಾನೆ. ನಮ್ಮ ದೇಶದಲ್ಲಿ ಹಿಂದೆ ಮತ್ತು ಇಂದು ಅದು ಯಾವ ಪ್ರಮಾಣದ್ದೆಂಬುದು ಸಾಕಷ್ಟು ಪ್ರಸಿದ್ಧವಾಗಿದೆ. ತಾನೇ ನಂಬದ ಜ್ಯೋತಿಷ್ಯವನ್ನು ಜ್ಯೋತಿಷಿಯು ಬಂಡವಾಳ ಮಾಡಿಕೊಳ್ಳುವುದು ಇದಕ್ಕೊಂದು ಪುಟ್ಟ ನಿದರ್ಶನ. ಈ ಬಗೆಗೆ ಕೌಟಿಲ್ಯನ ಸಲಹೆಗಳು 'ಅರ್ಥಶಾಸ್ತ್ರ'ದ ೧೪ನೆಯ ಅಧ್ಯಾಯದ ೧೭೭ನೆಯ ಪ್ರಕರಣದಲ್ಲಿ ಹೇರಳವಾಗಿ ನಮೂದಿಸಲ್ಪಟ್ಟಿವೆ. ಅಧ್ಯಾಯದ ಶೀರ್ಷಿಕೆ "ಅದ್ಭುತೋತ್ಪಾದನಂ" ಎಂದು. ಪವಾಡ ಸದೃಶವಾದ ಸಂಗತಿಗಳನ್ನು ಸೃಷ್ಟಿಸಿ ಜನರು ಅದನ್ನು ನಂಬುವಂತೆ ಮಾಡುವುದು, ಅದರಿಂದ ಉಂಟಾಗಬಹುದಾದ ಭೀಕರ ತೊಂದರೆಯ ಉಪಶಮನಕ್ಕಾಗಿ ನಿರ್ದಿಷ್ಟವಾದ ಆಚರಣೆಗಳನ್ನು ಆಯೋಜಿಸುವುದು, ತತ್ಸಂಬಂಧವಾಗಿ ಅಧಿಕ ತೆರಿಗೆಯನ್ನು ವಿಧಿಸಿ ಖಜಾನೆಯನ್ನು ತುಂಬಿಕೊಳ್ಳುವುದು, ಇವೆಲ್ಲ ಸರ್ವಥಾ ಮಾನ್ಯ ಎಂದು ಕೌಟಿಲ್ಯನು ಅಂಗೀಕರಿಸುತ್ತಾನೆ. ಅಂತಹ ಪವಾಡಗಳನ್ನು ಜನರ ಕಣ್ಣಿಗೆ ಕಟ್ಟುವಂತೆ ನಿರ್ಮಿಸುವುದರ ಬಗೆಗೂ ಅವನ ಸೂಚನೆಗಳಿವೆ. ಉದಾಹರಣೆಗೆ, ಕೆಲವೊಂದು ರಾತ್ರಿಗಳಲ್ಲಿ ರಾಜನು ದೇವರ ಮೂರ್ತಿಯನ್ನೋ ಅಥವಾ ಬೇರಾವುದೋ ಪವಿತ್ರ ವಿಗ್ರಹವನ್ನೋ ಸ್ಥಾಪಿಸಿ ಆ 'ಉದ್ಭವಮೂರ್ತಿ'ಗೆ ಉತ್ಸವ ನಡೆಸುವುದು; ದೇವಾಲಯದ ಉದ್ಯಾನವನದಲ್ಲಿ ಅಕಾಲದಲ್ಲಿ ಹೂವು ಮತ್ತು ಹಣ್ಣುಗಳನ್ನು ಸೃಷ್ಟಿಸಿ, ಅದರ ಆಧಾರದ ಮೇಲೆ ದೇವತೆಗಳ ಆಗಮನವಾಯಿತೆಂದು ಸಾರುವುದು, ಆ ಸಂದರ್ಭದಲ್ಲಿ ಜಾತ್ರೆ ಏರ್ಪಡಿಸುವುದು; ರಾಕ್ಷಸನ ವೇಷಧಾರಿಯಾದ ಗೂಢಚಾರನೊಬ್ಬನನ್ನು ಒಂದು ಮರದಲ್ಲಿ ಅವತರಿಸುವಂತೆ ಮಾಡಿ, ಪ್ರತಿದಿನ ನರಬಲಿಯೊಂದು ಬೇಕೆಂದು ಅದು ಕೇಳುವಂತೆ ಮಾಡುವುದು, ಆ ದುಷ್ಟಶಕ್ತಿಯ ಉಚ್ಚಾಟನೆಗೆಂದು ಹಣ ಸಂಗ್ರಹಿಸುವುದು; ಇತ್ಯಾದಿ. ಅವನ್ನೆಲ್ಲಾ ಯಾವ ರಾಜನಾದರೂ ಮಾಡಿದನೋ ಅಥವಾ ಅವೆಲ್ಲಾ ಸಾಧ್ಯತೆಯ ಸೂಚನೆಗಳೋ ಎಂಬುದನ್ನು ನಮ್ಮ ತೀರ್ಮಾನಕ್ಕೆ ಬಿಡಲಾಗಿದೆ. ಆದರೆ ಮೂಢನಂಬಿಕೆಗಳಿಗೆ ಒಂದು ಸಾಮಾಜಿಕ ಆಯಾಮವಿದೆಯೆಂಬುದನ್ನು ಕೌಟಿಲ್ಯನು ಪ್ರತಿಪಾದಿಸಿದ್ದಾನೆ.

"ಅರ್ಥಶಾಸ್ತ್ರ"ದ ಪ್ರಾಶಸ್ತ್ಯವು ಇನ್ನೊಂದು ಕಾರಣಕ್ಕಾಗಿಯೂ ಸ್ವಾರಸ್ಯಕರವಾಗಿದೆ. ಅದರಲ್ಲಿರುವ ಅಪಾರ ಮಾಹಿತಿಯು ಆಶ್ಚರ್ಯಕರವಾಗಿದೆ, ಅದೂ ಹಲವು ವಿಷಯಗಳಿಗೆ ಸಂಬಂಧಿಸಿದಂತೆ. ಖನಿಜಗಳು, ರತ್ನಗಳು, ವನ್ಯಸಂಪತ್ತು, ತಂತ್ರಜ್ಞಾನದ ಅಂದಿನ ಹಂತ, ರಾಸಾಯನಿಕ ದ್ರವ್ಯಗಳ ಬಗೆಗಳು, ಹೀಗೆ ಹತ್ತಾರು ವಿಷಯಗಳನ್ನು ಕುರಿತಂತೆ ಈ ಗ್ರಂಥವು ಅನನ್ಯವಾದ್ದು. ಉದಾಹರಣೆಗೆ, ವಜ್ರದ ವರ್ಣವು ಬೆಕ್ಕಿನ ಕಣ್ಣಿನಂತೆಯೂ, ಶಿರೀಷ ಪುಷ್ಪದಂತೆಯೂ, ಹಸುವಿನ ಗಂಜಳದಂತೆಯೂ, ಹಸುವಿನ ಜೊಲ್ಲಿನಂತೆಯೂ, ಸ್ಫಟಿಕದಂತೆಯೂ, ಮಾಲತೀ ಪುಷ್ಪದಂತೆಯೂ ಇರುತ್ತದೆ, ಎಂಬ ವಿವರಣೆ. ವಿವಿಧ ಖನಿಜಗಳು ದೊರೆಯುವ ಭೌಗೋಳಿಕ ಭಾಗಗಳು; ಗಂಧದ ಮರದ ಬಗೆಗಳು, ಅವುಗಳು ದೊರೆಯುವ ಸ್ಥಾನ, ಅವುಗಳ ಲಕ್ಷಣಗಳು, ಇತ್ಯಾದಿ. ಈ ಸಂಬಂಧದಲ್ಲಿ ಗ್ರಂಥದ ಒಂದು ಮೌಲಿಕ ನಿರ್ದೇಶನವು ಹೀಗಿದೆ: "ಗಣಿಗಳ ಉತ್ಪನ್ನವನ್ನು ಅವಶ್ಯಕವಾದ ಪ್ರಯೋಜನಗಳಿಗೆ ಉಪಯೋಗಿಸಬಹುದು. ಗಣಿಗಳಿಂದ ತಯಾರಿಸಿದ ವಸ್ತುಗಳ ವ್ಯಾಪಾರವನ್ನು ಕೇಂದ್ರೀಕರಿಸಿ, ಆ ಸ್ಥಳದಿಂದ ಬೇರೆ ಕಡೆ ಆ ಬಗೆಯ ವಸ್ತುಗಳನ್ನು ತಯಾರಿಸುವವರಿಗೂ, ಮಾರುವವರಿಗೂ, ಕೊಳ್ಳುವವರಿಗೂ ಶಿಕ್ಷೆಯನ್ನು ವಿಧಿಸಬೇಕು. ಗಣಿಯ ಕೆಲಸಗಾರನು ರತ್ನಗಳನ್ನು, ಬೇರೆ ಖನಿಜಗಳನ್ನು ಕದ್ದರೆ, ಅವನಿಗೆ ಅವುಗಳ ಬೆಲೆಗೆ ಎರಡರಷ್ಟು ದಂಡವನ್ನು ವಿಧಿಸಬೇಕು. ಖನಿಜವನ್ನು ಕದಿಯುವವನನ್ನೂ, ಅನುಮತಿ ಇಲ್ಲದೆ ಗಣಿಯಲ್ಲಿ ವ್ಯವಹರಿಸುವವನನ್ನೂ ಸೆರೆಹಿಡಿಸಿ ಖೈದಿಗಳಂತೆ ಭಾವಿಸಬೇಕು." (೨.೧೨.೧೮–೨೦). ಇಂತಹ ಮಾತುಗಳನ್ನು ಗಮನಿಸಬೇಕು, ಮೆಲುಕು ಹಾಕಬೇಕು. ಅಂದರೆ, 'ಅರ್ಥಶಾಸ್ತ್ರ' ಗ್ರಂಥದ ಪ್ರಸ್ತುತತೆಯು ಸಾರ್ವಕಾಲಿಕ.




**ಡಾ॥ ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ
೩ನೇ ಹಂತ, ಬೆಂಗಳೂರು – ೫೬೦ ೦೮೫




ಹೊಸತು-೨೦
ವಿಶೇಷ ಲೇಖನ

# ವಿಜ್ಞಾನ ಮತ್ತು ಧರ್ಮ

**ಪ್ರೊ॥ ಎಂ. ಆರ್. ಎನ್. ಮೂರ್ತಿ**

ಪ್ರಕೃತಿಯಲ್ಲಿ ನಡೆಯುವ ಅನೇಕ ಕ್ರಿಯೆಗಳನ್ನು ಆಳವಾಗಿ ಗಮನಿಸಿ, ಇಲ್ಲವೇ ಉದ್ದೇಶಪೂರ್ವಕ ನಡೆಸಿದ ಸೂಕ್ತ ಪ್ರಯೋಗಗಳ ಫಲಿತಾಂಶಗಳನ್ನು ಬಳಸಿಕೊಂಡು, ತಾರ್ಕಿಕವಾಗಿ ಪಡೆಯುವ ಜ್ಞಾನಕ್ಕೆ ವಿಜ್ಞಾನ ಎನ್ನಬಹುದು. ಸತತ ಪರೀಕ್ಷೆ, ಸೂಕ್ಷ್ಮ ವೀಕ್ಷಣೆ ಮತ್ತು ತಾರ್ಕಿಕ ವಿಶ್ಲೇಷಣೆ ವಿಜ್ಞಾನದ ಬೆಳವಣಿಗೆಗೆ ಬಹಳ ಅವಶ್ಯಕ. ಒಬ್ಬ ವಿಜ್ಞಾನಿ ಹೊಸದೊಂದು ತತ್ವವನ್ನು ಪ್ರಕಟಿಸಿದರೆ, ಅದನ್ನು ಇತರ ಅನೇಕರು ಪ್ರಾಯೋಗಿಕವಾಗಿ ಪರೀಕ್ಷಿಸಿ, ತಾರ್ಕಿಕವಾಗಿ ವಿಶ್ಲೇಷಿಸಿ ಸರಿ ಇದೆಯೆಂದು ಕಂಡುಕೊಂಡ ನಂತರವೇ ಹೊಸ ತತ್ವ ಸ್ವೀಕಾರಾರ್ಹವಾಗುತ್ತದೆ. ಆದರೆ, ಎಲ್ಲ ವೈಜ್ಞಾನಿಕ ತತ್ವಗಳನ್ನೂ ನೇರ ಪ್ರಯೋಗಗಳ ಮೂಲಕ ಪುಷ್ಟೀಕರಿಸಲು ಸಾಧ್ಯವಾಗುವುದಿಲ್ಲ. ಕೆಲವು ತತ್ವಗಳನ್ನು ಪರೋಕ್ಷ ಆಧಾರಗಳ ತಾರ್ಕಿಕ ವಿವೇಚನೆಯಿಂದ ತಿಳಿದುಕೊಳ್ಳಬೇಕಾಗುತ್ತದೆ. ಆದ್ದರಿಂದ ಕೆಲವು ವೈಜ್ಞಾನಿಕ ಪರಿಕಲ್ಪನೆಗಳ ಬಗ್ಗೆ ಗೌಣ ಭಿನ್ನಾಭಿಪ್ರಾಯಗಳು ಏಳಬಹುದು. ಇಂತಹ ಕನಿಷ್ಠ ಭಿನ್ನಾಭಿಪ್ರಾಯಗಳನ್ನೇ ಬೃಹತ್ತನ್ನಾಗಿಸಿ ವಿಜ್ಞಾನ ನಮಗೆ ಸತ್ಯವನ್ನು ತಿಳಿಸಲಾರದು ಎಂದು ವಾದಿಸುವವರಿಗೇನೂ ಕಡಿಮೆ ಇಲ್ಲ. ಹೀಗೆ ವಾದಿಸುವವರಿಗೆ ವಿಜ್ಞಾನಕ್ಕೆ ಒಪ್ಪಿತವಲ್ಲದ ತಮ್ಮ ನಂಬಿಕೆಗಳನ್ನು ಸಮರ್ಥಿಸಿಕೊಳ್ಳುವ ಉದ್ದೇಶ ಇರುತ್ತದೆ. ಅದರಲ್ಲೂ, ತಮ್ಮ ಧರ್ಮವೇ ಅಂತಿಮ ಸತ್ಯ ಅನ್ನುವ ನಂಬಿಕೆ ಅಥವಾ ದುರಭಿಮಾನ ಇರುವವರು ವಿಜ್ಞಾನವನ್ನು ತೆಗಳಲು ಸದಾ ಸಿದ್ಧರಾಗಿರುತ್ತಾರೆ. ವಿಜ್ಞಾನವನ್ನು ಕಡೆಗಣಿಸುವ ಇಂತಹವರ ನಿಲುವನ್ನು ಅರ್ಥಮಾಡಿಕೊಳ್ಳಲು ನೇರ ಪ್ರಯೋಗಗಳ ಮೂಲಕ ಮತ್ತು ಪರೋಕ್ಷ ಆಧಾರಗಳನ್ನವಲಂಬಿಸಿ ಪಡೆಯುವ ವಿಭಿನ್ನ ವೈಜ್ಞಾನಿಕ ಸಂಶೋಧನೆಗಳ ಸ್ವರೂಪವನ್ನು ಗಮನಿಸುವುದು ಉಪಯುಕ್ತ. ಉಷ್ಣತೆ ಮತ್ತು ಒತ್ತಡವನ್ನು ಅವಲಂಬಿಸಿ, ಅನೇಕ ವಸ್ತುಗಳು ಮೂರು ಭಿನ್ನ ಸ್ಥಿತಿಗಳಲ್ಲಿ (ಘನ, ದ್ರವ ಮತ್ತು ಅನಿಲ) ಇರಬಲ್ಲವು ಎನ್ನುವುದು ಒಂದು ವೈಜ್ಞಾನಿಕ ತತ್ವ. ನೀರು ಈ ಮೂರೂ ರೂಪಗಳಲ್ಲಿ ಇರುವುದನ್ನು ಪ್ರಕೃತಿಯಲ್ಲಿ ಕಾಣಬಹುದು ಮತ್ತು ಯಾವಾಗ ಬೇಕಾದರೂ ಪ್ರಯೋಗಪೂರ್ವಕ ಸಾಧಿಸಿ ತೋರಿಸಬಹುದು. ಇಂತಹ ಸರಳ ಪ್ರಯೋಗಗಳಿಂದ ಎಲ್ಲ ವೈಜ್ಞಾನಿಕ ತತ್ವಗಳನ್ನೂ ಸಮರ್ಥಿಸಿಕೊಳ್ಳಲಾಗುವುದಿಲ್ಲ. ಉದಾಹರಣೆಗೆ, ಜೀವದ ಕುರುಹೇ ಇಲ್ಲದೆ ಬರಿಯ ಜಡ ವಸ್ತುಗಳಿಂದ ಕೂಡಿದ್ದ ನಮ್ಮ ಭೂಮಿಯಲ್ಲಿ ಸಹಜವಾಗಿ, ಯಾವ ಹೊರ ಪ್ರೇರಣೆಯೂ ಇಲ್ಲದೆ ಜೀವವಿಕಾಸ ಪ್ರಾರಂಭವಾಗಿತ್ತು ಎನ್ನುವ ವೈಜ್ಞಾನಿಕ ತತ್ವವನ್ನು ಸರಳ ಪ್ರಯೋಗಗಳಿಂದ ಸಮರ್ಥಿಸಿಕೊಳ್ಳಲಾಗುವುದಿಲ್ಲ. ನೂರಾರು ಕೋಟಿ ವರ್ಷಗಳ ಹಿಂದೆ ಭೂಮಿಯಲ್ಲಿದ್ದ ಬಿಸಿ ವಾತಾವರಣದಲ್ಲಿ ಲಕ್ಷಾಂತರ ವರ್ಷಗಳು ನಡೆದ ರಾಸಾಯನಿಕ ಕ್ರಿಯೆಯ ಫಲವಾಗಿ ಮೊದಲು ಸರಳ ಜೀವಿಗಳ ಉಗಮವಾಯಿತು. ಮೊದಲು ಕಾಣಿಸಿಕೊಂಡ ಜೀವಿಯಿಂದ ಇಂದು ಬದುಕಿರುವ ಜೀವಿಗಳು ವಿಕಾಸ ಹೊಂದಲು ನೂರಾರು ಕೋಟಿ ವರ್ಷಗಳು ಬೇಕಾದವು. ಇವೆಲ್ಲಾ ವಿಜ್ಞಾನದಲ್ಲಿ ಒಪ್ಪಿಕೊಂಡಿರುವ ಜೀವವಿಕಾಸದ ತತ್ವಗಳು. ಹೊರ

**ವಿಜ್ಞಾನಕ್ಕೂ ಧರ್ಮಕ್ಕೂ ನೇರ ಸಂಬಂಧ ಇಲ್ಲದಿದ್ದರೂ, ಧರ್ಮ ಏಕೆ ಮತ್ತು ಹೇಗೆ ಪ್ರಾರಂಭವಾಗಿರಬಹುದು ಎನ್ನುವುದನ್ನು ವೈಜ್ಞಾನಿಕವಾಗಿ ಪರಿಶೀಲಿಸುವ ಪ್ರಯತ್ನ ಮಾಡಬಹುದು. ವ್ಯವಸಾಯವನ್ನು ಕಂಡುಕೊಳ್ಳುವ ಮೊದಲು ಮನುಷ್ಯ ಕಾಡಿನಲ್ಲಿ ಬದುಕುತ್ತಿದ್ದ. ಆಹಾರ ಸಂಪಾದನೆ ಬಹಳ ಶ್ರಮದಾಯಕವಾಗಿತ್ತು ಮತ್ತು ದೊರೆಯಬಹುದಾದ ಆಹಾರ ಸೀಮಿತವಾಗಿತ್ತು. ಪ್ರಕೃತಿಯನ್ನೇ ತಮ್ಮ ಎಲ್ಲ ಅವಶ್ಯಕತೆಗಳಿಗೂ ನಂಬಿಕೊಂಡಿದ್ದ ಇಂತಹ ಕಾಡುಗಳಲ್ಲಿ ವಾಸಿಸುತ್ತಿದ್ದ ಜನ, ಸಣ್ಣ, ಸಣ್ಣ ಗುಂಪುಗಳಲ್ಲಿ ಮಾತ್ರ ಬದುಕಲು ಸಾಧ್ಯವಾಗುತ್ತಿತ್ತು. ಗುಂಪಿನ ಸದಸ್ಯರೆಲ್ಲ ಒಗ್ಗಟ್ಟಾಗಿ ಶ್ರಮಿಸಿದರೆ ಮಾತ್ರ ಗುಂಪು ಬದುಕಿ ಉಳಿಯಲು ಸಾಧ್ಯವಿತ್ತು. ಇಲ್ಲದಿದ್ದರೆ, ಕಾಡುಪ್ರಾಣಿಗಳ ಬಾಯಿಗೋ, ಇನ್ನೊಂದು ಗುಂಪಿನ ಹೊಡೆತಕ್ಕೋ ಸಿಕ್ಕಿ ನಾಶವಾಗುವ ಸಾಧ್ಯತೆ ಇರುತ್ತಿತ್ತು. ಆದ್ದರಿಂದ, ಬದುಕಿ ಉಳಿಯಲು ಕೆಲಮಟ್ಟದ ಸಂಯಮವನ್ನು ಎಲ್ಲರೂ ತೋರಬೇಕಾಗಿತ್ತು.**

ಪ್ರೇರಣೆಯಿಲ್ಲದೇ, ನಿರ್ಜೀವ ಪ್ರಪಂಚದಲ್ಲಿ ಜೀವ ವಿಕಾಸ ಸಹಜವಾಗಿ ಸಾಧ್ಯ ಎಂದು ಪ್ರಾಯೋಗಿಕವಾಗಿ ತೋರಿಸಲು ಇಷ್ಟೇ ದೀರ್ಘಕಾಲ ಬೇಕಾಗಬಹುದು ಅಥವಾ ಇನ್ನೂ ಹೆಚ್ಚಿನ ಕಾಲ ಬೇಕಾಗಬಹುದು. ಆದ್ದರಿಂದ ಅಂತಹ ಪ್ರಯೋಗಗಳು ಅಸಾಧ್ಯ. ಆದರೂ ಜೀವವಿಕಾಸ ವಾದವನ್ನು ವೈಜ್ಞಾನಿಕ ಸತ್ಯ ಎಂದು ಒಪ್ಪಲಾಗಿದೆ. ಜೀವವಿಕಾಸ ಆಗಿರುವುದಕ್ಕೆ ಹೇರಳವಾದ ಆಧಾರಗಳು ಭೂಮಿಯ ಮೇಲ್ಪದರದಲ್ಲಿ, ಜೀವಿಗಳ ದೇಹರಚನೆಯಲ್ಲಿ, ಅವು ಬದುಕುಳಿಯಲು ಮತ್ತು ಸಂತಾನಾಭಿವೃದ್ಧಿ ಹೊಂದಲು ಅನುಸರಿಸುವ ಉಪಾಯಗಳಲ್ಲಿ ಮತ್ತು ಅವುಗಳ ವಂಶವಾಹಿ ಮಾಹಿತಿಗಳಲ್ಲಿ ದೊರಕುತ್ತವೆ. ಇಂತಹ ಪರೋಕ್ಷ, ಆದರೆ ಅತ್ಯಂತ ನಂಬಲರ್ಹ ಆಧಾರಗಳಿಂದ ಜೀವ ವಿಕಾಸವಾದಕ್ಕೆ ವೈಜ್ಞಾನಿಕ ಮನ್ನಣೆ ದೊರೆತಿದೆ. ಎಲ್ಲ ವೈಜ್ಞಾನಿಕ ತತ್ವಗಳೂ ಪುನಃ ಪುನಃ ಮಾಡಿ ನೋಡಬಹುದಾದ ಪ್ರಾಯೋಗಿಕ ಮಾರ್ಗದಿಂದಲೇ ದತ್ತವಾಗಿರುವುದಿಲ್ಲ. ಪರೋಕ್ಷ ಮಾರ್ಗ ಮತ್ತು ತಾರ್ಕಿಕತೆಯಿಂದ ದತ್ತವಾದ ತತ್ವಗಳೂ ಅಷ್ಟೇ ನಂಬಲರ್ಹವಾಗಿರಬಲ್ಲವು. ಯಾವ ರೀತಿಯ ಪುರಾವೆಗಳನ್ನು (ಉದ್ದೇಶಪೂರ್ವಕ ಮಾಡಿದ ಅಥವಾ ಪ್ರಕೃತಿ ಒದಗಿಸಿದ) ಒಪ್ಪಿಕೊಳ್ಳಬಹುದು ಎನ್ನುವುದರ ಬಗ್ಗೆ ವಿಜ್ಞಾನಿಗಳಲ್ಲಿ ಹೆಚ್ಚಿನ ಭಿನ್ನಾಭಿಪ್ರಾಯಗಳು ಇರುವುದಿಲ್ಲ.

ನಮ್ಮ ಜಗತ್ತಿನಲ್ಲಿ ನಡೆಯುವ ಎಲ್ಲ ಕ್ರಿಯೆಗಳೂ ಕೆಲವು ನಿಯಮಗಳಿಗೆ ಒಳಪಟ್ಟು ನಡೆಯುತ್ತಿವೆ. ಸೂಕ್ತ ಕಾರಣದ ಹಿನ್ನೆಲೆ ಇಲ್ಲದೇ ಯಾವ ಕ್ರಿಯೆಯೂ ನಡೆಯುವುದಿಲ್ಲ. ನೀರು ಬೆಟ್ಟದಿಂದ ಪ್ರಪಾತಕ್ಕೆ ಹರಿಯುತ್ತದೆಯೇ ವಿನಾ ಪ್ರಪಾತದಿಂದ ಬೆಟ್ಟದ ಮೇಲಕ್ಕೆ ಏರಲಾರದು. ಮೇಲಿನಿಂದ ಕೆಳಕ್ಕೆ ಹರಿಯುವ ಅಥವಾ ಬೀಳುವ ಸ್ವಭಾವಕ್ಕೆ ಒಳಪಡದ ಯಾವ ವಸ್ತುವನ್ನೂ ನಾವು ಭೂಮಿಯ ಮೇಲೆ ಕಾಣಲಾರೆವು. ಇದಕ್ಕೆ ಭೂಮಿಯ ಗುರುತ್ವಾಕರ್ಷಣ ಶಕ್ತಿ ಕಾರಣ. ಹೈಡ್ರೋಜನ್ ಅನಿಲ ತುಂಬಿರುವ ಬಲೂನು ಮೇಲಕ್ಕೆ ಹೋಗುತ್ತದೆ ಎನ್ನಿಸಿದರೂ, ಅದು ಕೆಳಗೆ ಬೀಳುವ ಪ್ರವೃತ್ತಿಗೆ ಅಥವಾ ಗುರುತ್ವಾಕರ್ಷಣ ಶಕ್ತಿಯ ಎಳೆತಕ್ಕೆ ವಿರುದ್ಧವಾಗಿಲ್ಲ. ವಾಯುಮಂಡಲದಲ್ಲಿರುವ ಗಾಳಿಯ ಸಾಂದ್ರತೆ ಹೈಡ್ರೋಜನ್ ತುಂಬಿದ ಬಲೂನಿಗಿಂತ ಹೆಚ್ಚು ಇರುವುದರಿಂದ, ಗಾಳಿ ಕೆಳಕ್ಕೆ ಹರಿಯುತ್ತದೆ ಎನ್ನುವುದು ಇನ್ನೂ ಸರಿಯಾದ ವಿವರಣೆ. ಎರಡು ವಸ್ತುಗಳು, ಒಂದೇ ಕಾಲದಲ್ಲಿ, ಒಂದೇ ಜಾಗದಲ್ಲಿ ಇರಲಾರವು ಎನ್ನುವ ಆರ್ಕಿಮಿಡೀಸ್ ತತ್ವದ ಪ್ರಕಾರ, ಗಾಳಿ ಕೆಳ ಹರಿದಾಗ ಹೈಡ್ರೋಜನ್ ತುಂಬಿದ ಬಲೂನು ಮೇಲೆ ಹೋಗಬೇಕಾಗುತ್ತದೆ. ವಾಯುಮಂಡಲವಿಲ್ಲದಿರುವ ಚಂದ್ರನ ಮೇಲೆ ಹೈಡ್ರೋಜನ್ ಅನಿಲ ತುಂಬಿದ ಬಲೂನು ಹಾಗೂ ಒಂದು ಬಂಡೆ ಕಲ್ಲನ್ನು ಒಂದೇ ಎತ್ತರದಿಂದ ಕೆಳಗೆ ಬೀಳಿಸಿದರೆ ಸಮಕಾಲದಲ್ಲಿ ನೆಲ ತಲುಪುತ್ತವೆ. ಪ್ರಕೃತಿ ಪಾಲಿಸುತ್ತಿರುವ ಅಥವಾ ಪ್ರಕೃತಿಯಲ್ಲಿ ಸದಾ ಕಂಡುಬರುವ ಘಟನಾವಳಿಗಳ ತಾರ್ಕಿಕ ವಿವರಣೆಗಳೇ ವೈಜ್ಞಾನಿಕ ನಿಯಮಗಳೆನಿಸಿಕೊಳ್ಳುತ್ತವೆ. ಈ ನಿಯಮಗಳನ್ನು ವಿವರಿಸುವ ಕಲೆಗಾರಿಕೆ ಇತ್ತೀಚಿನ ೫೦೦ ವರ್ಷಗಳಲ್ಲಿ ಸಿದ್ಧಿಸಿದೆ. ಅನೇಕ ವೈಜ್ಞಾನಿಕ ನಿಯಮಗಳನ್ನು ಗಣಿತದ ಸೂತ್ರಗಳಲ್ಲಿ ಸೆರೆಹಿಡಿದು, ನಿಯಮಗಳ ಅರ್ಥವ್ಯಾಪ್ತಿಯ ಖಚಿತತೆಯನ್ನು ಹೆಚ್ಚಿಸಲು ಸಾಧ್ಯವಾಗಿದೆ.

ವೈಜಾನಿಕ ನಿಯಮಗಳಿಗೆ ನೇರ ಇಲ್ಲವೇ ಪರೋಕ್ಷ ವೀಕ್ಷಣೆ, ಪರೀಕ್ಷೆ ಮತ್ತು ತಾರ್ಕಿಕ ವಿಶ್ಲೇಷಣೆಗಳೇ ಆಧಾರ. ಈಗ ಒಪ್ಪಿಕೊಳ್ಳಲಾಗಿರುವ ಯಾವುದಾದರೂ ನಿಯಮಕ್ಕೆ ಹೊಂದಿಕೊಳ್ಳದ ಅಥವಾ ವಿರುದ್ಧವಾದ ಘಟನೆಗಳು ಕಂಡುಬಂದರೆ, ಇಲ್ಲಿಯವರೆಗೆ ಒಪ್ಪಿತವಾದ ನಿಯಮವನ್ನೇ ಕೈಬಿಟ್ಟು ಬೇರೊಂದು ಇನ್ನೂ ಸೂಕ್ತವೆನಿಸುವ ನಿಯಮವನ್ನು ಅರಸಬೇಕಾಗುತ್ತದೆ. ಇಲ್ಲಿಯವರೆಗೆ ಕಂಡಿರುವ ಮತ್ತು ಉದ್ದೇಶಪೂರ್ವಕ ಪರೀಕ್ಷಿಸಿರುವ ಎಲ್ಲ ಘಟನೆಗಳೂ ವಿಜ್ಞಾನದಲ್ಲಿ ಒಪ್ಪಿಕೊಂಡಿರುವ ನಿಯಮಗಳಿಗೆ ಹೊಂದಿಕೊಂಡೇ ಇರುತ್ತವೆ. ಆದರೂ ಮುಂದೆ ನಮ್ಮ ಗಮನಕ್ಕೆ ಬರುವ ಎಲ್ಲ ಘಟನೆಗಳೂ ಇಲ್ಲಿಯವರೆಗೆ ಒಪ್ಪಿಕೊಂಡಿರುವ ನಿಯಮಗಳಿಗೆ ಒಳಪಟ್ಟೇ ನಡೆಯುತ್ತವೆ ಎಂದು ಹೇಗೆ ಹೇಳಲು ಸಾಧ್ಯ? ಮುಂದೊಂದು ದಿನ ಇಂದಿನ ವೈಜ್ಞಾನಿಕ ತತ್ವಗಳಿಗೆ ವಿರುದ್ಧವಾದ ಫಲಿತಾಂಶಗಳನ್ನು ಕಂಡರೆ, ಈಗ ಒಪ್ಪಿತವಾಗಿರುವ ವೈಜ್ಞಾನಿಕ ನಿಯಮಗಳನ್ನು ಬದಲಿಸಿಕೊಳ್ಳಬೇಕಾದ ಅವಶ್ಯಕತೆ ಬರಬಹುದು. ಇಂತಹ ಅವಶ್ಯಕತೆ ವಿಜ್ಞಾನದ ಪರ್ವಕಾಲದಲ್ಲಿ, ಎಂದರೆ ಶತಮಾನದಲ್ಲಿ ಒಂದೆರಡು ಬಾರಿ ಬರಬಹುದು. ಅಂತಹ ಪರ್ವಕಾಲಗಳಲ್ಲಿಯೂ, ವಿಜ್ಞಾನದ ತತ್ವಗಳು ತಪ್ಪು ಎನ್ನಿಸಿಕೊಳ್ಳುವುದಕ್ಕಿಂತ ತತ್ವದಲ್ಲಿ ಅಲ್ಪ ಸ್ವಲ್ಪ ಪ್ರಮಾಣದ ಬದಲಾವಣೆ ಬೇಕಾಗಿದೆ ಎನ್ನುವಂತಹ ಸಂದರ್ಭಗಳೇ ಹೆಚ್ಚು. ಉದಾಹರಣೆಗೆ, ನ್ಯೂಟನ್ನನ ಚಲನ ಶಾಸ್ತ್ರದಲ್ಲಿ ಒಂದು ವಸ್ತುವಿನ ದ್ರವ್ಯರಾಶಿ, ಅದು ಒಂದೇ ಸ್ಥಳದಲ್ಲಿ ಸ್ಥಿರವಾಗಿದ್ದರೂ, ವೇಗವಾಗಿ ಚಲಿಸುತ್ತಿದ್ದರೂ, ಬದಲಾವಣೆ ಹೊಂದದೆ ಒಂದೇ ಬೆಲೆಯುಳ್ಳದ್ದಾಗಿರುತ್ತದೆ. ಐನ್‌ಸ್ಟೈನರ ಸಾಪೇಕ್ಷತಾ ಸಿದ್ಧಾಂತದಲ್ಲಿ ಒಂದು ವಸ್ತುವಿನ ದ್ರವ್ಯರಾಶಿ ಅದರ ವೇಗ ಹೆಚ್ಚಿದಂತೆ ಹೆಚ್ಚಾಗುತ್ತದೆ. ಆದರೆ ಇಂತಹ ದ್ರವ್ಯರಾಶಿ ಹೆಚ್ಚಳಿಕೆ ಅರಿವಿಗೆ ಬರಬೇಕಾದರೆ, ವಸ್ತು ಬಲು ವೇಗದಿಂದ ಚಲಿಸುತ್ತಿರಬೇಕು. ನಮ್ಮ ದಿನನಿತ್ಯದ ವೇಗದಲ್ಲಿ ದ್ರವ್ಯರಾಶಿಯ ಹೆಚ್ಚಳವನ್ನು ಯಾವ ಸೂಕ್ಷ್ಮ ಯಂತ್ರವೂ ಗುರುತಿಸಲಾರದು. ಆದ್ದರಿಂದ, ನಾವು ಅನುಭವಿಸುವ ವೇಗಗಳಲ್ಲಿ ದ್ರವ್ಯರಾಶಿ ನ್ಯೂಟನ್ ಹೇಳಿದಂತೆ ಸ್ಥಿರಾಂಕವಾಗಿರುತ್ತದೆ ಎಂದೇ




ನವಕರ್ನಾಟಕ ಪುಸ್ತಕ ಮೇಳದ ಉದ್ಘಾಟನೆ ಮತ್ತು ಐದು ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮವನ್ನು ದಿನಾಂಕ ೩-೮-೨೦೧೮ರಂದು ಮೈಸೂರಿನ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ ಸಭಾಂಗಣದಲ್ಲಿ ಖ್ಯಾತ ವಿದ್ವಾಂಸರಾದ ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಟಿ. ಜಿ. ಶ್ರೀನಿಧಿ, ಶ್ರೀ ಟಿ. ಎಸ್. ಗೋಪಾಲ್, ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ, ಶ್ರೀ ಎಸ್. ಎಸ್. ರಮೇಶ್ (ಕೃತಿಗಳನ್ನು ಪರಿಚಯಿಸಿದವರು), ಶ್ರೀ ಜನಾರ್ದನ ಪೂಜಾರಿ ಹಾಗೂ ಶ್ರೀ ಎನ್. ಕೆ. ಸತ್ಯನಾರಾಯಣ ಉಪಸ್ಥಿತರಿದ್ದರು.

ಭಾವಿಸಬಹುದು. ಆದ್ದರಿಂದ ಐನ್‌ಸ್ಟೈನರ ಸಿದ್ಧಾಂತ ನ್ಯೂಟನ್ ಸಿದ್ಧಾಂತವನ್ನು ಪರಿಷ್ಕರಿಸಿತೇ ಹೊರತು, ತಪ್ಪು ಎಂದು ತೀರ್ಮಾನಿಸಲಿಲ್ಲ. ಇಂತಹ ಬದಲಾವಣೆಗಳು ಕೂಡ ವಿಜ್ಞಾನದಲ್ಲಿ ಬಹಳ ಅಪರೂಪ. ಇಂದಿಗೂ ಕೂಡ, ಸಟೆಲೈಟುಗಳನ್ನು ಬಾಹ್ಯಾಕಾಶಕ್ಕೆ ತಳ್ಳಲು ನ್ಯೂಟನ್ನನ ನಿಯಮಗಳನ್ನೇ ಬಳಸುತ್ತಾರೆ, ಐನ್‌ಸ್ಟೈನರ ಸಾಪೇಕ್ಷತಾ ಸಿದ್ಧಾಂತದ ನಿಯಮಗಳನ್ನು ಬಳಸುವ ಅವಶ್ಯಕತೆ ಬರುವುದಿಲ್ಲ. ಆದರೂ, ವಿಜ್ಞಾನಿಯಾದವನು ತಾನು ಸತ್ಯವೆಂದು ಒಪ್ಪಿಕೊಂಡಿರುವ ನಿಯಮಗಳನ್ನು ಬದಲಿಸಿಕೊಳ್ಳಲು ಸದಾ ಸಿದ್ಧನಾಗಿರಬೇಕು. ಈ ಅರ್ಥದಲ್ಲಿ ಎಲ್ಲ ವೈಜ್ಞಾನಿಕ ನಿಯಮಗಳೂ ತಾತ್ಕಾಲಿಕವೇ. ಮೇಲು ನೋಟಕ್ಕೆ ಇದು ವಿಜ್ಞಾನದ ದೌರ್ಬಲ್ಯ ಎನ್ನಿಸಬಹುದಾದರೂ, ನಿಜವಾಗಿ ಇದು ವಿಜ್ಞಾನದ ಶಕ್ತಿಯೇ ಹೌದು. ಇಂದಿನವರೆಗೆ ಪ್ರಚಲಿತವಿರುವ ನಿಯಮಗಳು ತಪ್ಪು ಎಂದು ಕಂಡುಬಂದರೆ, ವಿಜ್ಞಾನ ತನ್ನನ್ನು ತಾನೇ ತಿದ್ದಿಕೊಂಡು ಹೊಸ ನಿಯಮಗಳನ್ನು ಅಳವಡಿಸಿಕೊಳ್ಳಲು ಸದಾ ಸಿದ್ಧವಾಗಿರುವುದರಿಂದ ವೈಜ್ಞಾನಿಕ ನಿಯಮಗಳು ಸತ್ಯಕ್ಕೆ ಹೆಚ್ಚು ಹೆಚ್ಚು ಹತ್ತಿರವಾಗುತ್ತಾ ಹೋಗುತ್ತವೆ, ಕಾಲ ಕಳೆದಂತೆ ಈ ತತ್ವಗಳಲ್ಲಿ ನಮ್ಮ ವಿಶ್ವಾಸವೂ ಹೆಚ್ಚುತ್ತಾ ಹೋಗುತ್ತದೆ.

ಜಗತ್ತಿನಲ್ಲಿ ನಡೆಯುವ ಲೆಕ್ಕವಿರಿಸಲಾರದಷ್ಟು ಘಟನೆಗಳಿಗೆಲ್ಲಾ ಅನ್ವಯಿಸುವ ನಿಯಮಗಳನ್ನು ಅರಿಯಬಲ್ಲೆವೆ? ಅವುಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳಬಲ್ಲೆವೆ? ಅಂತಹ ಪ್ರಯತ್ನಕ್ಕೆ ಕೊನೆಯುಂಟೆ? ಇಂತಹ ಪ್ರಶ್ನೆಗಳು ಏಳುವುದು ಸಹಜ. ಆದರೆ ಜಗತ್ತಿನಲ್ಲಿ ನಡೆಯುವ ಅತ್ಯಂತ ಭಿನ್ನ ಎನ್ನಿಸುವ ಅನೇಕ ಕ್ರಿಯೆಗಳು ಒಂದೇ ವೈಜ್ಞಾನಿಕ ನಿಯಮಕ್ಕೆ ಒಳಪಟ್ಟು ನಡೆಯುತ್ತಿರಬಹುದು ಎನ್ನುವ ಅಂಶ ವೀಕ್ಷಣೆಗಳಿಂದ, ಸಂಶೋಧನೆಗಳಿಂದ ತಿಳಿದುಬಂದಿದೆ. ಉದಾಹರಣೆಗೆ, ಭೂಮಿ ಸೂರ್ಯನ ಸುತ್ತ ಸುತ್ತುವಂತೆ ಚಂದ್ರ ಭೂಮಿಯ ಸುತ್ತ ಸುತ್ತುತ್ತಾನೆ. ಮೇಲೆಸದ ಕಲ್ಲು ಭೂಮಿಗೆ ಮರಳಿ ಬೀಳುತ್ತದೆ. ಹೊಳೆಯ ನೀರು ಹರಿದು ಸಮುದ್ರಕ್ಕೆ ಸೇರುತ್ತದೆ. ಭೂಮಿಯ ವಾತಾವರಣದಲ್ಲಿರುವ ಗಾಳಿ ಭೂಮಿಯನ್ನು ತ್ಯಜಿಸಿ ಹಾರಿ ಹೋಗುವುದಿಲ್ಲ. ಸೂರ್ಯ ಮತ್ತು ಒಂದು ಗ್ರಹದ ನಡುವಿನ ದೂರಕ್ಕೂ ಮತ್ತು ಆ ಗ್ರಹ ಸೂರ್ಯನ ಸುತ್ತ ಒಮ್ಮೆ ಸುತ್ತಿಬರಲು ತೆಗೆದುಕೊಳ್ಳುವ ಕಾಲಕ್ಕೂ ನಿರ್ದಿಷ್ಟ ಸಂಬಂಧವಿದೆ. ದೂರ ಹೆಚ್ಚಿದಷ್ಟೂ ಕಾಲವೂ ಹೆಚ್ಚುತ್ತದೆ. ಈ ಎಲ್ಲವೂ ಗುರುತ್ವಾಕರ್ಷಣೆಯ ನಿಯಮಗಳಿಗೆ ಬದ್ಧವಾಗಿಯೇ ನಡೆಯುತ್ತವೆ. ಈ ನಿಯಮಗಳ ನೆರವಿನಿಂದಲೇ ವಿಜ್ಞಾನಿಗಳು ಭೂಮಿಯ ಸುತ್ತ ಸುತ್ತುವ ಮತ್ತು ಭೂಸ್ಥಿರ ಕಕ್ಷೆಯಲ್ಲಿರುವ ಸಟೆಲೈಟುಗಳನ್ನು ಸ್ಥಾಪಿಸಿ, ಮನೆಮನೆಗಳಲ್ಲಿ ದೂರದರ್ಶನ ವೀಕ್ಷಣೆ, ಮೊಬೈಲ್ ಫೋನುಗಳ ಬಳಕೆಗೆ ಅನುವು ಮಾಡಿಕೊಟ್ಟಿದ್ದಾರೆ. ಇದೇ ರೀತಿ ನಮ್ಮ ಗಮನಕ್ಕೆ ಬರುವ ಎಲ್ಲ ಘಟನೆಗಳಿಗೂ ವೈಜ್ಞಾನಿಕ ನಿಯಮಗಳ ಸಹಾಯದಿಂದ ಕಾರಣ ಕಂಡುಕೊಳ್ಳಬಹುದು. ವಿಜ್ಞಾನದಲ್ಲಿ ಲಕ್ಷಾಂತರ ನಿಯಮಗಳಿಲ್ಲ. ಕಲಿಕೆಗೆ ಸಾಧ್ಯವಾಗುವ ಮಿತ ಸಂಖ್ಯೆಯ ನಿಯಮಗಳ ನೆರವಿನಿಂದಲೇ ಜಗತ್ತಿನ ಸಮಸ್ತ ಕ್ರಿಯೆಗಳನ್ನೂ, ಅವುಗಳ ಹಿನ್ನೆಲೆಯ ಕಾರಣಗಳನ್ನೂ ಅರಿಯಬಹುದು ಎನ್ನುವುದನ್ನು ವಿಜ್ಞಾನ ತಿಳಿಸಿಕೊಟ್ಟಿದೆ. ಈ ನಿಯಮಗಳ ಪರಿಚಯದಿಂದ, ಪ್ರಪಂಚದಲ್ಲಿ ಎಂತಹ ಘಟನೆಗಳು ಸಾಧ್ಯ, ಎಂತಹ ಘಟನೆಗಳು ನಡೆಯಲಾರವು ಎನ್ನುವುದನ್ನು ತಿಳಿದುಕೊಳ್ಳಬಹುದು. ನಮ್ಮ ಬಾಬಾಗಳು ವಿಭೂತಿಯನ್ನು ಸೃಷ್ಟಿಮಾಡಿ ಕೊಡಲಾರರೆಂಬುದು ವಿಜ್ಞಾನದ ಮೊದಲ ಪಾಠ ಕಲಿತ ಶಾಲೆಯ ವಿದ್ಯಾರ್ಥಿಗೂ ತಿಳಿದಿರುತ್ತದೆ (ತಿಳಿದಿರಬೇಕು!). ಹೊಟ್ಟೆಬಾಕ ಸಂಸ್ಕೃತಿಯಿಂದಾಗಿ ನಾವು ಅಗಾಧ ಪ್ರಮಾಣದಲ್ಲಿ ನೈಸರ್ಗಿಕ ತೈಲವನ್ನು ಉರಿಸುತ್ತಿದ್ದೇವೆ. ಇದರಿಂದ ಭೂಮಿಯ ತಾಪಮಾನ ಏರಿ, ಸಮುದ್ರದ ನೀರಿನ ಮಟ್ಟದಲ್ಲಿ ಏರಿಕೆ ಆಗಬಹುದು. ಅದರಿಂದ ಅನೇಕ ದ್ವೀಪಗಳು, ಸಮುದ್ರ ತೀರದ ಭೂಭಾಗಗಳು ಮುಳುಗಬಹುದು. ಹಾಗೆಯೇ ಅತಿವೃಷ್ಟಿ, ಅನಾವೃಷ್ಟಿಗಳು ಪದೇ ಪದೇ ಸಂಭವಿಸಬಹುದು ಎಂದು ವಿಜ್ಞಾನ ನಮ್ಮನ್ನು ಎಚ್ಚರಿಸುತ್ತದೆ. ಹಾಗೆಯೇ, ನಮ್ಮ ಅನುಕೂಲಕ್ಕೆ ಒದಗಿಬರುವಂತಹ ಘಟನೆಗಳು ಸಂಭವಿಸಬೇಕಾದರೆ ಏನು ಮಾಡಬಹುದು ಎನ್ನುವುದನ್ನೂ ವಿಜ್ಞಾನ ತಿಳಿಸಿಕೊಡುತ್ತದೆ. ಇದೇ ಎಲ್ಲ ತಾಂತ್ರಿಕ ವಿಜ್ಞಾನಗಳ ತಳಹದಿ. ವೈಜ್ಞಾನಿಕ ನಿಯಮಗಳನ್ನು ಬಳಸಿ ನಾವು ಸಹಸ್ರಾರು ಯಂತ್ರಗಳನ್ನು ನಿರ್ಮಿಸಿದ್ದೇವೆ. ಇಂತಹ ಯಂತ್ರಗಳು ನಮ್ಮ ದಿನನಿತ್ಯ ಜೀವನದ ಅವಿಭಾಜ್ಯ ಅಂಗಗಳಾಗಿವೆ.

ಇಲ್ಲಿಯವರೆಗೆ ಕಂಡುಕೊಂಡಿರುವ ನಿಯಮಗಳನ್ನು ಸತತ ಪರೀಕ್ಷಿಸುತ್ತಾ ಇರುವುದು ವಿಜ್ಞಾನದ ಒಂದು ಮುಖ್ಯ ಚಟುವಟಿಕೆ. ಕಾಪರ್ನಿಕಸ್ ತನ್ನ ಸಂಶೋಧನೆಗಳನ್ನು ಪ್ರಕಟಿಸುವ ಮುನ್ನ, ಭೂಮಿಯ ಸುತ್ತ ಸೂರ್ಯನೂ, ಗ್ರಹಗಳೂ ಹಾಗೂ ನಕ್ಷತ್ರಗಳೂ ಸುತ್ತುತ್ತಿವೆ ಎಂಬ ನಂಬಿಕೆಯಿತ್ತು. ಚಲಿಸುತ್ತಿರುವ ರೈಲಿನಲ್ಲಿ ಕುಳಿತವರಿಗೆ ಭೂಮಿ ಹಿಂದೆ ಓಡುತ್ತಿರುವಂತೆ ಭಾಸವಾಗುವಂತೆ, ಭೂಮಿಗೆ ಅಂಟಿಕೊಂಡಿರುವ ನಮಗೆ ವಿಶ್ವವೆಲ್ಲ ಭೂಮಿಯ ಸುತ್ತ ಸುತ್ತುತ್ತಿದೆ ಎಂದು ಅನ್ನಿಸುವುದು ಅತ್ಯಂತ ಸಹಜ. ಕಾಪರ್ನಿಕಸನಿಗೂ ಹಿಂದಿನವನಾದ ಟೈಕೋ ಬ್ರಾಹೆ ಎಂಬ ವಿಜ್ಞಾನಿ ಗ್ರಹಗಳು ಆಕಾಶದಲ್ಲಿ ಎಲ್ಲಿ ಕಾಣಿಸುತ್ತವೆ ಎನ್ನುವುದನ್ನು ಹತ್ತಾರು ವರ್ಷಗಳ ಕಾಲ ಗಮನಿಸಿ ಅವುಗಳ ಸ್ಥಾನಗಳನ್ನು ದಾಖಲಿಸಿದ್ದ. ಭೂಮಿಯ ಸುತ್ತ ಸೂರ್ಯ ಮತ್ತು ಇತರ ಗ್ರಹಗಳು ಸುತ್ತುತ್ತಿವೆ ಎನ್ನುವ ಊಹೆ ಟೈಕೋ ಬ್ರಾಹೆ ದಾಖಲಿಸಿದ್ದ ಗ್ರಹಗಳ ಸ್ಥಾನಗಳಿಗೆ ಹೊಂದಿಕೊಳ್ಳುತ್ತಿರಲಿಲ್ಲ. ಆದ್ದರಿಂದ, ಭೂಮಿಯ ಸುತ್ತ ಸೂರ್ಯ ಮತ್ತು ಇತರ ಆಕಾಶಕಾಯಗಳು ಸುತ್ತುತ್ತಿವೆ ಎನ್ನುವ, ಅಂದಿನವರೆಗೆ ನಂಬಲಾಗಿದ್ದ, ಕಲ್ಪನೆಯೇ ಸರಿ ಇಲ್ಲದಿರಬಹುದು ಎಂದು ಕಾಪರ್ನಿಕಸ್ಸಿನ ಮೇಧಾಶಕ್ತಿಗೆ ಅರಿವಾಯಿತು. ಭೂಮಿ ಸೂರ್ಯನ ಸುತ್ತ ಸುತ್ತುತ್ತಿದೆ ಎಂದು ಭಾವಿಸಿದರೆ ಗ್ರಹಗಳೆಲ್ಲಾ ಟೈಕೋ ಬ್ರಾಹೆ ಗಮನಿಸಿದ ಸ್ಥಾನಗಳಲ್ಲಿರುತ್ತವೆ ಎನ್ನುವ ಮಹತ್ತರ ತೀರ್ಮಾನಕ್ಕೆ ಬರಲು ಕಾಪರ್ನಿಕಸ್ಸನಿಗೆ ಸಾಧ್ಯವಾಯಿತು. ಟೈಕೋ ಬ್ರಾಹೆ ನಡೆಸಿದ ವೀಕ್ಷಣೆಗಳನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಗ್ರಹಗಳು ಯಾವ ನಿಯಮಗಳಿಗೆ ಒಳಪಟ್ಟು ಚಲಿಸುತ್ತವೆ ಎನ್ನುವುದನ್ನು ತಿಳಿದುಕೊಳ್ಳಬೇಕಾಗಿತ್ತು. ಕಾಪರ್ನಿಕಸ್ಸನ ಸೂರ್ಯ ಕೇಂದ್ರ ಸಿದ್ಧಾಂತವನ್ನು ಆಧಾರವಾಗಿರಿಸಿಕೊಂಡು, ಗ್ರಹಗಳ ಚಲನೆಗೆ ಸಂಬಂಧಿಸಿದ ನಿಯಮಗಳನ್ನು ಕೆಪ್ಲರ್ ತಾರ್ಕಿಕವಾಗಿ ಊಹಿಸಿ, ಅವುಗಳಿಗೆ ಸೂಕ್ತ ವೈಜ್ಞಾನಿಕ ಸೂತ್ರಗಳನ್ನು ಸೂಚಿಸಿ, ಗಣಿತದ ಪರಿಭಾಷೆಯಲ್ಲಿ ನಿರೂಪಿಸಿದ. ಕೆಪ್ಲರನ ನಿಯಮಗಳು ಗುರುತ್ವಾಕರ್ಷಣೆಯ ಪರಿಣಾಮ ಎಂದು ನ್ಯೂಟನ್ ತೋರಿಸಿದ. ಕಾಪರ್ನಿಕಸ್ಸನ ತರುವಾಯ ಸಹಸ್ರಾರು ವಿಜ್ಞಾನಿಗಳು ಲಕ್ಷಾಂತರ ಸಂದರ್ಭಗಳಲ್ಲಿ ಈ ಸಿದ್ಧಾಂತವನ್ನು ಪುನಃ ಪುನಃ ಪರೀಕ್ಷಿಸಿದ್ದಾರೆ. ಯಾವ ವೀಕ್ಷಣೆಯೂ ಕಾಪರ್ನಿಕಸ್ಸನ ನಿಯಮಕ್ಕೆ, ಕೆಪ್ಲರನ ಸಮೀಕರಣಗಳಿಗೆ, ನ್ಯೂಟನ್ನನ ಗುರುತ್ವಾಕರ್ಷಣ ಸಿದ್ಧಾಂತಕ್ಕೆ ವಿರೋಧವಾಗಿರುವುದು ಕಂಡುಬಂದಿಲ್ಲ. ಆದ್ದರಿಂದ ಗುರುತ್ವಾಕರ್ಷಣ ಸಿದ್ಧಾಂತದಲ್ಲಿ ನಮ್ಮ ನಂಬಿಕೆ ಆಳವಾಗುತ್ತಲೇ ಬಂದಿದೆ. ಇದೇ ರೀತಿ ವಿಜ್ಞಾನದ ಎಲ್ಲ ನಿಯಮಗಳೂ ಸತತ ಪರೀಕ್ಷೆಗೆ ಒಳಪಡುವುದರಿಂದ ವಿಜ್ಞಾನದಲ್ಲಿ ನಮ್ಮ ವಿಶ್ವಾಸ ಹೆಚ್ಚುತ್ತಾ ಹೋಗುತ್ತದೆ.

"ವಿಜ್ಞಾನ" ಎನ್ನುವ ಪದಕ್ಕೆ ಸರ್ವಸಮ್ಮತವಾದ ಅರ್ಥವಿದೆ. ಇದಕ್ಕೆ ಹೋಲಿಸಿದರೆ, "ಧರ್ಮ" ಪದಕ್ಕೆ ಹಲವಾರು ವ್ಯಾಖ್ಯೆಗಳನ್ನು ಪ್ರೇರೇಪಿಸಬಹುದು.



ಕೆಲವು ಸಂದರ್ಭಗಳಲ್ಲಿ "ಕರ್ತವ್ಯ" ಅಥವಾ "ಜವಾಬುದಾರಿ" ಪದಗಳಿಗೆ ಬದಲಾಗಿ "ಧರ್ಮ" ಪದವನ್ನು ಬಳಸುತ್ತೇವೆ. "ಮಕ್ಕಳು ತಂದೆತಾಯಿಗಳ ಸೇವೆ ಮಾಡುವುದು ಧರ್ಮ" ಎಂಬ ಮಾತಿನಲ್ಲಿ ಕರ್ತವ್ಯ ಪಾಲನೆಯ ಆದೇಶವಿದೆ. ಕೆಲವೊಮ್ಮೆ ಧರ್ಮವನ್ನು ನೀತಿ ಸೂಚಕವಾಗಿ ಬಳಸುತ್ತೇವೆ. "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ" ಎನ್ನುವುದು "ಅಹಿಂಸಾ ಧರ್ಮ." "ವರ್ಣಾಶ್ರಮ ಧರ್ಮ" ಅಥವಾ "ಜಾತಿ ಧರ್ಮ" ಎನ್ನುವುದು ಸಾಮಾಜಿಕ ಪರಂಪರೆಯಲ್ಲಿ ಒಂದು ಗುಂಪಿಗೆ ಸೇರಿರುವವರು ಹೇಗೆ ನಡೆದುಕೊಳ್ಳಬೇಕು ಎನ್ನುವುದನ್ನು ಸೂಚಿಸುತ್ತಿತ್ತು (ಸೂಚಿಸುತ್ತದೆ?) ಎನ್ನಬಹುದು. "ಹಿಂದು ಧರ್ಮ", "ಇಸ್ಲಾಂ ಧರ್ಮ" ಮುಂತಾದವು ಮತಾಚಾರಗಳನ್ನು ಅಥವಾ ಮತೀಯ ಆಚಾರಗಳನ್ನು ಮಾನ್ಯ ಮಾಡುವ ಗುಂಪಿಗೆ ಸೇರಿದವರನ್ನು ಸೂಚಿಸುತ್ತದೆ. ಇದು ಜೀವನ ವಿಧಾನವನ್ನೂ ಸೂಚಿಸಬಹುದು, ಒಂದು ಪಂಗಡದ ಗುಂಪನ್ನೂ ಸೂಚಿಸಬಹುದು. ಸಾಧಾರಣವಾಗಿ ಮಾಡಬಾರದು ಎನ್ನಿಸುವ, ವಿಶೇಷ ಸಮಯಗಳಲ್ಲಿ ಮಾಡಿದರೆ ತಪ್ಪಿಲ್ಲ ಅನ್ನುವಂತಹ ವರ್ತನೆಯನ್ನು "ಆಪದ್ಧರ್ಮ" ಎಂದು ಕರೆಯಬಹುದು. ರಂಜಾನ್ ತಿಂಗಳಲ್ಲಿ ಉಪವಾಸ ಮಾಡುವುದು "ಇಸ್ಲಾಂ ಧರ್ಮ". ಆದರೆ ಕಾಯಿಲೆಯಿಂದ ಬಳಲುತ್ತಿರುವವರು ಉಪವಾಸ ಮುರಿದರೂ ತಪ್ಪಿಲ್ಲ ಎನ್ನುವುದು "ಇಸ್ಲಾಮಿನ ಆಪದ್ಧರ್ಮ." ದ್ವಾಪರ ಯುಗದಲ್ಲಿ ತಪ್ಪು ಎಂದು ಪರಿಗಣಿಸಿದ್ದ ನಡತೆ ಕಲಿಯುಗದಲ್ಲಿ ಸರಿ ಎನ್ನಿಸಿಕೊಂಡರೆ ಅಂತಹ ನಡವಳಿಕೆಯನ್ನು "ಯುಗಧರ್ಮ" ಎನ್ನಬಹುದು. ಇಂದಿಗೆ ಸರಿ ಎನಿಸುವ, ಆದರೆ ಹಿಂದಿನ ಕಾಲಗಳಲ್ಲಿ ಕೆಟ್ಟದ್ದು ಎಂದು ಭಾವಿಸಿದ್ದ ನಿಯಮಗಳನ್ನು "ಕಾಲ ಧರ್ಮ" ಎನ್ನಬಹುದು. ಮಾನವ ಧರ್ಮ ಎನ್ನುವ ಪದವನ್ನು ಆಗಾಗ್ಗೆ ಕೇಳುತ್ತಿರುತ್ತೇವೆ. ಇದಕ್ಕೆ ತತ್ಸಮವಾಗಿ ಇಂಗ್ಲಿಷ್‌ನಲ್ಲಿ "ಹ್ಯೂಮನ್ ವ್ಯಾಲ್ಯೂ" ಎಂದು ಹೇಳುತ್ತಾರೆ. ಆದರೆ "ಮಾನವ ಧರ್ಮ"ಕ್ಕೆ ಪ್ರತಿ ಸಮಾಜವೂ ತನ್ನದೇ ಅರ್ಥವನ್ನು ಕೊಡುತ್ತದೆ. ಹೇಳದೇ, ಕೇಳದೇ ಮನೆಗೆ ಬಂದ ಅತಿಥಿಗಳಿಗೆ, ಅಭ್ಯಾಗತರಿಗೆ ಉಣಬಡಿಸುವುದು ನಮ್ಮ ಸಮಾಜದ ಧರ್ಮ. ಇನ್ನೊಬ್ಬರ ಮನೆಗೆ ಹೋಗುವುದರ ಮೊದಲು ಅವರಿಂದ ಅಪ್ಪಣೆ ಪಡೆದಿರಬೇಕು ಎನ್ನುವುದು ಇನ್ನು ಕೆಲ ಸಮಾಜಗಳ ಧರ್ಮ. ಹೀಗಾಗಿ, ಈ ಮಾನವ ಧರ್ಮ ಅಥವಾ ಹ್ಯೂಮನ್ ವ್ಯಾಲ್ಯೂ ಎಂಬ ಪದಗಳಿಗೂ ನಿಶ್ಚಿತ ಅರ್ಥವಿಲ್ಲ. ಪುರುಷರನ್ನು ಅಗ್ರಸ್ಥಾನದಲ್ಲಿಟ್ಟು ಸ್ತ್ರೀಯರನ್ನು ಎರಡನೇ ದರ್ಜೆಯ ಪ್ರಜೆಗಳನ್ನಾಗಿ ನೋಡುವ ಹಿಂದು, ಕ್ರಿಶ್ಚಿಯನ್ ಮತ್ತು ಮುಸಲ್ಮಾನ ಮತಗಳಲ್ಲಿ ಸಮನಾಗಿ ಕಾಣಬರುವ ಪದ್ಧತಿಯನ್ನು "ಧರ್ಮಾತೀತ ಧರ್ಮ" ಎನ್ನಬಹುದೇ?



ಹಿಂದು, ಜೈನ, ಬೌದ್ಧ, ಸಿಕ್, ಇಸ್ಲಾಂ, ಕ್ರೈಸ್ತ ಮುಂತಾದ ಧರ್ಮಗಳು ಪ್ರತಿಪಾದಿಸುವ ವಿಷಯಗಳಲ್ಲಿ ಕೆಲ ಸಾಮ್ಯತೆಗಳು ಕಂಡುಬಂದರೂ, ಅನೇಕ ವೈರುಧ್ಯಗಳು ಇರುವುದನ್ನು ಗಮನಿಸಬಹುದು. ಹೆಚ್ಚಿನ ಧರ್ಮಗಳು ಈ ಜಗತ್ತಿಗೆ ಒಬ್ಬ ಸೃಷ್ಟಿಕರ್ತನುಂಟು ಎನ್ನುತ್ತವೆ. ಇದಕ್ಕೂ ಅಪವಾದವಿಲ್ಲದಿಲ್ಲ. ಸೃಷ್ಟಿಕರ್ತನ ಬಗ್ಗೆ ಚರ್ಚೆಮಾಡುವುದರಿಂದ ಲಾಭವಿಲ್ಲ ಎಂದು ಬುದ್ಧ ಭಾವಿಸಿದ್ದನೆಂದು ತೋರುತ್ತದೆ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಏಕೈಕ ದೇವರ ಇರವನ್ನು ಒಪ್ಪುತ್ತವೆ. ಇತರ ದೇವತೆಗಳು ಇದ್ದಾರೆ ಎನ್ನುವುದು ಮತ್ತು ಅಂತಹ ದೇವರನ್ನು ಅಥವಾ ದೇವತೆಗಳನ್ನು ಆರಾಧಿಸುವುದು ಬಹು ದೊಡ್ಡ ತಪ್ಪು ಎಂದು ಸಾರುತ್ತವೆ. ಹಿಂದುಗಳು "ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂದು ಹೇಳಿದರೂ ಹಲವಾರು ದೇವತೆಗಳನ್ನು ಪೂಜಿಸುತ್ತಾರೆ. ಈ ದೇವತೆಗಳಿಗೆ ಪ್ರತ್ಯೇಕ, ವಿಭಿನ್ನ ಗುಣಗಳನ್ನು ಆರೋಪಿಸುತ್ತಾರೆ. ಒಂದೇ ದೇವತೆಗೆ ಹಲವಾರು ಮುಖಗಳನ್ನು ಆರೋಪಿಸಿರುವುದನ್ನೂ ಕಾಣುತ್ತೇವೆ. "ದೇವಿ" ಶಾಂತಮೂರ್ತಿಯಾದರೆ ತತ್ಸಮಾನ "ಕಾಳಿ" ರೌದ್ರ ಮೂರ್ತಿ. ಇಸ್ಲಾಂ ಮತ್ತು ಕ್ರೈಸ್ತ ಮತಗಳಲ್ಲಿ ಸರ್ವಶಕ್ತನಾದ ದೇವರು ಅತಿ ಉನ್ನತನಾಗಿದ್ದು ಮಾನವರೆಲ್ಲಾ ಅವನ ಸೇವಕರಾಗಿ ಅವನಿಗೆ ಹೋಲಿಸಿದರೆ ನಗಣ್ಯರಾಗಿರುತ್ತಾರೆ. ಅದ್ವೈತಿಗಳು, ಈ ವಿಶ್ವವೆಲ್ಲ ಪರಬ್ರಹ್ಮಸ್ವರೂಪವಾಗಿದ್ದು ಎರಡನೆಯದಿಲ್ಲ ಎನ್ನುತ್ತಾರೆ. "ಅಹಂ ಬ್ರಹ್ಮಾಸ್ಮಿ" ಎಂದು ಹೇಳುವ ಅದ್ವೈತಿಗಳ ಜೀವನದ ಪರಮ ಗುರಿ ಪರಮಾತ್ಮಸ್ವರೂಪವನ್ನು ಕಂಡುಕೊಳ್ಳುವುದೇ ವಿನಾ ಸ್ವತಂತ್ರ ಅಸ್ತಿತ್ವವಿರುವ ಇನ್ನೊಂದೇ ದೈವದ ಆರಾಧನೆಯಲ್ಲ. ಸ್ವರ್ಗ, ನರಕಗಳ ಕಲ್ಪನೆ ಅನೇಕ ಮತಪಂಥಗಳಲ್ಲಿ ಇದೆಯಾದರೂ, ಈ ಕಲ್ಪನೆಗಳಲ್ಲಿಯೂ ಬಹು ದೊಡ್ಡ ವ್ಯತ್ಯಾಸಗಳಿವೆ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳಲ್ಲಿ ಭೂಮಿಯ ಮೇಲೆ ಬದುಕು ಸವೆಸಿದ ನಂತರ ಸಿಕ್ಕುವ ಸ್ವರ್ಗ ಅಥವಾ ನರಕ ಶಾಶ್ವತ. ಇಲ್ಲಿಯ ಹಲವು ದಶಕಗಳ ಜೀವಿತದಲ್ಲಿ ಮಾಡಿದ ಕೆಲಸಗಳಿಗೆ ಸಿಗುವ ಫಲ ಎಂದಿಗೂ ಮುಗಿಯುವುದಲ್ಲ! ಹಿಂದುಗಳಲ್ಲಿ ಅವರವರ ಪಾಪ, ಪುಣ್ಯಗಳಿಗೆ ಅನುಗುಣವಾಗಿ ಸ್ವರ್ಗ ಮತ್ತು ನರಕಗಳನ್ನು ಅನುಭವಿಸಬೇಕಾಗುತ್ತದೆ. ಪಾಪ, ಪುಣ್ಯಗಳನ್ನು ಸವೆಸಿದ ಮೇಲೆ ಪುನರಪಿ ಜನನಂ, ಪುನರಪಿ ಜನನೀ ಜಠರೇ ಶಯನಂ. ಇಸ್ಲಾಂ ಮತ್ತು ಕ್ರೈಸ್ತರಲ್ಲಿ ಪುನರ್ಜನ್ಮವಿಲ್ಲ. ವೇದಕಾಲದಲ್ಲಿ ಪಡೆಯಲಾರದಿದ್ದ ಪುನರ್ಜನ್ಮವನ್ನು ಹಿಂದುಗಳು ಪುರಾಣ ಕಾಲದಲ್ಲಿ ಪಡೆಯಲು ಕಲಿತರು. ಇದೆಲ್ಲದರಿಂದ ತೀರ್ಮಾನಿಸಬಹುದಾದ ಅಂಶವೆಂದರೆ, ಬೇರೆ ಬೇರೆ ಮತಪಂಥಗಳ ನಂಬಿಕೆಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ, ವೈರುಧ್ಯಗಳೂ ಇವೆ. ಹಾಗೆಯೇ ಯಾವ ಧಾರ್ಮಿಕ ಪಂಥವನ್ನು ತೆಗೆದುಕೊಂಡರೂ, ಕಾಲ ಕಳೆದಂತೆ ಪಂಥದ ನಂಬಿಕೆಗಳಲ್ಲಿ ದೊಡ್ಡ ಬದಲಾವಣೆಗಳಾಗಿರುವುದನ್ನು ಗಮನಿಸಬಹುದು. ಈ ನಿಟ್ಟಿನಲ್ಲಿ ಧರ್ಮಗಳನ್ನು ಗೋಸುಂಬೆಗಳಿಗೆ ಹೋಲಿಸಬಹುದು, ಇವು ಕಾಲಕ್ಕೆ ತಕ್ಕ ಹಾಗೆ ಮತ್ತು ಕೆಲ ಪ್ರಭಾವಶಾಲಿಗಳ ಅನುಕೂಲಕ್ಕೆ ತಕ್ಕ ಹಾಗೆ ತಮ್ಮ ನಿಲುವನ್ನು ಬದಲುಮಾಡಿಕೊಳ್ಳುವ ಸಾಮರ್ಥ್ಯ ಪಡೆದಿವೆ. "ಸರ್ವೇ ಜನಾಃ ಸುಖಿನೋ ಭವಂತು" ಎನ್ನುವ ಹಿಂದು ಧರ್ಮ, ಅನೇಕರು ಸಾವಿಗೀಡಾಗುವ ಯುದ್ಧಗಳನ್ನು ಸಮರ್ಥಿಸಬೇಕಾದಾಗ, ಕದನದಲ್ಲಿ ಮಡಿದವರಿಗೆ ವೀರ ಸ್ವರ್ಗ ದೊರಕುವುದೆಂದು ಸಾರುತ್ತದೆ. ದೇವರ ಎದುರು ಎಲ್ಲ ಮನುಷ್ಯರೂ ಸಮ ಎನ್ನುವ ಇಸ್ಲಾಂ ಧರ್ಮವನ್ನು ಕಾಪಾಡುವ ಪ್ರಯತ್ನದಲ್ಲಿ ನೂರಾರು ಜನರನ್ನು ಹತ್ಯೆ ಮಾಡಿ ಮಡಿದವರಿಗೆ, ಶಾಶ್ವತ ಸ್ವರ್ಗದ ಆಶ್ವಾಸನೆಯ ಜೊತೆಗೇ, ಸ್ವರ್ಗದಲ್ಲಿ ಸೇವೆ ಮಾಡಲು, ದೇಹ ತಣಿಸಲು ಕಾದು ಕುಳಿತಿರುವ ಕನ್ಯೆಯರನ್ನೂ ಕೊಡಮಾಡುವ ಭರವಸೆ ನೀಡುತ್ತದೆ. ಎಲ್ಲರೂ ಅವರವರ ಮತಧರ್ಮಗಳನ್ನು ಸ್ವಲ್ಪವೂ ತಪ್ಪದೇ ಅನುಸರಿಸಲು ಪ್ರಾರಂಭಿಸಿದರೆ ಸಮಾಜದಲ್ಲಿ ಶಾಂತಿ ಉಳಿಯುವುದು ಅನುಮಾನಾಸ್ಪದ. ಅದೃಷ್ಟವಶಾತ್, ಮತಾನುಯಾಯಿಗಳು ಸಾಮಾಜಿಕ ಒಳಿತಿಗೆ ಒದಗಿಬರುವ ತಮ್ಮ ಧರ್ಮಗ್ರಂಥಗಳ ಭಾಗಗಳಿಂದ ಸ್ಫೂರ್ತಿ ಪಡೆದು, ಸಮಾಜಕ್ಕೆ ತೊಂದರೆ ಮಾಡಬಹುದಾದ ಭಾಗಗಳನ್ನು ಗಮನಿಸದಿರಲು ಕಲಿಯುವುದರಿಂದ ಹೆಚ್ಚಿನವರು ಸತ್ಪ್ರಜೆಗಳಾಗಿಯೇ ಉಳಿಯುತ್ತಾರೆ.

ವಿಜ್ಞಾನ ಧರ್ಮ ನಿರಪೇಕ್ಷ ಮತ್ತು ನೈತಿಕವಾಗಿ ತಟಸ್ಥ. ಉದಾಹರಣೆಗೆ, ಅಣುಛೇದನದಿಂದ ವಿದ್ಯುತ್ ಪಡೆಯುವುದು ಹೇಗೆ ಎನ್ನುವುದನ್ನು ತಿಳಿಸುವುದರ ಜೊತೆಗೇ ಮಾರಕಾಸ್ತ್ರಗಳಾದ ಅಣ್ವಸ್ತ್ರಗಳನ್ನು ಹೇಗೆ ಸಿದ್ಧಪಡಿಸಬಹುದು ಎನ್ನುವುದನ್ನೂ ವಿಜ್ಞಾನ ತಿಳಿಸುತ್ತದೆ. ಎರಡಕ್ಕೂ ಬೇಕಾಗುವ ವೈಜ್ಞಾನಿಕ ತತ್ವಗಳು ಬೇರೆಯಲ್ಲ. ವೈಜ್ಞಾನಿಕ ಅರಿವನ್ನು ಯಾವ ರೀತಿಯಲ್ಲಿ ಬಳಸಿಕೊಳ್ಳಬೇಕೆಂಬುದರ ಬಗ್ಗೆ ವಿಜ್ಞಾನದಲ್ಲಿಯೇ ಉತ್ತರ ದೊರಕುವುದಿಲ್ಲ. ಹಾಗೆಯೇ ಕಣ್ಣಿಗೆ ಕಾಣಿಸದ, ಅನುಭವಕ್ಕೆ ಬಾರದ ದೇವರು ಇರುವನು ಎಂಬುದಕ್ಕಾಗಲಿ, ಇಲ್ಲ ಎಂಬುದಕ್ಕಾಗಲಿ ಯಾವುದೇ ವೈಜ್ಞಾನಿಕ ಆಧಾರ ಇಲ್ಲ. ಆದ್ದರಿಂದ ವಿಜ್ಞಾನ ಕ್ಷೇತ್ರದಲ್ಲಿ ದೇವರಿಗೆ ಜಾಗವಿಲ್ಲ. ಕೆಲ ವಿಜ್ಞಾನಿಗಳು ದೇವರನ್ನು ನಂಬಿರಬಹುದು. ಅದು ಅವರ ವೈಯಕ್ತಿಕ ನಂಬಿಕೆಯೇ ಹೊರತು ವೈಜ್ಞಾನಿಕ ಸತ್ಯ ಎನ್ನಿಸಿಕೊಳ್ಳುವುದಿಲ್ಲ. ಹಾಗೆ ನಂಬಿದ ವಿಜ್ಞಾನಿಗಳ ಸಂಶೋಧನಾ ಲೇಖನಗಳಲ್ಲಂತೂ ದೇವರು ಇಣಿಕಿಯೂ ನೋಡುವುದಿಲ್ಲ.



ಈ ಜಗತ್ತು ಹೇಗೆ ಪ್ರಾರಂಭವಾಯಿತು ಎನ್ನುವ ಬಗ್ಗೆ ಬಹು ಹಿಂದಿನಿಂದಲೂ ಜನರಲ್ಲಿ ಸಹಜ ಕುತೂಹಲವಿದೆ. ಇಂತಹ ಪ್ರಶ್ನೆಗಳಿಗೆ ಉತ್ತರ ನೀಡುವ ಪ್ರಯತ್ನವನ್ನು ಎಲ್ಲ ಧರ್ಮ ಅಥವಾ ಪಂಥಗಳಲ್ಲಿ ಕಾಣುತ್ತೇವೆ. ಋಗ್ವೇದದಲ್ಲಿ ಜಗತ್ತಿನ ಆದಿಯ ಬಗ್ಗೆ ಹೀಗೆ ಹೇಳಲಾಗಿದೆ: "ಆದಿಯಲ್ಲಿ ಆಕಾಶವಿರಲಿಲ್ಲ, ಭೂಮಿಯಿರಲಿಲ್ಲ. ದಿನ, ರಾತ್ರಿಗಳು ಇರಲಿಲ್ಲ. ಕಾಲವೂ ಇರಲಿಲ್ಲ. ಇಂತಹ ವಿಶ್ವದಲ್ಲಿ ಶಕ್ತಿಯ ಒಂದು ಮಹಾಸ್ಫೋಟವಾಯಿತು. ಅದರಿಂದ ಸಮಸ್ತ ವಿಶ್ವವೂ ಜನಿಸಿತು." ಇದು ಜಾಣ ಊಹೆಯೇ ಹೊರತು ವೈಜ್ಞಾನಿಕವಾಗಿ ಕಂಡುಕೊಂಡ ತತ್ವವಲ್ಲ. ವಿಜ್ಞಾನಿಗಳು ಪ್ರತಿಪಾದಿಸಿರುವ "ಬಿಗ್ ಬ್ಯಾಂಗ್" ಕಲ್ಪನೆಗೂ ಋಗ್ವೇದದ ಈ ವಿವರಣೆಗೂ ಹೋಲಿಕೆ ಇರುವಂತೆ ಕಂಡರೂ, ನಮ್ಮ ಋಷಿಗಳಿಗೆ "ಬಿಗ್ ಬ್ಯಾಂಗ್ ತತ್ವ" ಗೊತ್ತಿತ್ತು ಎನ್ನುವುದು ಹಾಸ್ಯಾಸ್ಪದ. ಮಾನವನ ದೀರ್ಘ ಸಾಂಸ್ಕೃತಿಕ ಚರಿತ್ರೆಯಲ್ಲಿ ಲಕ್ಷಾಂತರ ಕಲ್ಪನೆಗಳು ಮೂಡಿಬಂದಿವೆ. ಬಹುಪಾಲು ಕಲ್ಪನೆಗಳಿಗೂ, ಇಂದಿನ ವಿಜ್ಞಾನದ ತತ್ವಗಳಿಗೂ ಯಾವುದೇ ಹೋಲಿಕೆಗಳಿರುವುದಿಲ್ಲ. ಆದರೆ ಕೆಲ ಕಲ್ಪನೆಗಳು ಇಂದಿನ ವಿಜ್ಞಾನದ ತತ್ವಗಳಿಗೆ ಆಕಸ್ಮಿಕ ಹೋಲಿಕೆ ತೋರಿಸುವುದು ಸಹಜ. ಹೀಗೆಯೇ, ಎಲ್ಲ ಮತಗಳಲ್ಲಿಯೂ ವಿಶ್ವದ ಉಗಮದ ಬಗ್ಗೆ ಬಗೆಬಗೆಯ ಕಲ್ಪನೆಗಳಿವೆ. ವಿಜ್ಞಾನ ಮಾತ್ರ ಜಗತ್ತಿನ ಮೂಲದ ಬಗ್ಗೆ ಏಳುವ ಪ್ರಶ್ನೆಗಳನ್ನು ಉತ್ತರಿಸಲು ವೀಕ್ಷಣೆ, ಪರಿಶೋಧನೆಗಳನ್ನೇ ಅವಲಂಬಿಸುತ್ತದೆ. ಆದ್ದರಿಂದ ವಿಜ್ಞಾನದಲ್ಲಿ ದೊರೆಯುವ ವಿವರಣೆ ಸತ್ಯಕ್ಕೆ ಹೆಚ್ಚು ಹತ್ತಿರವಾಗಿರುವುದು ಸಾಧ್ಯ. ಈ ವಿಶ್ವ ಜನಿಸಿ ೨೦೦೦ ಕೋಟಿ ವರ್ಷಗಳಾಗಿರಬಹುದು ಎನ್ನುವುದಕ್ಕೆ ಬಲವಾದ ಆಧಾರಗಳನ್ನು ವಿಜ್ಞಾನ ದೊರಕಿಸಿಕೊಂಡಿದೆ. ಹಾಗೆಯೇ, ನಮ್ಮ ಭೂಮಿ ಅಸ್ತಿತ್ವಕ್ಕೆ ಬಂದು ೫೦೦ ಕೋಟಿ ವರ್ಷಗಳು ಕಳೆದಿವೆ ಎನ್ನುವುದಕ್ಕೆ ವಿಜ್ಞಾನಿಗಳು ಸೂಕ್ತ ಪುರಾವೆಗಳನ್ನು ಕಲೆಹಾಕಿದ್ದಾರೆ.

ವಿಜ್ಞಾನದ ಪರಿಕಲ್ಪನೆಗಳಲ್ಲೆಲ್ಲಾ ಮತಾನುಯಾಯಿಗಳಿಂದ ಅತಿ ಹೆಚ್ಚು ಪ್ರತಿಭಟನೆಗೆ ಒಳಗಾಗಿರುವುದು ಡಾರ್ವಿನ್ನನ ಜೀವವಿಕಾಸವಾದ. ಪ್ರಕೃತಿಯಲ್ಲಿ ಕಂಡುಬರುವ ಜೀವ ವೈವಿಧ್ಯತೆಯ ಆಧಾರದಿಂದ ಡಾರ್ವಿನ್ ವಿಕಾಸವಾದವನ್ನು ಮಂಡಿಸಿದ. ಅವನ ಪ್ರಕಾರ ಜೀವವಿಕಾಸ ನಮ್ಮ ಭೂಮಿಯಲ್ಲಿ ಒಮ್ಮೆ ಮಾತ್ರ ಸಹಜವಾಗಿ, ಯಾವ ಹೊರ ಪ್ರೇರಣೆಯೂ ಇಲ್ಲದೆ ಪ್ರಾರಂಭವಾದ ಸರಪಣಿ ಕ್ರಿಯೆ. ವಿಜ್ಞಾನದಲ್ಲಿ ಪ್ರತಿಪಾದಿಸಿದ ಯಾವುದೇ ತತ್ವದಲ್ಲಿ ಹುರುಳಿದ್ದರೆ ಮುಂದಿನ ದಿನಗಳ ಪ್ರಯೋಗಗಳು ಅಂತಹ ತತ್ವಕ್ಕೆ ಪುಷ್ಟೀಕರಣ ನೀಡುತ್ತವೆ. ಹುರುಳಿಲ್ಲದಿದ್ದರೆ, ಮುಂದಿನ ವೀಕ್ಷಣೆಗಳು ತತ್ವಕ್ಕೆ ಹೊಂದಿಕೊಳ್ಳದೇ ಪ್ರತಿಪಾದಿಸಿದ ತತ್ವದ ದೋಷವನ್ನು ಬಹಿರಂಗಪಡಿಸುತ್ತವೆ. ಡಾರ್ವಿನ್ನನ ತರುವಾಯ ನಡೆಸಿದ ಹೊಸ ಸಂಶೋಧನೆಗಳು ಜೀವವಿಕಾಸವಾದಕ್ಕೆ ಬಲವಾದ ಸಮರ್ಥನೆ ನೀಡಿವೆ. ನಮ್ಮ ಭೂಮಿಯಲ್ಲಿ ಹಿಂದಿನಿಂದ ನಶಿಸದೆ ಉಳಿದುಬಂದಿರುವ ಪ್ರಾಣಿ ಮೂಳೆಗಳ ಪಳೆಯುಳಿಕೆಗಳು ಡಾರ್ವಿನ್ನನ ಜೀವವಿಕಾಸವಾದವನ್ನು ಸಮರ್ಥಿಸುತ್ತವೆ. ಅಂತಹ ಸಹಸ್ರಾರು ಪಳೆಯುಳಿಕೆಗಳನ್ನು ವಿಜ್ಞಾನಿಗಳು ಶ್ರಮಪಟ್ಟು ಸಂಪಾದಿಸಿದ್ದಾರೆ. ಈ ಮೂಳೆಗಳಲ್ಲಿ ಅಣುಭೇದನದಿಂದ ಉಂಟಾಗುವ ಒಂದು ಬಗೆಯ ಕಾಂತಿಯಿರುತ್ತದೆ. ಈ ಕಾಂತಿ ಕಾಲ ಕಳೆದಂತೆ ಕ್ಷೀಣಿಸುತ್ತದೆ. ಅಂದರೆ ಮೂಳೆ ಹಳೆಯದಾದಷ್ಟು, ಅದರಲ್ಲಿ ಉಳಿದಿರುವ ಕಾಂತಿ ಕಡಿಮೆ. ಮೂಳೆಯಲ್ಲಿ ಉಳಿದಿರುವ ಕಾಂತಿಯನ್ನು ಪರಿಗಣಿಸಿ, ಮೂಳೆ ಎಷ್ಟು ಹಳೆಯದೆನ್ನುವುದನ್ನು ವಿಜ್ಞಾನಿಗಳು ತೀರ್ಮಾನಿಸುತ್ತಾರೆ. ಆನೆಗಿಂತಲೂ ದೈತ್ಯಾಕಾರದ ಡೈನೊಸಾರಸ್ ಎನ್ನುವ ಪ್ರಾಣಿಗಳು ನಮ್ಮ ಭೂಮಿಯಲ್ಲಿ ಬದುಕಿದ್ದವು ಎಂಬುದನ್ನು ಭೂಪದರದಲ್ಲಿ ಇನ್ನೂ ಕಾಣಸಿಗುವ ಪಳೆಯುಳಿಕೆಗಳಿಂದ ತಿಳಿದುಕೊಂಡಿದ್ದೇವೆ. ಕಾರಣಾಂತರಗಳಿಂದ ಈ ಎಲ್ಲ ಪ್ರಾಣಿಗಳು ೬೫೦ ಲಕ್ಷ ವರ್ಷಗಳ ಹಿಂದೆ ನಶಿಸಿಹೋದವು. ಏಕೆಂದರೆ ೬೫೦ ಲಕ್ಷ ವರ್ಷಗಳಿಂದ ಇತ್ತೀಚಿಗಿನ ಕಾಲದಲ್ಲಿ ಡೈನೊಸಾರಿಗೆ ಸೇರಿದ್ದೆಂದು ಹೇಳಬಹುದಾದ ಪಳೆಯುಳಿಕೆಗಳು ಕಂಡುಬಂದಿಲ್ಲ. ಹಾಗೆಯೇ, ಮಾನವ ಮೂಲದ ಮೂಳೆ ಎಂದು ಹೇಳಬಹುದಾದ ಪಳೆಯುಳಿಕೆಗಳೆಲ್ಲ ಇತ್ತೀಚಿನ ಒಂದು ಲಕ್ಷ ವರ್ಷಗಳಿಗೆ ಸೀಮಿತವಾಗಿವೆ. ಅದಕ್ಕೂ ಹಿಂದಿನ ಪಳೆಯುಳಿಕೆಗಳು ಮಾನವರಿಗೆ ಸಂಬಂಧಪಟ್ಟಂತೆ ತೋರುವುದಿಲ್ಲ. ಆದ್ದರಿಂದ ಭೂಮಿಯಲ್ಲಿ ಮಾನವ ಕಾಣಿಸಿಕೊಂಡು ಸುಮಾರು ಒಂದು ಲಕ್ಷ ವರ್ಷಗಳಾಗಿವೆ ಎಂದು ತೀರ್ಮಾನಿಸಬಹುದು. ಇಪ್ಪತ್ತನೆಯ ಶತಮಾನದ ಉತ್ತರಾರ್ಧ ಭಾಗದಲ್ಲಿ ಬೆಳೆದುಬಂದ ತಳಿ ವಿಜ್ಞಾನ ಡಾರ್ವಿನ್ನನ ವಿಕಾಸವಾದಕ್ಕೆ ಬಹಳ ಬಲವಾದ ಹೊಸ ಪುರಾವೆಯನ್ನು ಒದಗಿಸಿದೆ. ಇಂದು ಬದುಕಿರುವ ಎಲ್ಲ ಜೀವಜಾತಿಗಳ ವಂಶವಾಹಿ ಮಾಹಿತಿಯಲ್ಲಿ ಅಡಗಿರುವ ಸಾಮ್ಯತೆಯೇ ಈ ಪುರಾವೆ. ಈ ಸಾಮ್ಯತೆ ಎಲ್ಲ ಜೀವಿಗಳೂ ಒಂದೇ ಮೂಲದಿಂದ ವಿಕಾಸಗೊಂಡಿವೆ ಎನ್ನುವುದಕ್ಕೆ ಬಲವಾದ ಸಮರ್ಥನೆ ನೀಡುತ್ತದೆ.

ಎಲ್ಲ ಮತಪಂಥಗಳು ಜೀವವಿಕಾಸಕ್ಕೆ ತಮ್ಮದೇ ಆದ ವಿವರಣೆಯನ್ನು ನೀಡಿವೆ. ಇಂತಹ ವಿವರಣೆಗಳು ವಿಜ್ಞಾನ ಒಪ್ಪಿಕೊಂಡಿರುವ ವಿಕಾಸವಾದಕ್ಕೆ ಹೊಂದಿಕೊಂಡಿಲ್ಲ ಎನ್ನುವುದು ಅಚ್ಚರಿಯ ವಿಷಯವಲ್ಲ. ಈ ಮತಧರ್ಮಗಳು ಪ್ರಾರಂಭವಾದಾಗ ಇಂದಿನ ವೈಜ್ಞಾನಿಕ ಅರಿವಿರಲಿಲ್ಲ. ಆದ್ದರಿಂದ ಅಂದು ಪ್ರಚಾರ ಮಾಡಿದ ಧರ್ಮಗಳಲ್ಲಿ ಇಂದು ನಮಗೆ ತಿಳಿದಿರುವ ವೈಜ್ಞಾನಿಕ ತತ್ವಗಳು ಇರದಿರುವುದು ಸಹಜ. ಉದಾಹರಣೆಗೆ, ಅಣು ಅಸ್ತ್ರಗಳ ಬಗ್ಗೆ ಯಾವ ಧರ್ಮದಲ್ಲಿಯೂ ಯಾವುದೇ ಮಾಹಿತಿ ದೊರೆಯುವುದಿಲ್ಲ. ಆದರೂ, ತಮ್ಮ ಧರ್ಮ ಗ್ರಂಥವೇ ಪರಮ ಸತ್ಯ, ಅದರಲ್ಲಿ ಪ್ರಪಂಚದ ಬಗ್ಗೆ ಎಲ್ಲ ಮಾಹಿತಿಯೂ ಅಡಗಿದೆ ಎಂದು ನಂಬುವವರನ್ನು ಎಲ್ಲ ಧರ್ಮ ಪಂಥಗಳಲ್ಲಿಯೂ ಕಾಣಬಹುದು. ಇಂತಹ ಜನರಿಗೆ ವಿಜ್ಞಾನ ಸಹ್ಯವಾಗುವುದಿಲ್ಲ. ಸೃಷ್ಟಿಕರ್ತನು ವಿಶ್ವವನ್ನು ಕೇವಲ ಹತ್ತಾರು ಸಹಸ್ರ ವರ್ಷಗಳ ಹಿಂದೆ ಏಳು ದಿನಗಳಲ್ಲಿ ನಿರ್ಮಿಸಿದ ಎಂದು ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ತಿಳಿಸುತ್ತವೆ. ಡಾರ್ವಿನ್ನನ ವಿಕಾಸವಾದದಲ್ಲಿ ಜೀವದ ಉಗಮಕ್ಕೆ ಪ್ರಕೃತಿಗೆ ಹೊರತಾದ ಯಾವುದೇ ಪ್ರೇರಣೆಯ ಅವಶ್ಯಕತೆಯಿಲ್ಲ. ಈ ರೀತಿಯ ವೈರುಧ್ಯಗಳಿಂದಾಗಿ ಇಸ್ಲಾಂ ಮತ್ತು ಕ್ರೈಸ್ತ ಮತಾಭಿಮಾನಿಗಳು ವಿಕಾಸವಾದವನ್ನು ಮತ್ತು ಡಾರ್ವಿನ್ನರನ್ನು ಬಹಳ ಖಂಡಿಸಿದ್ದಾರೆ. ನಮ್ಮ ದೇಶದಲ್ಲಿ ಇಂತಹ ವೈರುಧ್ಯಗಳು ಹೆಚ್ಚು ಕಂಡುಬಂದಿಲ್ಲ. ಬಹುಶಃ ಇದಕ್ಕೆ ನಮ್ಮಲ್ಲಿ ವೈಜ್ಞಾನಿಕ ಅರಿವು ಕಡಿಮೆಯಾಗಿರುವುದು ಮುಖ್ಯ ಕಾರಣ. ನಮ್ಮ ದೇಶದ ಧರ್ಮಗಳಲ್ಲಿ ಮನೋವೈಶಾಲ್ಯತೆ ಹೆಚ್ಚು ಎನ್ನುವುದು ದುರಭಿಮಾನವಾಗುತ್ತದೆ.

ವಿಜ್ಞಾನಕ್ಕೂ ಧರ್ಮಕ್ಕೂ ನೇರ ಸಂಬಂಧವಿಲ್ಲದಿದ್ದರೂ, ಧರ್ಮ ಏಕೆ ಮತ್ತು ಹೇಗೆ ಪ್ರಾರಂಭವಾಗಿರಬಹುದು ಎನ್ನುವುದನ್ನು ವೈಜ್ಞಾನಿಕವಾಗಿ ಪರಿಶೀಲಿಸುವ ಪ್ರಯತ್ನ ಮಾಡಬಹುದು. ವ್ಯವಸಾಯವನ್ನು ಕಂಡುಕೊಳ್ಳುವ ಮೊದಲು ಮನುಷ್ಯ ಕಾಡಿನಲ್ಲಿ ಬದುಕುತ್ತಿದ್ದ. ಆಹಾರ ಸಂಪಾದನೆ ಬಹಳ ಶ್ರಮದಾಯಕವಾಗಿತ್ತು ಮತ್ತು ದೊರೆಯಬಹುದಾದ ಆಹಾರ ಸೀಮಿತವಾಗಿತ್ತು. ಪ್ರಕೃತಿಯನ್ನೇ ತಮ್ಮ ಎಲ್ಲ ಅವಶ್ಯಕತೆಗಳಿಗೂ ನಂಬಿಕೊಂಡಿದ್ದ ಇಂತಹ ಕಾಡುಗಳಲ್ಲಿ ವಾಸಿಸುತ್ತಿದ್ದ ಜನ, ಸಣ್ಣ, ಸಣ್ಣ ಗುಂಪುಗಳಲ್ಲಿ ಮಾತ್ರ ಬದುಕಲು ಸಾಧ್ಯವಾಗುತ್ತಿತ್ತು. ಗುಂಪಿನ ಸದಸ್ಯರೆಲ್ಲ ಒಗ್ಗಟ್ಟಾಗಿ ಶ್ರಮಿಸಿದರೆ ಮಾತ್ರ ಗುಂಪು ಬದುಕಿ ಉಳಿಯಲು ಸಾಧ್ಯವಿತ್ತು. ಇಲ್ಲದಿದ್ದರೆ, ಕಾಡುಪ್ರಾಣಿಗಳ ಬಾಯಿಗೋ, ಇನ್ನೊಂದು ಗುಂಪಿನ ಹೊಡೆತಕ್ಕೋ ಸಿಕ್ಕಿ ನಾಶವಾಗುವ ಸಾಧ್ಯತೆ ಇರುತ್ತಿತ್ತು. ಆದ್ದರಿಂದ, ಬದುಕಿ ಉಳಿಯಲು ಕೆಲಮಟ್ಟದ ಸಂಯಮವನ್ನು ಎಲ್ಲರೂ ತೋರಬೇಕಾಗಿತ್ತು. ಪರಸ್ಪರ ಸಹಕಾರ ತೋರದಿದ್ದರೆ ಇಡೀ ಗುಂಪೇ ನಿರ್ನಾಮಗೊಳ್ಳುವ ಸಾಧ್ಯತೆಯಿತ್ತು. ಆಕಸ್ಮಿಕವಾಗಿ ಇಂತಹ ಮೌಲ್ಯಗಳು ವಿಕಾಸಗೊಂಡ ಗುಂಪುಗಳು ಮಾತ್ರ ಬದುಕಿ ಉಳಿಯಲು ಸಾಧ್ಯವಾಗುತ್ತಿತ್ತು.

ಇಂತಹ ಮೌಲ್ಯಗಳನ್ನು ಗುರುತಿಸುವ, ಪ್ರೋತ್ಸಾಹಿಸುವ ಗುಣಗಳಿದ್ದಾಗ ಜೀವನ ಹಸನಾಗಿ, ಅಂತಹ ಗುಂಪಿನವರ ಸಂಖ್ಯೆ ಹೆಚ್ಚಿ ಅವರು ಬೇರೆ ಜಾಗಗಳನ್ನು ಆಕ್ರಮಿಸಿಕೊಳ್ಳುವ ಸಾಧ್ಯತೆ ಹೆಚ್ಚುತ್ತಿತ್ತು. ಇದರಿಂದಾಗಿ ಸಹಕಾರ, ನಿಸ್ವಾರ್ಥತೆ ಮುಂತಾದ ಗುಣಗಳು ಸಹಜವಾಗಿ ವಿಕಾಸಹೊಂದಿದವು. ಬಹುಶಃ ಈ ಸಹಜ ಜನಿತ ಸಂಯಮವೇ ಮೊದಲ ಸಾಮಾಜಿಕ ಕಟ್ಟುಪಾಡುಗಳ ಮತ್ತು ಮತಧರ್ಮಗಳ ಉಗಮಕ್ಕೆ ಕಾರಣವಾಗಿರಬಹುದು. ಸಣ್ಣ ಗುಂಪುಗಳಲ್ಲಿ ಬದುಕುತ್ತಿದ್ದಾಗ, ಇಂತಹ ಸಂಯಮ ಅದೇ ಗುಂಪಿಗೆ ಸೇರಿದವರಿಗೆ ಸೀಮಿತವಾಗಿದ್ದರೆ ಸಾಕಾಗಿತ್ತು. ಸಹಿಷ್ಣುತೆ ಸ್ವಂತ ಗುಂಪನ್ನು ದಾಟಿ ಬೇರೆ ಗುಂಪಿಗೂ ಅನ್ವಯಿಸುವ ಅಗತ್ಯವಿರಲಿಲ್ಲ. ಇತರ ಗುಂಪಿನವರನ್ನು ಶೋಷಿಸುವುದರಿಂದ ಅಥವಾ ಹಿಂಸಿಸುವುದರಿಂದ ಅಂತಹ ದೊಡ್ಡ ಪ್ರಮಾದವಾಗುತ್ತಿರಲಿಲ್ಲ. ಒಂದು ಗುಂಪಿಗೆ ಸೇರಿದ ಎಲ್ಲರೂ ಬಹುಶಃ ರಕ್ತ ಸಂಬಂಧಿಗಳೇ ಆಗಿರುತ್ತಿದ್ದರು. ಆದ್ದರಿಂದ ಪರಸ್ಪರ ಸಹಕಾರ ರಕ್ತ ಸಂಬಂಧಿಗಳ ನಡುವೆ ಇದ್ದರೆ ಸಾಕಾಗಿತ್ತು. ಇದೇ ಇಂದಿಗೂ ಕಂಡುಬರುವ "ಸ್ವಜನ ಪಕ್ಷಪಾತ" ಮತ್ತು "ರೇಶಿಯಲ್ ಪ್ರೆಜುಡಿಸ್‌ಗೆ" ಪ್ರೇರಕವಾಗಿರಬಹುದು.

ವ್ಯವಸಾಯ ಕಂಡುಕೊಂಡ ನಂತರ ಮನುಷ್ಯನಿಗೆ ಕಾಡಿನಲ್ಲಿ ವಾಸಿಸುವ ಅಗತ್ಯ ಇರಲಿಲ್ಲ. ಹಳ್ಳಿಗಳನ್ನು, ಸಣ್ಣ ಪಟ್ಟಣಗಳನ್ನು ಕಟ್ಟಿಕೊಂಡು ವಾಸಿಸಲು ಸಾಧ್ಯವಾಗಿತ್ತು. ಇದರಿಂದ ಹೆಚ್ಚಿನ ಸಂಖ್ಯೆಯ ಜನರು ಒಟ್ಟಿಗೆ ಬದುಕುವ ಅಗತ್ಯ ಬಂದಿತು. ಇಂತಹ ಸಮಾಜ ಅಳಿಯದಿರಲು, ಆ ಸಮಾಜಕ್ಕೆ ಸೇರಿರುವ ಜನರಲ್ಲಿ ಪರಸ್ಪರ ಸಹಕರಿಸುವ ಮನೋಭಾವ ಸ್ವಲ್ಪವಾದರೂ ಇರಬೇಕಾಗುತ್ತದೆ. ಅಂತಹ ಸ್ವಭಾವ ವಿಕಾಸಗೊಳ್ಳದ ಸಮಾಜ ನಾಶಹೊಂದುವ ಸಾಧ್ಯತೆ ಇರುತ್ತದೆ. ದ್ವೇಷಾಸೂಯೆಗಳಿಂದ ಕೂಡಿ, ಸದಾ ಪರಸ್ಪರ ಕಚ್ಚಾಡುತ್ತಿರುವ ಜನಾಂಗ ಏಳಿಗೆ ಸಾಧಿಸುವ ಸಾಧ್ಯತೆ ಕಡಿಮೆ. ಕಚ್ಚಾಡುವವರಿಗಿಂತ ಪರಸ್ಪರ ಸಹಕಾರ ತೋರುವ ಜನಾಂಗ ಸಹಜವಾಗಿ ಹೆಚ್ಚು ವೃದ್ಧಿಯಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ವಿಕಾಸಗೊಂಡ ಸಮಾಜವು ಸಹಕರಿಸುವುದನ್ನು ಮನ್ನಿಸುವ, ಗೌರವಿಸುವ ಮನೋಭಾವವನ್ನು ಸಹಜವಾಗಿ ಪಡೆದಿರುತ್ತದೆ. ಇದೇ ಧಾರ್ಮಿಕತೆಯ ಮೂಲವೂ ಆಗಿರುವಂತೆ ತೋರುತ್ತದೆ. ಆದ್ದರಿಂದ ಸಾಮಾನ್ಯವಾಗಿ ಗೌರವಿಸಲ್ಪಡುವ ಉದಾತ್ತ ಗುಣಗಳು ಜೀವ ವಿಕಾಸದ ಸಹಜ ಪರಿಣಾಮಗಳೇ ಹೊರತು ಧಾರ್ಮಿಕ ನಂಬಿಕೆಗಳಿಂದ ಪ್ರೇರಿತವಾದುವಲ್ಲ ಎನ್ನಬಹುದು. ವಿವಿಧ ದೇಶಗಳ ಸಾಮಾಜಿಕ ಪರಿಸ್ಥಿತಿಯನ್ನು ಅವಲೋಕಿಸಿದರೆ, ಸಾಮಾಜಿಕ ಹಿತಕ್ಕಾಗಿ ಶ್ರಮಪಡುವುದರಲ್ಲಿ ಧಾರ್ಮಿಕತೆಯನ್ನು ಬಹುವಾಗಿ ತ್ಯಜಿಸಿರುವ ದೇಶಗಳ ಜನ (ಉದಾಹರಣೆಗೆ ಫ್ರೆಂಚರು) ಬಹಳ ಸಂಪ್ರದಾಯಶೀಲ ದೇಶದವರಿಗಿಂತ (ಉದಾಹರಣೆಗೆ ಸೌದಿ ಅರೇಬಿಯನ್ನರು) ಹಿಂದೆ ಬಿದ್ದಿಲ್ಲ ಎನ್ನುವುದು ಮನದಟ್ಟಾಗುವುದು.

ಮಾನವ ಜನಾಂಗವನ್ನು ಪ್ರಕೃತಿ ವಿಕೋಪಗಳಾದ ಪ್ರವಾಹ, ಬರಗಾಲ, ಸಾಂಕ್ರಾಮಿಕ ರೋಗಗಳು, ಭೂಕಂಪ, ಕಾಳ್ಗಿಚ್ಚು ಮುಂತಾದುವುಗಳು ಎಲ್ಲ ಕಾಲ ಗಳಲ್ಲಿಯೂ ಕಾಡಿವೆ. ಇಂತಹ ಪ್ರಕೃತಿ ದತ್ತ ಕಷ್ಟಗಳಿಂದ ನಾವು ತಪ್ಪಿಸಿಕೊಳ್ಳಲಾರೆವು. ಈ ಕಷ್ಟಗಳ ಸರಮಾಲೆಯನ್ನು ಧಾರ್ಮಿಕ ದುರಭಿಮಾನ ಹೆಚ್ಚಿಸದಿರುವಂತೆ ನೋಡಿ ಕೊಳ್ಳುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು, ದೇಶ ವಿಭಜನೆಯಾದಾಗ ನಡೆದ ಮತೀಯ ಗಲಭೆ ಪ್ರಪಂಚದ ಅತ್ಯಂತ ಕ್ರೂರ ಘಟನೆ ಗಳಲ್ಲೊಂದು. ಇತ್ತೀಚೆಗೆ ಮತೀಯ ಗಲಭೆಗೆ ತುತ್ತಾದ ದೊಡ್ಡ ಗುಂಪು ಬರ್ಮ ದೇಶದಿಂದ ಬಾಂಗ್ಲಾ ದೇಶಕ್ಕೆ ವಲಸೆಬಂದು ಬವಣೆ ಅನುಭವಿಸುತ್ತಿರುವ "ರೊಹಿಂಗ್ಯ" ಜನಾಂಗ. ಶಿಯಾ ಇರಾನ್ ಮತ್ತು ಸುನ್ನಿ ಸೌದಿ ಅರೇಬಿಯಗಳ ಜಗಳದಿಂದ ಯೆಮೆನ್ ದೇಶದ ಸಮಸ್ತ ಜನರೂ ಅಳಿವಿನ ಅಂಚಿಗೆ ತಲುಪಿದ್ದಾರೆ. ಯೆಮೆನ್ ಕದನಕ್ಕೆ ಅನೇಕ ಕಾರಣಗಳಿರ ಬಹುದಾದರೂ, ಶಾಂತಿ ಸಂಧಾನಕ್ಕೆ ಅಡ್ಡಿಯಾಗಿರುವ ಅಂಶಗಳಲ್ಲಿ ಧರ್ಮಾಂಧತೆಯೂ ಒಂದು. ನಮ್ಮ ದೇಶದಲ್ಲೂ ಜಾತೀಯತೆ ಮಾಡುತ್ತಿರುವ ಹಾನಿ ಭವಿಷ್ಯದ ಬಗ್ಗೆ ಭರವಸೆ ಮೂಡಿಸುವುದಿಲ್ಲ. ಇರಲಿ. ವೈಜ್ಞಾನಿಕ ಶಿಕ್ಷಣ ಇಂತಹ ಪ್ರವೃತ್ತಿಗೆ ಕಡಿವಾಣ ಹಾಕಬಲ್ಲದು. ಪ್ರಪಂಚದ ಎಲ್ಲ ಕಡೆ ಕಲಿಸುವುದು ಒಂದೇ ವಿಜ್ಞಾನವನ್ನು. ದೇಶ ದೇಶಗಳ, ವಿವಿಧ ಮತಧರ್ಮಗಳ ಜನರು ಕಲಿಯುವ ವಿಜ್ಞಾನದ ನಿಯಮಗಳಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ವೈಜ್ಞಾನಿಕ ಮನೋಭಾವವನ್ನು ಬೆಳೆಸುವಂತಹ ಶಿಕ್ಷಣ ನಮ್ಮ ದೇಶದ ಮಕ್ಕಳೆಲ್ಲರಿಗೂ ದೊರೆಯಲಿ ಎನ್ನುವುದು ಬರಿಯ ಹಾರೈಕೆಯಾಗಿ ಉಳಿಯದಿರಲಿ.

**ಪ್ರೊ॥ ಎಂ. ಆರ್. ಎನ್. ಮೂರ್ತಿ**
ಮಾಲೆಕ್ಯೂಲರ್ ಬಯೋಫಿಸಿಕ್ಸ್ ಯೂನಿಟ್, ಐ.ಐ.ಎಸ್ಸಿ., ಬೆಂಗಳೂರು– ೫೬೦ ೦೧೨

# ಗಂಟೆ, ಪ್ರಾರ್ಥನೆ, ಆಜಾನುಗಳ ಶಬ್ದಗಳ ನಡುವೆ !



ನಾನು ಹುಟ್ಟಿದ್ದು ದೇವಸ್ಥಾನದ ಪಕ್ಕದ
ಮನೆಯಲ್ಲಾದ್ದರಿಂದ ಅದರ ಗಂಟೆಗಳ ಶಬ್ದಗಳೊಳಗೆ
ನನ್ನ ಮೊದಲ ಅಳು ಕೇಳಿಸಲೇ ಇಲ್ಲವಂತೆ
ಅದಾದ ಮೇಲೂ ನಾನು
ದೇಗುಲಗಳ ಗಂಟೆಗಳ
ಚರ್ಚುಗಳ ಪ್ರಾರ್ಥನೆಗಳ
ಮಸೀದಿಯ ಆಜಾನುಗಳ
ಶಬ್ದಗಳ ಕೇಳುತ್ತಲೇ ಬೆಳೆದುಬಿಟ್ಟೆ
ಆ ಯಾವ ಶಬ್ದಗಳೂ
ನನ್ನ ದೈವದ ಬಳಿಗೆ ಕರೆದೊಯ್ಯಲಿಲ್ಲ
ಇದೀಗ ಇಡೀ ಊರಲ್ಲಿ ಅವುಗಳ ಶಬ್ದಗಳದೇ
ಕಾರುಬಾರುಗಳಾಗಿ
ಮನುಷ್ಯರ ಮಾತುಗಳು ಕೇಳುತ್ತಲೇ ಇಲ್ಲ

**ಕು. ಸ. ಮಧುಸೂದನ ರಂಗೇನಹಳ್ಳಿ**
ರಂಗೇನಹಳ್ಳಿ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ – ೫೭೭ ೧೪೪




ನಗರಗೆರೆ ರಮೇಶ್

# ಬಾವುಟದ ಹಗ್ಗ

ಹೆಡ್ಮಾಸ್ಟರ್ ಶಿವಣ್ಣ ನಿಧಾನವಾಗಿ ಸ್ಕೂಟರ್ ಓಡಿಸುತ್ತಿದ್ದ. ಅವನ ಮುಖದಲ್ಲಿ ಸಂತೋಷ ತುಂಬಿತ್ತು. ವಯಸ್ಸು ಚಿಕ್ಕದೇ; ಆದ್ದರಿಂದ ಶಿವಣ್ಣನನ್ನು ಅವನು ಅಂತಲೇ ಕರೆಯೋಣ. ಒಂದು ಹೈಸ್ಕೂಲಿನ ಮುಖ್ಯೋಪಾಧ್ಯಾಯನಾದರೂ ಇನ್ನೂ ಹುಡುಗುತನ ಪೂರ್ತಿ ಬಿಟ್ಟಿಲ್ಲ. ಆಕಡೆ, ಈಕಡೆ ನೋಡಿ ಸಣ್ಣಗೆ ಶಿಳ್ಳೆ ಹಾಕುತ್ತಾ ಮುಂದಕ್ಕೆ ಸಾಗುತ್ತಿದ್ದ.

ಅವನ ಸಂತೋಷಕ್ಕೆ ಕಾರಣವಿದೆ. ಅವತ್ತು ಆಗಸ್ಟ್ ೧೫. ಹೊಸ ನಾಡು ಉದಯವಾದ ದಿನ. ಶಿವಣ್ಣ ಹೆಡ್ಮಾಸ್ಟರ್ ಆಗಿ ಈ ಶಾಲೆಗೆ ಬಂದನಂತರ ಆಚರಿಸಿದ ಮೊದಲನೆಯ ರಾಷ್ಟ್ರೀಯ ಹಬ್ಬ. ಆಚರಣೆಯಲ್ಲಿ ಏನಾದರೂ ಎಡವಟ್ಟು ಆಗುತ್ತದೇನೋ ಅಂತ ಡವಡವ ಇದ್ದೇ ಇತ್ತು. ಮೇಲಾಗಿ ಅದುವರೆಗೂ ಪ್ರಭಾರಿಯಾಗಿದ್ದು ತಾನು ಬಂದಮೇಲೆ ಆ ಸ್ಥಾನವನ್ನು ಕಳೆದುಕೊಂಡ ಮತ್ತೊಬ್ಬ ಮೇಷ್ಟ್ರಿಗೆ ತನ್ನನ್ನು ಕಂಡರೆ ಅಷ್ಟಕ್ಕಷ್ಟೆ ಅಂತ ಶಿವಣ್ಣನಿಗೆ ಅದೇನೋ ಅನುಮಾನ. ಸ್ವಲ್ಪ ತಪ್ಪು ನಡೆದರೂ ಆತ ಮೇಲಧಿಕಾರಿಗಳಿಗೆ ದೂರು ಕೊಟ್ಟೇಕೊಡ್ತಾನೆ ಅನ್ನೋ ಭಯ. ಹಾಗಾಗಿ ಆ ದಿನ ಶಿವಣ್ಣ ತುಂಬ ಹುಷಾರಾಗಿದ್ದ. ಸಮಾರಂಭ ಮುಗಿದ ಮೇಲೆ, ಆ ಮೇಷ್ಟ್ರು ಸೇರಿದಂತೆ ಎಲ್ಲರೂ ಬಂದು ಅಭಿನಂದಿಸಿದಾಗಲೇ ಮನಸ್ಸು ನಿರಾಳವಾಗಿದ್ದು. ಮೇಲಾಗಿ ಅವತ್ತಿನ ಮುಖ್ಯ ಅತಿಥಿಗಳೂ ಸಹ ತನ್ನನ್ನು ಹೊಗಳಿದ್ದು ಅಟ್ಟಕ್ಕೇರಿದ ಹಾಗಾಗಿತ್ತು.

ಹಾಗೆ ನೋಡಿದರೆ, ಅವತ್ತಿನ ಅತಿ ಮುಖ್ಯ ಗಣ್ಯ ವ್ಯಕ್ತಿಯ ವಿಷಯದಲ್ಲೇ ಸ್ವಲ್ಪ ತೊಂದರೆ ಆಯಿತು. ಅಂದಿನ ಭಾಷಣ ಮಾಡಬೇಕಾಗಿದ್ದ ಪಂಚಾಯತಿ ಅಧ್ಯಕ್ಷ ಬಾವುಟ ಹಾರಿಸಿದ ನಂತರ, ಅದು ಯಾವುದೋ ಅರ್ಜೆಂಟ್ ಕೆಲಸ ಇದೆ ಅಂತ ಹೊರಟುಹೋದರು. ತನ್ನ ಜಾಗದಲ್ಲಿ ಭಾಷಣ ನೀಡುವಂತೆ ಅಲ್ಲಿಗೆ ಬಂದಿದ್ದ ಬ್ಯಾಂಕ್ ಮ್ಯಾನೇಜರನ್ನು ವಿನಂತಿಸಿ ಹೋದರು. ಅವರು ಸಂತೋಷದಿಂದ ಒಪ್ಪಿ ಸುಮಾರು ಒಂದು ಗಂಟೆ ಭಾಷಣ ಕುಟ್ಟಿದರು. ಭಾರತದ ಹಿರಿಮೆ, ಭವ್ಯ ಭಾರತೀಯ ಸಂಸ್ಕೃತಿ, ದೇಶಭಕ್ತಿ, ಗೋ ರಕ್ಷಣೆ ಮುಂತಾದ ವಿಷಯಗಳ ಬಗ್ಗೆ ಅವರ ನಿರರ್ಗಳ ಮಾತುಗಳಿಗೆ ಅಲ್ಲಿದ್ದ ಮಕ್ಕಳು ಆಗಾಗ ಚಪ್ಪಾಳೆ ಹೊಡೆಯುತ್ತಿದ್ದರು. ಯಾರೇ ಹೊರಗಿನವರು ಬಂದು ಭಾಷಣ ಮಾಡಿದಾಗಲೂ ನಿಗದಿತ ಸಮಯಗಳಲ್ಲಿ ಹೀಗೆ ಚಪ್ಪಾಳೆ ಹೊಡೆಯಬೇಕೆಂದು ಅವರ ಗಣಿತ ಕಂ ಇಂಗ್ಲಿಷ್ ಮೇಷ್ಟ್ರು ಅವರಿಗೆ ತರಬೇತಿ ನೀಡಿದ್ದರು. ಆ ಭಾಷಣ ಮುಗಿದ ನಂತರ ತಾನೇನು ಕಡಿಮೆ ಎಂಬಂತೆ ಶಿವಣ್ಣ ಸಹ ದೇಶದ ಇಂದಿನ ಸಮಸ್ಯೆಗಳು ರೈತರ ಸಾಲ, ಆತ್ಮಹತ್ಯೆಗಳು ಮುಂತಾದ ವಿಷಯಗಳ ಬಗ್ಗೆ ತಾನೂ ಅರ್ಧ ಗಂಟೆ ಭಾಷಣ ಬಿಗಿದ. ತಮ್ಮ ಹೆಡ್ಮಾಸ್ಟರ್ ಮಾತುಗಳಿಗೂ ಚಪ್ಪಾಳೆಗಳ ಸುರಿಮಳೆ. ಅಂತೂ ಬ್ಯಾಂಕ್ ಮ್ಯಾನೇಜರ್, ಹೆಡ್ಮಾಸ್ಟರ್ ಇಬ್ಬರಿಗೂ ಸಂತೋಷವೋ ಸಂತೋಷ. ಕೊನೆಗೆ ಮಿಠಾಯಿ ಹಂಚಿಕೆ, ಎಲ್ಲರೂ ಮನೆಗಳಿಗೆ ಹೊರಟರು.

ಶಿವಣ್ಣ ಒಬ್ಬನೇ ನಿಂತು ತಾನು ಸ್ವಂತ ಖರ್ಚಿನಿಂದ ತಂದಿದ್ದ ಬಾವುಟದ ಕಡೆ ನೋಡುತ್ತಿದ್ದ. ಎಲ್ಲ ಕಡೆ ನಿಶ್ಶಬ್ದ. ಸುತ್ತಮುತ್ತಲಿನ ಆರು ಹಳ್ಳಿಗಳಿಗೆ ಅದೊಂದೇ ಪ್ರೌಢಶಾಲೆ. ಹಿಂದೆ ೧೫೦ ಜನ ಇದ್ದ ಮಕ್ಕಳ ಸಂಖ್ಯೆ ಈಗ ೬೫ಕ್ಕೆ ಬಂದು ನಿಂತಿದೆ. ಹಣವಂತರು ತಮ್ಮ ಮಕ್ಕಳನ್ನು ಸ್ವಲ್ಪ ದೂರದ ಖಾಸಗಿ ಹೈಸ್ಕೂಲಿಗೆ ಹಳದಿ ಬಸ್ಸುಗಳಿಗೆ ಕಳಿಸುತ್ತಿದ್ದರು. ಇನ್ನು ಬಡವರು ಕೆಲಸ ಹುಡುಕಿಕೊಂಡು ದೂರದ ನಗರಗಳಿಗೆ ತೆರಳಿದ್ದಾರೆ. ಅವರ ಜೊತೆಗೇ ಅವರ ಮಕ್ಕಳೂ ಸಹ. ಈಗ ಇಲ್ಲಿರುವುದು ವಲಸೆ ಹೋಗಲಾಗದ, ಖಾಸಗಿ ಶಾಲೆಗಳ ಫೀಸನ್ನೂ ಕಟ್ಟಲಾಗದವರ ಮಕ್ಕಳು. ೫೦ಕ್ಕೆ ಕುಸಿದಿದ್ದ ಸಂಖ್ಯೆಯನ್ನು ಶಿವಣ್ಣನೇ

ಅದೊಂದು ಹಳೆಯ, ಹೆಂಚಿನ ಮನೆ. ಬಾಳಪ್ಪ, ಹೆಂಡತಿ, ಇಬ್ಬರು ಮಕ್ಕಳ ವಾಸ ಸ್ಥಳ. ಒಡೆದುಹೋದ ಹೆಂಚಿನಿಂದ ಸದ್ಯಕ್ಕೆ ಮೇಲಿಂದಲೂ ಗಾಳಿ. ಸೋರೋದಂತೂ ಇಲ್ಲ. ಮಳೆ ಬಂದರೆ ತಾನೇ ! ಸುಮಾರಾದ ಒಂದು ಕೋಣೆ, ಮೋಟು ಗೋಡೆ, ಆಕಡೆ ಅಡುಗೆ ಮನೆ. ಅಲ್ಲೇ ಮೂಲೆಯಲ್ಲಿ ನಾಲಕ್ಕು ಚಾಪೆ. ಕೆಲವು ಹಾಸಿಗೆ ಬಟ್ಟೆಗಳು. ಕೆಲವು ಅಲ್ಯೂಮಿನಿಯಂ ಹಾಗೂ ಮಣ್ಣಿನ ಪಾತ್ರೆಗಳು. ಅವತ್ತು ಆ ಮನೆಯಲ್ಲಿ ಅಡುಗೆ ಮಾಡಿದ್ದರೊ ಏನೋ ಗೊತ್ತಾಗಲಿಲ್ಲ. ಬಾಳಪ್ಪನ ಹೆಂಡತಿ ಕೊಟ್ಟ ಕಾಫಿಯನ್ನು ಕುಡಿಯಲಾರದೆ ಕುಡಿದು, ಲೋಟ ಕೆಳಗಿಟ್ಟು ಮೇಲೆದ್ದ ಶಿವಣ್ಣ. ಏನೂ ಹೇಳಲು ಹೊಳೆಯಲಿಲ್ಲ. ಬಡತನ ರಾಜ್ಯವಾಳುತ್ತಿದ್ದ ಆ ಜಾಗದಲ್ಲಿ ಏನನ್ನಾದರೂ ಹೇಳಬೇಕು ಅಂತಲೂ ಅನ್ನಿಸಲಿಲ್ಲ ಶಿವಣ್ಣನಿಗೆ.

ಕಷ್ಟಪಟ್ಟು ಓಣಿಕ್ಕೆ ಹೆಚ್ಚಿಸಿದ್ದ. ಹಳೆಯ ಸ್ಕೂಲಾದ್ದರಿಂದ ಏಳು ಕೊಠಡಿಗಳಿದ್ದವು. ಈಗ ಅಷ್ಟೂ ಬೇಕಾಗಿರಲಿಲ್ಲವಾದ್ದರಿಂದ ಒಂದು ಕೊಠಡಿಯಲ್ಲೇ ಶಿವಣ್ಣನ ವಾಸ. ಹಾಗೆ ಅವನು ರೆಸಿಡೆಂಟ್ ಹೆಡ್ಮಾಸ್ಟರ್ ಮತ್ತು ೨೪ ಗಂಟೆಗಳ ಕಾವಲುಗಾರ.

ಸ್ವಂತ ಖರ್ಚಿನಲ್ಲೇ ಬಾವುಟ ಮತ್ತು ಹಗ್ಗಗಳನ್ನು ಹೆಡ್ಮಾಸ್ಟರೇ ತಂದಿದ್ದ ವಿಷಯ ತಿಳಿದ ಪಂಚಾಯತಿ ಅಧ್ಯಕ್ಷರು ಅವನನ್ನು ಹೊಗಳಿದ್ದರು. ತನ್ನ ಮೊದಲಿನ ಸಮಾರಂಭ ಒಬ್ಬ ಹೆಡ್ಮಾಸ್ಟರನಾಗಿ. ಅದರ ಖರ್ಚು ಏನು ಮಹಾ! ಆ ಹಗ್ಗವನ್ನು ನೋಡಿ ಮಾಜಿ ಪ್ರಭಾರಿ ಹೇಳಿದ ಮಾತು ಮಾತ್ರ ಬೆಚ್ಚಿಬೀಳಿಸಿತ್ತು.

"ಈ ಹಗ್ಗ ಸರಿಯಾಗಿದೆ, ಸಾರ್?"

"ಯಾವುದಕ್ಕೆ ಅಂತೀರ?"

"ನೇಣು ಹಾಕ್ಕೊಳೋದಕ್ಕೆ" ಅಂದುಬಿಡೋದೇ!

ಕಳೆದ ವಾರ ಪಕ್ಕದ ಹಳ್ಳಿಯ ರೈತನೊಬ್ಬ ಸಾಲದ ಬಾಧೆ ತಾಳಲಾರದೆ ತನ್ನ ಮನೆಯಲ್ಲಿನ ಹಳೆಯ ಹಗ್ಗದಿಂದ ನೇಣು ಹಾಕ್ಕೊಂಡಿದ್ದ. ಆದರೆ ಅದು ತುಂಡಾಗಿ ಅವನು ಉಳಿದುಬಿಟ್ಟಿದ್ದ. ಆದರೆ ಹಠ ತೊಟ್ಟವನಂತೆ, ಎರಡು ದಿನಗಳ ನಂತರ ಆ ರೈತ ಕೀಟನಾಶಕ ಕುಡಿದ, ಈ ಬಾರಿ ಸತ್ತು, ಗೆದ್ದ. ಆ ಪ್ರಕರಣ ನೆನಪಿಗೆ ಬಂದು ಆ ಮೇಷ್ಟ್ರು ಆ ಮಾತನ್ನಾಡಿದ್ದ. ಸದ್ಯಕ್ಕೆ, ಆ ಸಮಯದಲ್ಲಿ ಅಲ್ಲಿ ಯಾರೂ ಇರಲಿಲ್ಲ.

ಈಗ ಶಿವಣ್ಣ ರಜೆಯ ಮಜ ಅನುಭವಿಸಲು ಸ್ಕೂಟರ್ ಮೇಲೆ ಸವಾರಿ ಹೊರಟಿದ್ದ. ಸುತ್ತಮುತ್ತ ನೋಡಿದ. ಎರಡೂ ಕಡೆ ಬೀಳುಬಿದ್ದ ಜಮೀನು. ನೀರಿಗಾಗಿ ನೆಲ ಬಾಯಿಬಿಟ್ಟು ಆಕಾಶದ ಕಡೆ ನೋಡುತ್ತಿತ್ತು. ಆದರೆ ಆ ಹೊತ್ತಿನ ಸಂತೋಷದ ಗುಂಗಿನಲ್ಲಿದ್ದ ಶಿವಣ್ಣನಿಗೆ ಅದೆಲ್ಲ ಗಮನಕ್ಕೆ ಬರಲಿಲ್ಲ.

ದೂರದಲ್ಲಿ ದಾರಿಯ ಪಕ್ಕ ಬಂಡೆಯ ಮೇಲೆ ಯಾರೋ ಕುಳಿತ ಹಾಗಿತ್ತು. ಹತ್ತಿರಕ್ಕೆ ಹೋದಾಗ ಅಲ್ಲಿ ಕಂಡಿದ್ದು ಆ ಊರಿನ ರೈತ ಬಾಳಪ್ಪ.

"ಏನು, ಬಾಳಪ್ಪನವರು! ಒಬ್ಬರೇ ಇಲ್ಲಿ ಕೂತಿದ್ದೀರಲ್ಲ?" "ಏನೂ ಇಲ್ಲ ಮೇಷ್ಟ್ರೆ! ಮಾಡೋಕೆ ಏನೂ ಕೆಲಸ ಇಲ್ಲ. ಸುಮ್ಮನೆ ಇಲ್ಲಿ ಬಂದು ಕೂತೆ."

"ಸ್ಕೂಲಿನ ಹತ್ರ ಬಂದಿದ್ರಲ್ಲ, ಹೇಗನ್ನಿಸ್ತು ಕಾರ್ಯಕ್ರಮ?"

"ಅದಕ್ಕೇನು ಸಾರ್, ಚೆನ್ನಾಗೇ ನಡೀತು. ಅದರ ಬಗ್ಗೇನೇ ಯೋಚಿಸ್ತಾ ಇದ್ದೆ. ಆ ಮ್ಯಾನೇಜರ್ ಏನೋ ನಮ್ಮ ಸಂಸ್ಕೃತಿ, ಅದೂ ಇದೂ ಅಂತ ಭಾಷಣ ಬಿಗಿದ್ರು. ಇನ್ನು ನೀವು ರೈತರ ಬಗ್ಗೆ ಮಾತನಾಡಿದಿರಿ. ಅಲ್ಲಾ, ಒಂದು ಮಾತು ಕೇಳ್ತೀನಿ. ನಮ್ಮ ಸಾಲ ಸರ್ಕಾರ ತೀರಿಸೋದರ ಬಗ್ಗೆ ನೀವು ಹೇಳಿದ್ರಲ್ಲಾ! ಅದು ಹಾಗೇ ನಡೆಯುತ್ತಾ?"

"ಅಲ್ವಾ ಮತ್ತೆ. ನಮ್ಮ ಸರ್ಕಾರಗಳು ಏನೆಲ್ಲಾ ಮಾಡ್ತಾ ಇಲ್ವಾ! ಅದೆಲ್ಲಾ ನಿಮಗೋಸ್ಕರಾನೇ ತಾನೇ!"

"ಅದೇ ನಿಜವಾಗಿದ್ರೆ ಇಷ್ಟು ಜನ ರೈತರು ಯಾಕೆ ಸಾಯ್ತಿದ್ರು ಸ್ವಾಮಿ! ಈಗ ನನ್ನನ್ನೇ ನೋಡಿ. ಎಷ್ಟೋ ಜನ ರೈತರ ಥರ ನಾನೂ ಸಾಲದಲ್ಲಿದೀನಿ. ಬೇಸಾಯದಲ್ಲಿ ಮಳೆ ಬಂದಾಗ ಬೆಳೆ ಬರಬಹುದೇನೋ! ಆದರೆ ಬೆಲೆ? ಆ ಕಡಿಮೆ ಬೆಲೆಗೆ ಮಾರಿ ಬಂದ ದುಡ್ಡನ್ನೆಲ್ಲಾ ಸಾಹುಕಾರನಿಗೆ ಸಾಲ ತೀರಿಸಿ ಮತ್ತೆ ಸಾಲದಲ್ಲಿ ಮುಳುಗ್ತೀವಿ. ನಮಗೆ ಉಳಿಯೋದೇನಿದೆ ಹೇಳಿ?"

"ಹಾಗಾದ್ರೆ ಸಾಲ ಮನ್ನಾ?"

"ಅದು ಎಲ್ರಿಗೂ ಎಲ್ಲಿ ಸಿಗುತ್ತೆ ಮೇಷ್ಟ್ರೇ! ಅದು ಸಿಗಬೇಕಾದ್ರೆ ಜಮೀನು ನನ್ನ ಹೆಸರಲ್ಲಿರಬೇಕು. ನನ್ನ ಭೂಮೀನೇ ತಗೊಳ್ಳಿ. ನನ್ನ ಪಾಲಿನ ಭೂಮಿ ನನ್ನ ಹೆಸರಲ್ಲಿಲ್ಲ. ಅದು ನಮ್ಮಣ್ಣನ ಹೆಸರಲ್ಲಿದೆ. ಅವನು ಬೇಸಾಯ ಮಾಡಲಾರದೆ ಹೆಂಡತಿ, ಮಕ್ಕಳ ಜತೆ ಬೆಂಗಳೂರಿಗೆ ಹೋಗಿದ್ದಾನೆ. ಎಲ್ಲೋ ಸೆಕ್ಯೂರಿಟಿ ಆಗಿದಾನಂತೆ. ನಾವು ಇನ್ನೂ ಭಾಗ ಮಾಡ್ಕೊಂಡಿಲ್ಲ. ನನಗೆ ಸಾಲಾನೂ ಇಲ್ಲ, ಸಾಲ ಮನ್ನಾನೂ ಇಲ್ಲ. ಇನ್ನು ಹಣ ಬೇಕಾದ್ರೆ ನಾನು ಆ ಸಾವುಕಾರನ ಹತ್ರಕ್ಕೇ ಹೋಗಬೇಕು. ನನ್ನ ಹೆಸರಿನಲ್ಲಿರೋ ಅರ್ಧ ಎಕರೆ ಎಂದೋ ಅವನಿಗೆ ಅಡವಿಟ್ಟಿದೀನಿ. ಬಡ್ಡಿ ಮೇಲೆ ಬಡ್ಡಿ. ಜತೆಗೆ ಅವನ ಬಾಯಿಂದ ಕೇಳಬಾರದ ಮಾತುಗಳು. ಇವೆಲ್ಲಾ ಬೇಡ. ಬೆಳೆಗೆ ಸರಿಯಾದ ಬೆಲೆ ಕೊಡ್ರೋ ಅಂತ ನಾವು ಎಷ್ಟೇ ಬಾಯಿ ಬಡಕೊಂಡ್ರೂ ಸರ್ಕಾರಗಳಿಂದ ಬರೀ ಭರವಸೆಗಳು."

ಶಿವಣ್ಣ ಗೊಂದಲದಲ್ಲಿ ಬಿದ್ದ. ತಾನೂ ಹಳ್ಳಿಯವನೇ. ಆದರೆ ಓದಿನಲ್ಲಿ ಬಿದ್ದು ಇದನ್ನೆಲ್ಲಾ ತಿಳ್ಕೊಳೋಕೇ ಹೋಗಲಿಲ್ಲ. ಅವನಿಗೆ ತನ್ನ ಮೇಲೆ ಬೇಜಾರು ಬಂತು.

"ಅಯ್ಯೋ! ಇದೆಲ್ಲಾ ಇದ್ದದ್ದೇ. ಬನ್ನಿ, ನಮ್ಮ ಮನೆ ಇಲ್ಲೇ ಇದೆ. ಕಾಫಿ ಕುಡಿಯೋಣ."

ಅದೊಂದು ಹಳೆಯ, ಹೆಂಚಿನ ಮನೆ. ಬಾಳಪ್ಪ, ಹೆಂಡತಿ, ಇಬ್ಬರು ಮಕ್ಕಳ ವಾಸ ಸ್ಥಳ. ಒಡೆದುಹೋದ ಹೆಂಚಿನಿಂದ ಸದ್ಯಕ್ಕೆ ಮೇಲಿಂದಲೂ ಗಾಳಿ. ಸೋರೋದಂತೂ ಇಲ್ಲ. ಮಳೆ ಬಂದರೆ ತಾನೇ! ಸುಮಾರಾದ ಒಂದು ಕೋಣೆ, ಮೋಟು ಗೋಡೆ, ಆಕಡೆ ಅಡುಗೆ ಮನೆ. ಅಲ್ಲೇ ಮೂಲೆಯಲ್ಲಿ ನಾಲಕ್ಕು ಚಾಪೆ. ಕೆಲವು ಹಾಸಿಗೆ ಬಟ್ಟೆಗಳು. ಕೆಲವು ಅಲ್ಯೂಮಿನಿಯಂ ಹಾಗೂ ಮಣ್ಣಿನ ಪಾತ್ರೆಗಳು. ಅವತ್ತು ಆ ಮನೆಯಲ್ಲಿ ಅಡುಗೆ ಮಾಡಿದ್ದರೂ ಏನೋ ಗೊತ್ತಾಗಲಿಲ್ಲ.

ಬಾಳಪ್ಪನ ಹೆಂಡತಿ ಕೊಟ್ಟ ಕಾಫಿಯನ್ನು ಕುಡಿಯಲಾರದೆ ಕುಡಿದು, ಲೋಟ ಕೆಳಗಿಟ್ಟು ಮೇಲೆದ್ದ ಶಿವಣ್ಣ. ಏನೂ ಹೇಳಲು ಹೊಳೆಯಲಿಲ್ಲ. ಬಡತನ ರಾಜ್ಯ ವಾಳುತ್ತಿದ್ದ ಆ ಜಾಗದಲ್ಲಿ ಏನನ್ನಾದರೂ ಹೇಳಬೇಕಂತಲೂ ಅನ್ನಿಸಲಿಲ್ಲ ಶಿವಣ್ಣನಿಗೆ.

ಆ ಕಾಫಿ ಕುಡಿದು ಬಾಯಿ ಕೆಟ್ಟಿದ್ದು ಮಾತ್ರವಲ್ಲ, ಬಾಳಪ್ಪನ ಸ್ಥಿತಿ ನೋಡಿ ಮನಸ್ಸೂ ಕೆಟ್ಟಿತ್ತು. ಇನ್ನು ಮುಂದೆ ಸ್ಕೂಟರ್ ಸವಾರಿ ಹೋಗಲು ಇಷ್ಟವಾಗಲಿಲ್ಲ. ತನ್ನ ಕೋಣೆಗೆ, ಸ್ಕೂಲಿಗೆ ಹಿಂತಿರುಗಿದ.

ಹೊಸ ಹಗ್ಗಕ್ಕೆ ಕಟ್ಟಿದ್ದ ಹೊಸ ಬಾವುಟ ಗಾಳಿಗೆ ಹಾರಾಡುತ್ತಿತ್ತು. ಕಂಬದ ಸುತ್ತಲೂ ಬಣ್ಣಬಣ್ಣದ ಹೂಗಳು. ಬಾವುಟದಲ್ಲಿಟ್ಟಂಥವು. ಶಾಂತ ವಾತಾವರಣ. ಆದರೆ ಶಿವಣ್ಣ ಮಾತ್ರ ಶಾಂತನಾಗಿರಲಿಲ್ಲ.

ಸಂಜೆಯಾದಾಗ ಬಾವುಟವನ್ನು ಹಗ್ಗದ ಸಮೇತ ಕೆಳಗಿಳಿಸಿ, ಮಡಿಸಿಟ್ಟ. ಮನಸ್ಸಿಲ್ಲದ ಮನಸ್ಸಿನಿಂದಲೇ ತಾನೇ ಮಾಡಿದ್ದ ಅನ್ನ, ಸಾರು ತಿಂದು ಮಲಗಿದ.

ಮಾರನೆಯ ದಿನ ಎದ್ದಾಗ ಚೆನ್ನಾಗಿ ಬೆಳಕು ಹರಿದಿತ್ತು. ಕೋಣೆಯ ಬಾಗಿಲು ತೆಗೆದು ಹೊರಬಂದಾಗ ಊರಿನ ಜನ, ದೂರದ ಬೇವಿನ ತೋಪಿನ ಕಡೆ ಓಡುತ್ತಿದ್ದುದನ್ನು ಕಂಡ. ಎಲ್ಲರ ಮುಖದಲ್ಲೂ ಧಾವಂತ ತುಂಬಿತ್ತು. ಮುಖ ತೊಳೆದು ತಾನೂ ಆ ದಿಕ್ಕಿನಲ್ಲಿ ಓಡಿದ. ದೂರದಿಂದಲೇ ಕಂಡಿದ್ದು ಒಂದು ಬೇವಿನ ಮರದ ಸುತ್ತ ನಿಂತಿದ್ದ ಜನ, ಎಲ್ಲರೂ ಮೇಲಕ್ಕೆ ನೋಡುತ್ತಿದ್ದರು. ಶಿವಣ್ಣನೂ ಹತ್ತಿರ ನಡೆದ. ಮರ ಇನ್ನೂ ಸ್ವಲ್ಪ ದೂರದಲ್ಲಿಯೇ ಇದ್ದಾಗ ಕಂಡಿದ್ದು, ಒಬ್ಬ ಗಂಡಸಿನ ಶವ ಮರಕ್ಕೆ ನೇತಾಡುತ್ತಿತ್ತು. ಪ್ರಾಣಪಕ್ಷಿ ಯಾವಾಗಲೋ ಹಾರಿಹೋಗಿತ್ತು. ಇನ್ನೂ ಹತ್ತಿರ ಹೋಗಿ ನೋಡಿದಾಗ ಶಿವಣ್ಣನ ಎದೆ ಧಸಕ್ಕೆಂದಿತು. ಒಂದು ಕೊಂಬೆಗೆ ಕಟ್ಟಲಾಗಿದ್ದ ತನ್ನ ಹೊಸ ಬಾವುಟ. ಅದರ ಜತೆಗೇ ತಾನು ಹೊಸದಾಗಿ ತಂದಿದ್ದ ಹಗ್ಗದಿಂದಲೇ ನೇಣು ಹಾಕಿಕೊಂಡಿದ್ದ ಬಾಳಪ್ಪ. ಆಗ ನೆನಪಿಗೆ ಬಂತು ಶಿವಣ್ಣನಿಗೆ. ತಾನು ಹಗ್ಗದ ಜತೆ ಬಾವುಟವನ್ನೂ ಕಂಬದಿಂದ ಬಿಡಿಸಿ, ಚೆನ್ನಾಗಿ ಮಡಿಸಿಟ್ಟಿದ್ದೇನೋ ಸರಿ, ಆದರೆ ಅದನ್ನ ಕೋಣೆಯೊಳಗೆ ಇಡೋದನ್ನ ಮರೆತಿದ್ದ, ತನ್ನ ಕೋಣೆಯ ಮುಂದೆ ಒಂದು ಬೆಂಚಿನ ಮೇಲೆ ಇಟ್ಟಿದ್ದ. "ನೇಣು ಹಾಕಿಕೊಳ್ಳಲು ಸರಿಯಾಗಿದೆ" ಎಂದ ಪ್ರಭಾರಿಯ ಮಾತು ನೆನಪಿಗೆ ಬಂದು ಶಿವಣ್ಣನ ಮನಸ್ಸು ಕಲಕಿತು.

**ನಗರಗೆರೆ ರಮೇಶ್**
೩೬೬, ೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು – ೫೬೦ ೦೭೦

## ಓದುಗರಲ್ಲಿ ಮನವಿ

ಓದುಗರ ಮತ್ತು ಜಾಹೀರಾತುದಾರರ ಪ್ರೋತ್ಸಾಹದಿಂದಾಗಿ ಕಳೆದ ಹತ್ತೊಂಬತ್ತು ವರ್ಷಗಳಿಂದ 'ಹೊಸತು' ಪತ್ರಿಕೆ ನಿರಂತರವಾಗಿ ಪ್ರಕಟವಾಗುತ್ತಿದೆ. ಆದರೆ, ಇತ್ತೀಚಿನ ದಿನಗಳಲ್ಲಿ ಕಾಗದ, ಮುದ್ರಣ, ಕಛೇರಿ ನಿರ್ವಹಣೆ ಮುಂತಾದ ಖರ್ಚುಗಳು ವಿಪರೀತ ಹೆಚ್ಚಾಗಿರುವುದರಿಂದ 'ಹೊಸತು' ಬಿಡಿ ಪ್ರತಿಗಳ ಮತ್ತು ಚಂದಾ ದರಗಳನ್ನು ಹೆಚ್ಚಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಉಂಟಾಗಿದೆ.

**೨೦೧೮ ಸೆಪ್ಟೆಂಬರ್ ೧ರಿಂದ ಅನ್ವಯಿಸುವಂತೆ ದರಗಳು ಈ ರೀತಿ ಹೆಚ್ಚಾಗಲಿವೆ:**

| | |
|---|---|
| ಬಿಡಿ ಪ್ರತಿ (ವಾರ್ಷಿಕ ವಿಶೇಷಾಂಕ ಹೊರತುಪಡಿಸಿ) | ... ರೂ. ೨೫/– |
| ಒಂದು ವರ್ಷದ ಚಂದಾ | ... ರೂ. ೩೦೦/– |
| ಮೂರು ವರ್ಷಗಳ ಚಂದಾ | ... ರೂ. ೬೦೦/– |

– *ಪ್ರಕಾಶಕ*

ನಮ್ಮ ದೇಶದ ಪತ್ರಿಕೋದ್ಯಮದಲ್ಲಿ ಪಾಲಗುಮ್ಮಿ ಸಾಯಿನಾಥ್ ಒಂದು ದೊಡ್ಡ ಹೆಸರು. ದೇಶದ ಬೆನ್ನೆಲುಬಾದ ರೈತರ ಬವಣೆಗಳನ್ನು ಅಕ್ಷರದ ಮೂಲಕ ಪ್ರಕಟಿಸಿ ಅವರ ಪರಿಹಾರಕ್ಕಾಗಿ ಹಲವಾರು ನೀತಿ, ಯೋಜನೆಗಳನ್ನು ರೂಪಿಸಿದವರು. ಗ್ರಾಮೀಣ ಮಹಿಳೆಯರ ದುಡಿಮೆಯನ್ನು ಕುರಿತು ವಿಶೇಷವಾಗಿ ಸಂಶೋಧನೆ ನಡೆಸಿ ಅವರ ಶ್ರಮಕ್ಕೆ ಘನತೆ, ಗೌರವವನ್ನು ತಂದುಕೊಟ್ಟವರು. ಇತ್ತೀಚೆಗೆ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಲು ಬೆಂಗಳೂರಿಗೆ ಆಗಮಿಸಿದ್ದ ಪಿ. ಸಾಯಿನಾಥ್ ಅವರನ್ನು 'ಹೊಸತು' ತಂಡ ಭೇಟಿ ಮಾಡಿ ಪತ್ರಿಕೆಗಾಗಿ ಮಾತನಾಡಿಸಿತು. ಅವರೊಡನೆ ಸಂಭಾಷಣೆಯಲ್ಲಿ ತೊಡಗಿದ್ದವರು: ಎನ್. ಗಾಯತ್ರಿ, ಮುರಳಿ ಕೃಷ್ಣ, ಎ. ಆರ್. ಉಡುಪ, ಪಿ. ವಿ. ಲೋಕೇಶ್, ಸತ್ಯಾನಂದ ಮತ್ತು ಮೈತ್ರಿ ಬಿ.

ಲೇಖನ ಸಿದ್ಧಪಡಿಸಿದವರು

**ಡಾ॥ ಎನ್. ಗಾಯತ್ರಿ**

**ಹೊಸತು:** ನಮಸ್ಕಾರ. ನಿಮ್ಮನ್ನು ಗ್ರಾಮೀಣ ಭಾರತದ ಐಕಾನ್ ಎಂದು ಗುರುತಿಸಲಾಗುತ್ತದೆ. ಈ ಸಂಬಂಧವಾಗಿ 'ಹೊಸತು' ನಿಮ್ಮೊಡನೆ ಮಾತನಾಡಬಯಸುತ್ತದೆ.

**ಸಾಯಿನಾಥ್ :** ಓ.ಕೆ, ಆಗಲಿ. ನಮಸ್ಕಾರ.

**ಹೊಸತು:** ನಮ್ಮ ದೇಶದ ಬೆನ್ನೆಲುಬು ನಮ್ಮ ಗ್ರಾಮಗಳು. ಭಾರತವು ಗ್ರಾಮಗಳ ರಾಜ್ಯ ಎಂಬಂಥ ಮಾತುಗಳನ್ನು ಕೇಳುತ್ತಲೇ ಬಂದಿದ್ದೇವೆ. ಆದರೆ ಇತ್ತೀಚೆಗೆ ಗ್ರಾಮೀಣ ಜನರ ಪಟ್ಟಣದ ವಲಸೆ ಮತ್ತು ದೇಶದ ಜಿ.ಡಿ.ಪಿ.ಗೆ ಗ್ರಾಮಗಳ ಕೊಡುಗೆ ಕಡಿಮೆಯಾಗುತ್ತಿದೆ, ಎನ್ನುವ ಮಾತುಗಳ ಹಿನ್ನೆಲೆಯಲ್ಲಿ ಈ ಮಾತು ಎಷ್ಟರ ಮಟ್ಟಿಗೆ ಸರಿಯಾದುದು?

**ಸಾಯಿನಾಥ್ :** ಈಗಲೂ ನಮ್ಮ ದೇಶದ ಶೇಕಡಾ ೬೯ರಷ್ಟು ಮಂದಿ ಗ್ರಾಮಗಳಲ್ಲೇ ವಾಸಮಾಡುತ್ತಿದ್ದಾರೆ. ಇನ್ನು ದೇಶದ ಜಿ.ಡಿ.ಪಿ.ಯಲ್ಲಿ ಗ್ರಾಮೀಣ ಕೆಲಸ ಸಮರ್ಪಕವಾಗಿ ಬಿಂಬಿತವಾಗುವುದಿಲ್ಲ. ಸುಮಾರು ಶೇಕಡಾ ೭೫ರಷ್ಟು ಮಂದಿಯ ದುಡಿಮೆಗೆ ಹಣಕಾಸಿನ ಬೆಲೆಯೇ ಇಲ್ಲ. ನಮ್ಮ ಗ್ರಾಮೀಣ ಹೆಂಗಸರು ಸುಮಾರು ೧೪ರಿಂದ ೧೫ ಗಂಟೆಗಳ ಕಾಲ ದುಡಿಯುತ್ತಾರೆ. ಹೊಲಗಳಲ್ಲೂ ದುಡಿಯುತ್ತಾರೆ. ಆದರೆ ಜಿ.ಡಿ.ಪಿ.ಯು ಉತ್ಪಾದಕ ಮೌಲ್ಯವಿರುವ ದುಡಿಮೆಯನ್ನು ಮಾತ್ರ ಪರಿಗಣಿಸುತ್ತದೆ. ಅದರಲ್ಲೂ ಗ್ರಾಮೀಣ ಆರ್ಥಿಕತೆಯ ಮಾಪನದಲ್ಲಿ ಇದು ಕ್ರಮೇಣ ಇಳಿಮುಖವಾಗುತ್ತಲೇ ಬರುತ್ತಿದೆ. ೨೦೧೯ರ ಸಾಮಾಜಿಕ ಮತ್ತು ಆರ್ಥಿಕ ಅಂಕಿ ಸಂಖ್ಯೆಯ ಪ್ರಕಾರ ಸುಮಾರು ಶೇಕಡಾ ೭೫ರಷ್ಟು ಗ್ರಾಮೀಣ ಕುಟುಂಬಗಳ

# "ಗ್ರಾಮೀಣ ಭಾರತದ ಸಾಕ್ಷಿ ಪ್ರಜ್ಞೆ"

## - ಪಿ. ಸಾಯಿನಾಥ್



ವರಮಾನ ೧,೧೭ ಮಿಲಿಯನ್ನಿನಷ್ಟಿದೆ. ಅವರ ಮಾಸಿಕ ಆದಾಯ ೫೦೦೦ ರೂಪಾಯಿಗಳು, ೮೦೦೦ ರೂಪಾಯಿಗಳು ಮತ್ತು ಶೇಕಡಾ ೧೦ಕ್ಕಿಂತ ಕಡಿಮೆ ಮಂದಿ ೧೦,೦೦೦ ರೂಪಾಯಿಗಳಿಗಿಂತ ಹೆಚ್ಚು ಸಂಪಾದಿಸಬಹುದು. ಆದಿವಾಸಿಗಳು ಮತ್ತು ದಲಿತರು ಶೇಕಡಾ ಮೂರರಷ್ಟಿದ್ದು ಅವರ ಆದಾಯ ಬಹಳ ಕಡಿಮೆ ಮಟ್ಟದಲ್ಲಿದೆ. ಇನ್ನು ೨೦೧೩ರ ರಾಷ್ಟ್ರೀಯ ಅಂಕಿ ಸಂಖ್ಯೆಯ ವರದಿಯ ಪ್ರಕಾರ ಹೊಲವನ್ನು ನಂಬಿ ಬದುಕುತ್ತಿರುವ ಜನಸಂಖ್ಯೆಯಲ್ಲಿ ೬೦೪ ಜಂಟಿ ಕುಟುಂಬಗಳು ೧೩,೦೦೦ ರೂಪಾಯಿಗಳ ವಾರ್ಷಿಕ ಆದಾಯಕ್ಕಿಂತ ಕಡಿಮೆ ಗಳಿಕೆಯಲ್ಲಿ ಬದುಕುತ್ತಿದ್ದಾರೆ.

ಆದ್ದರಿಂದ ಕುಟುಂಬದ ಒಟ್ಟು ಆದಾಯದಲ್ಲಿ ಕೃಷಿಗೆ ಸಂಬಂಧಪಟ್ಟದ್ದು ಮತ್ತು ಕೃಷಿಯೇತರವಾದ್ದು ಎಲ್ಲ ಸೇರಿರುತ್ತದೆ. ಆದ್ದರಿಂದ ಜಿಡಿಪಿಯನ್ನು ಲೆಕ್ಕ ಹಾಕುವುದರಲ್ಲೇ ತಪ್ಪಿದೆ. ಜೊತೆಗೆ ಜಿಡಿಪಿ ಹೆಂಗಸರ ಕೆಲಸವನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಶೇಕಡಾ ೬೫ರಷ್ಟು ಪ್ರಮಾಣದ ದುಡಿಮೆಯನ್ನು ಹೆಂಗಸರೇ ಮಾಡುತ್ತಾರೆ. ಇದನ್ನೂ ಸೇರಿಸಿಕೊಂಡರೆ ಸಹಜವಾಗಿ ಜಿಡಿಪಿ ಹೆಚ್ಚೇ ಆಗುತ್ತದೆ. ಗ್ರಾಮೀಣ ಆರ್ಥಿಕತೆಯನ್ನು ಔಪಚಾರಿಕವಾಗಿ ಅರ್ಥೈಸಿಕೊಳ್ಳುವುದರಲ್ಲೇ ತಪ್ಪಿದೆ. ೨೦೧೧ರ ಸಾಮಾಜಿಕ ಸರ್ವೇ ಪ್ರಕಾರ ಶೇಕಡಾ ೭೫ರಷ್ಟು ಜನಸಂಖ್ಯೆಯಲ್ಲಿ ೧೧೧೭ ಮಿಲಿಯನ್ ಕುಟುಂಬಗಳಲ್ಲಿ ಹೊಟ್ಟೆ ತುಂಬಿಸಲು ದುಡಿಯುವವರ ಸಂಖ್ಯೆ ಶೇಕಡಾ ೮ ಮಾತ್ರ. ಭಾರತದಲ್ಲಿ ೨೦೧೩ರ ನ್ಯಾಷನಲ್ ಸ್ಯಾಂಪಲ್ ಸರ್ವೇ ಪ್ರಕಾರ ಸರಾಸರಿ ಐದು ಜನರಿರುವ ಗ್ರಾಮೀಣ ಕೂಡು ಕುಟುಂಬದಲ್ಲಿ ಮಾಸಿಕ ಆದಾಯ ೬,೪೩೬ ರೂಗಳು ಮಾತ್ರ.

**ಹೊಸತು:** ಆದರೂ ಇಂದು ಯುವಜನತೆ ಗ್ರಾಮೀಣ ಜೀವನಕ್ಕೆ ಬೆನ್ನು ತಿರುಗಿಸಿ ನಗರಾಭಿಮುಖರಾಗುತ್ತಿದ್ದಾರಲ್ವಾ?

**ಸಾಯಿನಾಥ್ :** ಹೌದು. ಯುವ ಜನತೆಗೆ ಕೃಷಿಯಲ್ಲಿ ಆಸಕ್ತಿಯಿಲ್ಲ. ಏಕೆಂದರೆ ಕೃಷಿಕ್ಷೇತ್ರವನ್ನು ನರಕವನ್ನಾಗಿ ಮಾಡಲಾಗಿದೆ. ಇತ್ತೀಚೆಗೆ ಶಿಕ್ಷಣ ಕ್ಷೇತ್ರವನ್ನು ಸಹ ಹಾಗೆಯೇ ಮಾಡಲಾಗುತ್ತಿದೆ. ಇಂದಿನ ಕೇಂದ್ರ ಸರ್ಕಾರದ ನೀತಿಗಳು ಯುವಕರನ್ನು ಈ ಕ್ಷೇತ್ರಕ್ಕೆ ಬರದಂತೆ ಹಾಳುಮಾಡುತ್ತಿದೆ.

**ಹೊಸತು:** ಮರಾಠರು, ಪಟೇಲರು – ಹೀಗೆ ಪ್ರತಿಷ್ಠಿತ ಜಾತಿಗಳು ಮೀಸಲಾತಿ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿವೆಯಲ್ಲಾ, ಈ ಪ್ರಕ್ರಿಯೆಯನ್ನು ಹೇಗೆ ಅರ್ಥೈಸುತ್ತೀರಾ?

**ಸಾಯಿನಾಥ್ :** ಇದೊಂದು ಸಂಕೀರ್ಣ ಪ್ರಶ್ನೆ. ಪ್ರತಿಯೊಂದು ಜಾತಿಯದೂ ಪ್ರತ್ಯೇಕ ಸಮಸ್ಯೆ. ಬಹುಸಂಖ್ಯೆಯ ಮರಾಠರು ಶ್ರೀಮಂತರೇನಲ್ಲ, ಅವರಲ್ಲಿ ವರ್ಗಸಮಸ್ಯೆ ಇದೆ. ಇನ್ನು ಗುಜರಾತಿನಲ್ಲಿ ಕೃಷಿಯನ್ನು ನಂಬಿದ್ದ ಬಹುಪಾಲು



ಕುಟುಂಬಗಳು ಆ ವೃತ್ತಿಯನ್ನು ಬಿಟ್ಟು ವ್ಯಾಪಾರಕ್ಕೆ ಇಳಿದಿವೆ. ಅದರಲ್ಲೂ ಬಟ್ಟೆ ವ್ಯಾಪಾರವನ್ನು ನೆಚ್ಚಿಕೊಂಡಿದ್ದ ಈ ಜಾತಿಯ ಜನರ ಉದ್ಯಮಗಳು ಇಂದು ನೆಲಕಚ್ಚಿವೆ. ವಿದೇಶೀ ಆಮದು ಸರಕುಗಳು ಅವರಿಗೆ ಸ್ಪರ್ಧೆಯನ್ನೊಡ್ಡಿವೆ. ಹೀಗೆ ಸಮಸ್ಯೆಗಳು ಹಲವಾರು. ಆದ್ದರಿಂದ ಇಲ್ಲಿ ಜಾತಿ ತನ್ನ ಆಟವನ್ನು ಆರಂಭಿಸಿದೆ. ಮೀಸಲಾತಿಯನ್ನು ಕೊಡುವುದು ಎಂದೂ ಸಮಸ್ಯೆಯಾಗುತ್ತದೆ ಎಂದು ನನಗೆ ಅನಿಸುವುದಿಲ್ಲ. ಸುಪ್ರೀಂ ಕೋರ್ಟಿನವರು ಮೀಸಲಾತಿ ಒಂದು ನಿರ್ದಿಷ್ಟ ಪ್ರಮಾಣವನ್ನು ಮೀರಬಾರದು, ಎಂದೇನೋ ಹೇಳಿದ್ದಾರೆ. ದಕ್ಷಿಣದ ಎಲ್ಲಾ ರಾಜ್ಯಗಳು ಮೀಸಲಾತಿ ಮಿತಿಯನ್ನು ಮೀರಿವೆ. ಆದರೇನಂತೆ, ಇದರಿಂದ ತೊಂದರೆಯೇನೂ ಆಗಿಲ್ಲ. ಪಟೇಲರಿಗೆ ಕೊಡುವ ಮೀಸಲಾತಿಯನ್ನು ನಾವು ಪರಿಶಿಷ್ಟರಿಗೆ ಕೊಡುವ ಮೀಸಲಾತಿಯ ಜೊತೆ ಹೋಲಿಸಬಾರದು. ತಮಿಳುನಾಡು ಸರ್ಕಾರ ಕೊಟ್ಟಿರುವ ಶೇಕಡಾ ೬೯ರ ಮೀಸಲಾತಿಯಿಂದ ಅದರ ಸ್ಥಿತಿ ಉತ್ತರ ಪ್ರದೇಶಕ್ಕೆ ಹೋಲಿಸಿದರೆ ಕೆಟ್ಟದೇನೂ ಆಗಿಲ್ಲ. ಬ್ರಾಹ್ಮಣ ಹೆಜಿಮೊನಿಯನ್ನು ಮುರಿಯುವುದಕ್ಕೆ ಇದು ಹೆಚ್ಚು ಸಹಾಯವಾಗಿದೆ. ಆದ್ದರಿಂದಲೇ ದಕ್ಷಿಣದ ರಾಜ್ಯಗಳಲ್ಲಿ ಆಡಳಿತವು ಉತ್ತರಕ್ಕಿಂತ ಹೆಚ್ಚು ಸುಸಂಬದ್ಧವಾಗಿದೆ.

**ಹೊಸತು:** ಹೌದು, ಅದೇ ಮಹಿಳಾ ಮೀಸಲಾತಿ ಕೇಳಿದಾಗ ಯಾರೂ ಅದರ ಬಗ್ಗೆ ಧ್ವನಿಯೆತ್ತುವುದೇ ಇಲ್ಲ.

**ಸಾಯಿನಾಥ್ :** ಹೌದು ಅದನ್ನೇ ನಾನು ಹೇಳಲು ಹೊರಟಿದ್ದು. ಮಹಿಳೆಯರಿಗೆ ಸಾಮರ್ಥ್ಯವಿದ್ದೂ ಅವರ ರಾಜಕೀಯ ಪ್ರತಿನಿಧೀಕರಣ ಸರಿಯಾಗಿ ಆಗಿಲ್ಲ.

✶ ✶ ✶

**ಹೊಸತು :** ನಿಮ್ಮ "ಪಾರಿ" (PARI) ಆರಂಭವಾಗಿ ಮೂರು ವರ್ಷವಾಗಿರ ಬೇಕಲ್ಲಾ, ಅದು ಹೇಗೆ ನಡೆಯುತ್ತಿದೆ? ಅದರ ಬಗ್ಗೆ ಹೇಳಿ.

**ಸಾಯಿನಾಥ್ :** ಗ್ರಾಮೀಣ ಜನರ ಪತ್ರಾಗಾರ (People's Archive of Rural India) ೨೦೧೪ರ ಡಿಸೆಂಬರ್ ೨೦ರಂದು ಆರಂಭವಾಯಿತು. ತುಂಬ ಚೆನ್ನಾಗಿ ನಡೆಯುತ್ತಿದೆ. ಇದನ್ನು ಎಷ್ಟು ಜನ ನೋಡುತ್ತಾರೆ ಎನ್ನುವುದಕ್ಕಿಂತ ಯಾರು ನೋಡುತ್ತಾರೆ, ಎನ್ನುವುದು ನನಗೆ ಮುಖ್ಯ. ಈ ಪತ್ರಾಗಾರದ ಓದುಗರಲ್ಲಿ ಹೆಚ್ಚು ಯುವಜನರೇ ಇದ್ದಾರೆ. ೧೮ರಿಂದ ೨೪ ವರ್ಷ ವಯಸ್ಸಿನವರು. ಈ ಡಿಸೆಂಬರ್ ವೇಳೆಗೆ ಇವರ ಸಂಖ್ಯೆ ಒಂದು ಮಿಲಿಯನ್ ಆಗಬಹುದು. ಇವರು ಎಷ್ಟು ಸಮಯದ ಅವಧಿ ಇದನ್ನು ನೋಡುತ್ತಾರೆ, ಎನ್ನುವುದು ಕೂಡ ಮುಖ್ಯವಾಗುತ್ತದೆ. ರಾಷ್ಟ್ರೀಯ ಮಾನದಂಡದ ಪ್ರಕಾರ ಈ ರೀತಿ ಜಾಲತಾಣಗಳನ್ನು ನೋಡುವವರ ಸಂಖ್ಯೆ ಗಂಡಸರಾದರೆ ಶೇಕಡಾ ೭೧ ಮತ್ತು ಹೆಂಗಸರ ಸಂಖ್ಯೆ ಶೇಕಡಾ ೨೯ ಆಗಿದೆ. ಆದರೆ 'ಪಾರಿ'ಯನ್ನು ವೀಕ್ಷಿಸುವ ಸ್ತ್ರೀ–ಪುರುಷರ ಪ್ರಮಾಣ ೫೦:೫೦ ಇದೆ. ಇದು ಅತ್ಯಂತ ಸ್ವಾಗತಾರ್ಹ ಸಂಗತಿ. ಆರಂಭದಲ್ಲಿ ಶೇಕಡಾ ೨೯ರಷ್ಟು ಮಂದಿ ಮೊಬೈಲ್‌ನಲ್ಲಿ ನೋಡುತ್ತಿದ್ದರೆ, ಈಗ ಅವರ ಸಂಖ್ಯೆ ಶೇಕಡಾ ೭೨ ಆಗಿದೆ. ಅಂದರೆ ಬಹಳಷ್ಟು ಮಂದಿ ಯುವಜನರೇ ಆಗಿದ್ದಾರೆ. ಪ್ರತಿ ತಿಂಗಳು ಸುಮಾರು ೧೫೦೦ ಮಂದಿ ಪುಟಗಳನ್ನು ನೋಡುವವರಿರುತ್ತಾರೆ. ಇದೇನೂ ದೊಡ್ಡ ಸಂಖ್ಯೆ ಅಲ್ಲ. ಆದರೂ ಇದು ಕ್ರಮೇಣ ಬೆಳೆಯುತ್ತದೆ, ಎಂಬ ವಿಶ್ವಾಸ ನಮ್ಮದು. ಅದು ಈಗ ಹದಿಮೂರು ಭಾಷೆಗಳಲ್ಲಿ ಬರುತ್ತಿದೆ. ಗ್ರಾಮೀಣ ಭಾರತದ ಭಾಷೆಗಳು, ಶ್ರಮಿಕರು, ಅವರ ಜೀವನ ವಿಧಾನ, ಕಲೆ, ಕೈ ಕೌಶಲಗಳು ಮತ್ತು ಗ್ರಾಮೀಣ ಬದುಕಿನ ಹತ್ತು ಹಲವು ಸಂಗತಿಗಳನ್ನು ಸೆರೆ ಹಿಡಿಯುವ ಉದ್ದೇಶ ಹೊಂದಿದೆ. ವೀಡಿಯೋ, ಧ್ವನಿಮುದ್ರಿಕೆಗಳು, ಸ್ಥಿರಚಿತ್ರಗಳು ಮತ್ತು ಮುದ್ರಣ ಸಾಹಿತ್ಯ ಎಲ್ಲವನ್ನೂ ಒಳಗೊಂಡಿರುತ್ತದೆ. ಸಾರ್ವಜನಿಕರು ಇದರ ಸೌಲಭ್ಯವನ್ನು ಉಚಿತವಾಗಿ ಪಡೆಯಬಹುದು.

ನಮ್ಮ ಈ ವೆಬ್ ತಾಣಕ್ಕಾಗಿ ನಾವು ಯಾರಿಂದಲೂ, ಅದರಲ್ಲೂ ಸರ್ಕಾರದಿಂದ ಯಾವುದೇ ಹಣ ತೆಗೆದುಕೊಳ್ಳುವುದಿಲ್ಲ. ನಾವು ಸರ್ಕಾರದ ಜೊತೆ ಕೆಲಸ ಮಾಡುತ್ತೇವೆಯೇ ಹೊರತು ಅವರಿಗಾಗಿ ಮಾಡುವುದಿಲ್ಲ. ಇಲ್ಲಿ ನಿಮ್ಮ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜೊತೆ ಸೇರಿ ಕರ್ನಾಟಕದ ಹಲವಾರು ಭಾಗಗಳಲ್ಲಿ ದಲಿತ ಯುವತಿಯರಿಗಾಗಿ ಛಾಯಾಚಿತ್ರ ತರಬೇತಿ ಶಿಬಿರವನ್ನು ಯೋಜಿಸುವ ಚಿಂತನೆ ನಡೆಸುತ್ತಿದ್ದೇವೆ. ಹಿಂದೆಯೂ ಇಂತಹ ಕೆಲವು ತರಬೇತಿ ಶಿಬಿರಗಳನ್ನು ಬಂಡೀಪುರದಲ್ಲಿ ನಡೆಸಿದ್ದೇವೆ. ಈ ಹೆಂಗಸರಿಗೆ ಛಾಯಾಗ್ರಹಣದ ತರಬೇತಿಯ ನಂತರ ಆ ಕ್ಯಾಮೆರಾಗಳನ್ನು ಅವರಿಗೇ ಕೊಟ್ಟುಬಿಡುತ್ತೇವೆ. ನಂತರ ಅವರು


ಶ್ರೀ ಪಿ. ಸಾಯಿನಾಥ್ ಅವರೊಂದಿಗೆ ಸಂದರ್ಶಕರು

ಅದನ್ನು ಬಳಸಿಕೊಂಡು ಅದನ್ನೇ ವೃತ್ತಿಯನ್ನಾಗಿಯೂ ಮಾಡಿಕೊಳ್ಳಬಹುದು. ಈ ಛಾಯಾಚಿತ್ರಗಳ ಪ್ರದರ್ಶನವನ್ನೂ ಏರ್ಪಡಿಸುವ ಯೋಜನೆ ನಮ್ಮದು. ಇಲ್ಲಿನ ಹೆಂಗಸರ ಕಣ್ಣಿನಿಂದ ಕರ್ನಾಟಕ ದರ್ಶನ ಮಾಡಿಸುವ ಎಂಬುದು ನಮ್ಮ ಇರಾದೆ. ಪತ್ರಿಕೋದ್ಯಮ ಮತ್ತು ಛಾಯಾಗ್ರಹಣ ಎನ್ನುವುದು ಪ್ರತಿಷ್ಠಿತರ ಮತ್ತು ಹಣವುಳ್ಳವರ ಕಸುಬಾಗಿದೆ. ಈ ಮಿಥ್ಯೆಯನ್ನು ಒಡೆಯುವ ಕೆಲಸವನ್ನು 'ಪಾರಿ' ಮಾಡುತ್ತದೆ. ಪತ್ರಿಕೋದ್ಯಮವನ್ನು ಕಾರ್ಪೊರೇಟ್ ಹಿಡಿತದಿಂದ ತಪ್ಪಿಸಿ ಸಮುದಾಯದ ಕೈಗೆ ಬರುವಂತೆ ಮಾಡುವುದು ನಮ್ಮ ಉದ್ದೇಶ.

ಇದರಲ್ಲೇ ನಾವು ಸ್ವಾತಂತ್ರ್ಯ ಹೋರಾಟಗಾರರನ್ನು ಪರಿಚಯಿಸುವ ಯೋಜನೆಯನ್ನೂ ಕೈಗೊಂಡಿದ್ದೇವೆ. ಸರ್ಕಾರದ ಜೊತೆ ಸೇರಿ ಮಾಡುವ ಈ ಯೋಜನೆಯಲ್ಲಿ ಸರ್ಕಾರದ ಪಾತ್ರ ಮಹತ್ವದ್ದಾಗಿರುತ್ತದೆ. ಸ್ವಾತಂತ್ರ್ಯ ಹೋರಾಟದ ಪಿಂಚಣಿ ಪಡೆಯುತ್ತಿರುವವರ ಪಟ್ಟಿ ಸರ್ಕಾರದ ಬಳಿಯಿರುತ್ತದೆ. ಅಂತಹ ಮಾಹಿತಿಯನ್ನು ಅವರಿಂದ ಪಡೆದು ನಾವು ಈ ಕಾರ್ಯ ಮಾಡುತ್ತಿದ್ದೇವೆ. ಗ್ರಾಮೀಣ ಭಾರತದಲ್ಲಿರುವ ಹೆಚ್ಚು ಪ್ರಸಿದ್ಧರಲ್ಲದ ಬದುಕುಳಿದಿರುವ ಸ್ವಾತಂತ್ರ್ಯ ಹೋರಾಟಗಾರರನ್ನು ಪರಿಚಯಿಸುವ ಯೋಜನೆಯಿದು. 'ದಿ ಫುಟ್ ಸೋಲ್ಜರ್ಸ್ ಆಫ್ ಫ್ರೀಡಂ' ಎನ್ನುವ ಈ ಯೋಜನೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಅನುಭವಗಳನ್ನು ದಾಖಲಿಸುತ್ತಾರೆ. ನಾಳೆ ಹುಟ್ಟುವ ಮಕ್ಕಳಿಗೂ ಇದು ಉಪಯುಕ್ತವಾಗುತ್ತದೆ.

**ಹೊಸತು:** ನೀವು ಮಹಿಳೆಯರನ್ನೇ ವಿಶೇಷವಾಗಿ ಕೇಂದ್ರೀಕರಿಸಿದ ಛಾಯಾಚಿತ್ರ ಪ್ರದರ್ಶನವೊಂದನ್ನು ಏರ್ಪಡಿಸಿದ್ದಿರಲ್ಲವಾ?

**ಸಾಯಿನಾಥ್** : "ದುಡಿಮೆ ಗೋಚರ, ಮಹಿಳೆ ಅಗೋಚರ : ಮಹಿಳೆ ಮತ್ತು ಗ್ರಾಮೀಣ ದುಡಿಮೆ" ಮಾಹಿತಿಯನ್ನೊಳಗೊಂಡ ನೂರಾರು ಛಾಯಾಚಿತ್ರಗಳ ಪ್ರದರ್ಶನವಿದು. ಇವುಗಳನ್ನು ಗ್ರಾಮಗಳಲ್ಲಿ, ಕಾರ್ಖಾನೆಗಳ ಮತ್ತು ಗಣಿಗಳ ಪ್ರವೇಶ ದ್ವಾರಗಳಲ್ಲಿ, ಶಾಲಾ ಕಾಲೇಜುಗಳಲ್ಲಿ, ರೈಲು ನಿಲ್ದಾಣ – ಮುಂತಾದ ಸ್ಥಳಗಳಲ್ಲಿ ಪ್ರದರ್ಶಿಸಲಾಗಿದ್ದು ಸಹಸ್ರಾರು ಮಂದಿ ವೀಕ್ಷಿಸಿದ್ದಾರೆ. ಅಲ್ಲದೆ, ಈ ಪ್ರದರ್ಶನವನ್ನು ನ್ಯೂಯಾರ್ಕ್, ಜಪಾನ್, ಕೆನಡಾ ಮತ್ತು ಅಮೆರಿಕೆಯ ಹಲವಾರು ವಿಶ್ವವಿದ್ಯಾಲಯಗಳಲ್ಲಿ, ಅಂತೆಯೇ ದಕ್ಷಿಣ ಆಫ್ರಿಕಾ, ಫಿನ್‌ಲ್ಯಾಂಡ್ ಮತ್ತು ನೆದರ್‌ಲ್ಯಾಂಡ್‌ಗಳಲ್ಲಿ ಪ್ರದರ್ಶಿತವಾಗಿದೆ.

**ಹೊಸತು:** ಈಗ ಕರ್ನಾಟಕ ರಾಜ್ಯದ ರಾಜಕಾರಣದಲ್ಲಿ ರೈತರ ಸಾಲ ಮನ್ನಾ ಕುರಿತ ಚರ್ಚೆ ಪ್ರಮುಖವಾಗಿದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?

**ಸಾಯಿನಾಥ್** : ನನ್ನ ಅಭಿಪ್ರಾಯದಲ್ಲಿ ಹೇಳುವುದಾದರೆ, ಕರ್ನಾಟಕ ಸರ್ಕಾರ ಸರಿಯಾದದ್ದನ್ನೇ ಮಾಡುತ್ತಿದೆ. ಅದಕ್ಕಾಗಿ ನಾನು ಕರ್ನಾಟಕ ಸರ್ಕಾರವನ್ನು ಅಭಿನಂದಿಸುತ್ತೇನೆ. ಈಗ ಬ್ಯಾಂಕ್ ಯೂನಿಯನ್ನುಗಳು ಎನ್.ಪಿ.ಎ. ಪಟ್ಟಿಯನ್ನು ಕೊಡುತ್ತಿವೆ. ಆ ಸಂಖ್ಯೆಗಳು ಏನು ಹೇಳುತ್ತಿವೆ? ಶೇಕಡಾ ೭೫ರಷ್ಟು ಎನ್.ಪಿ.ಎ.ಗಳು ರೈತರಿಂದ ಆಗಿಲ್ಲ. ಕಾರ್ಪೊರೇಟ್ ಕಂಪೆನಿಗಳು ತೆಗೆದುಕೊಂಡ ಸಾಲದ ಬಗ್ಗೆ ಕ್ರಮ ತೆಗೆದುಕೊಳ್ಳದೆ, ರೈತರ ಮೇಲೆ ಗೂಬೆ ಕೂರಿಸಿದರೆ ಅದಕ್ಕೆ ಅರ್ಥವಿಲ್ಲ. ನಾನು ಈ ಅಧಿವೇಶನದಲ್ಲಿ ರೈತರ ಸಮಸ್ಯೆಯನ್ನು ಚರ್ಚಿಸಲು ವಿಶೇಷ ಅಧಿವೇಶನವನ್ನು ನಡೆಸಲು ಕೇಳಿಕೊಂಡಿದ್ದೇನೆ.

**ಹೊಸತು:** ಈಗ ನೋಡಿ, ನೋಟು ಅಮಾನ್ಯೀಕರಣದ ಪ್ರಭಾವ ಹಳ್ಳಿ ಮತ್ತು ಪಟ್ಟಣದವರಿಗಿಂತ ನಗರದವರ ಮೇಲೆ ಹೆಚ್ಚಾಗಿದೆಯಲ್ಲವೆ?

**ಸಾಯಿನಾಥ್** : ಖಂಡಿತ. ಅದು ಗ್ರಾಮೀಣ ಜನಜೀವನವನ್ನು ಮೂರಾಬಟ್ಟೆಯಾಗಿಸಿತು. ಈ ಸುದ್ದಿಯನ್ನು ಕುರಿತು ವರದಿಯಾದದ್ದೂ ಕಡಿಮೆಯೇ. ಪಟ್ಟಣಗಳಲ್ಲಿ ಬ್ಯಾಂಕುಗಳ ಮುಂದೆ ಜನರು ಉದ್ದುದ್ದ ಕ್ಯೂಗಳಲ್ಲಿ ನಿಂತಿದ್ದ ಚಿತ್ರಗಳನ್ನು ಪತ್ರಿಕೆಗಳು ಪ್ರಕಟಿಸಿದವು. ಆದರೆ ಶೇಕಡಾ ೬೯ರಷ್ಟು ಜನ ವಾಸ ಮಾಡುವ ಹಳ್ಳಿಗಳಲ್ಲಿ ಶೇಕಡಾ ೩೦ರಷ್ಟು ಎ.ಟಿ.ಎಂ.ಗಳು ಮಾತ್ರ ಕಾರ್ಯ ಮಾಡುತ್ತಿದ್ದವು. ಅಲ್ಲಿ ನಗದು ಹಣದ ಪೂರೈಕೆಗೆ ಭಾರಿ ಕೊರತೆಯಿತ್ತು. ಹಾಗೆಯೇ ಹಳ್ಳಿಗಳಲ್ಲಿ ಶಾಲೆಗಳಲ್ಲಿ ಕೊಡುತ್ತಿದ್ದ ಮಧ್ಯಾಹ್ನದ ಊಟ ಪೂರೈಸಲಾರದೆ ಹಲವಾರು ಮಕ್ಕಳು ಹಸಿವಿನಿಂದ ತತ್ತರಿಸಿದರು. ಆ ಅಡುಗೆ ಮಾಡುತ್ತಿದ್ದ ಮಹಿಳೆಯರು ತಮ್ಮ ವ್ಯಾಪಾರದಿಂದ ವಂಚಿತರಾಗಿ ಬಹಳ ಕಷ್ಟಪಟ್ಟರು.

ಸಾಯಿನಾಥ್ ಬರೆದಿರುವ 'ಎವೆರಿಬಡಿ ಲೌಸ್ ಎ ಗುಡ್ ಡ್ರಾಟ್' (ಪೆಂಗ್ವಿನ್ ಇಂಡಿಯ ೧೯೯೬) ಅತ್ಯಂತ ಹೆಚ್ಚು ಮಾರಾಟವಾದ ಕೃತಿಯಾಗಿದೆ. ಭಾರತದ ಉದ್ದಗಲಕ್ಕೂ ೧,೦೦,೦೦೦ ಕಿಲೋ ಮೀಟರ್‌ಗಳಷ್ಟು ಸುತ್ತಾಡಿ ಜನರನ್ನು ಮಾತನಾಡಿಸಿ ಬರೆದ ಪುಸ್ತಕವಿದು. ಈ ಸುತ್ತಾಟದಲ್ಲಿ ೧೬ ವಿಧದ ವಾಹನಗಳಲ್ಲಿ ಸಂಚರಿಸಿದ್ದಾರೆ; ೫೦೦೦ ಕಿಲೋ ಮೀಟರ್‌ಗಳಷ್ಟು ಕಾಲ್ನಡಿಗೆಯಲ್ಲಿ ಸಂಚರಿಸಿದ್ದಾರೆ. ೩೪ ಮುದ್ರಣಗಳನ್ನು ಕಂಡಿರುವ ಈ ಪುಸ್ತಕವನ್ನು ೧೦೦ ವಿಶ್ವವಿದ್ಯಾಲಯಗಳು ಬಳಸುತ್ತಿವೆ. ಹತ್ತು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿದೆ. ಕನ್ನಡದಲ್ಲಿ ಶ್ರೀ. ಜಿ. ಎನ್. ಮೋಹನ್‌ರವರು "ಬರ ಅಂದ್ರೆ ನಂಗಿಷ್ಟ" ಎಂದು ಅದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಪುಸ್ತಕವನ್ನು ಕುರಿತು ಮಾತನಾಡುತ್ತಾ ಹಿರಿಯ ಪತ್ರಕರ್ತ ನಿಖಿಲ್ ಚಕ್ರವರ್ತಿಯವರು ಪಿ. ಸಾಯಿನಾಥ್ ಅವರನ್ನು "ಭಾರತ ದೇಶದ ಸಾಕ್ಷಿ ಪ್ರಜ್ಞೆ" ಎಂದು ಬಣ್ಣಿಸಿದ್ದಾರೆ.

೧೯೫೭ರಲ್ಲಿ ಚೆನ್ನೈನಲ್ಲಿ ಜನಿಸಿದ ಪಾಲಗುಮ್ಮಿ ಸಾಯಿನಾಥ್ ನಮ್ಮ ದೇಶ ಕಂಡ ಅಪ್ರತಿಮ ಪತ್ರಕರ್ತ. ತನ್ನ ಪತ್ರಿಕಾ ವೃತ್ತಿಯನ್ನು ಜೀವನೋಪಾಯಕ್ಕೆಂದು ಮಾತ್ರ ಭಾವಿಸದೆ ಅದನ್ನು ಸಾಮಾಜಿಕ ಕೈಂಕರ್ಯವೆಂಬಂತೆ ದೀಕ್ಷೆ ತೊಟ್ಟರು. ಚೆನ್ನೈನ ಲಯೋಲ ಕಾಲೇಜು ಮತ್ತು ದೆಹಲಿಯ ಜವಹರಲಾಲ್ ನೆಹರು ವಿಶ್ವವಿದ್ಯಾಲಯದಲ್ಲಿ ಓದಿ ೧೯೮೦ರಲ್ಲಿ ಯುನೈಟೆಡ್ ನ್ಯೂಸ್ ಆಫ್ ಇಂಡಿಯಾದಲ್ಲಿ ಪತ್ರಕರ್ತನಾಗಿ ಸೇರುವ ಮೂಲಕ ತಮ್ಮ ಉದ್ಯೋಗ ರಂಗ ಪ್ರವೇಶಿಸಿದರು. ನಂತರ ಬ್ಲಿಟ್ಜ್ ಮತ್ತು ಹಿಂದೂ ಪತ್ರಿಕೆಗೆ ಪಾದಾರ್ಪಣೆ ಮಾಡಿದರು. ಕೆಲವು ವರ್ಷಗಳ ಕಾಲ ಚೆನ್ನೈನ ಏಷ್ಯನ್ ಕಾಲೇಜ್ ಆಫ್ ಜರ್ನಲಿಸಂ ಮತ್ತು ಕೆನಡಾದ ಸೇಂಟ್ ಫ್ರಾನ್ಸಿಸ್ ಕ್ಸೇವಿಯರ್ ವಿಶ್ವವಿದ್ಯಾಲಯದಲ್ಲಿ ಅಧ್ಯಾಪನವನ್ನು ಮಾಡಿದವರು. ಅವರ ೩೮ ವರ್ಷಗಳ ಪತ್ರಿಕೋದ್ಯಮ ಜೀವನದಲ್ಲಿ ಅವರ ಮುಡಿಗೇರಿದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರಶಸ್ತಿಗಳು, ಬಿರುದು ಬಾವಲಿಗಳು ಹಲವಾರು. ೨೦೦೭ರಲ್ಲಿ ಅವರಿಗೆ ಒಲಿದು ಬಂದ ಮ್ಯಾಗ್ಸೇಸೆ ಪ್ರಶಸ್ತಿಯ ಜೊತೆಗೆ ಸುಮಾರು ೪೦ ಪ್ರಶಸ್ತಿಗಳು ಅವರನ್ನರಸಿ ಬಂದವು. ರಾಷ್ಟ್ರದ ಉನ್ನತ ಪ್ರಶಸ್ತಿಗಳಲ್ಲೊಂದಾದ ಪದ್ಮಭೂಷಣ ಪ್ರಶಸ್ತಿಯನ್ನು ಅವರು ನಿರಾಕರಿಸಿದ್ದರು ಕೂಡ. ಈಗ ಗ್ರಾಮೀಣ ಜನರ ಪತ್ರಾಗಾರ (People's Archive of Rural India)ದ ಸ್ಥಾಪಕ ಟ್ರಸ್ಟಿಯಾಗಿ ಕೆಲಸ ಮಾಡುತ್ತಿದ್ದಾರೆ.



**ಹೊಸತು:** ಇನ್ನೊಂದು ಪ್ರಶ್ನೆ, ಪತ್ರಿಕೋದ್ಯಮದಲ್ಲಿ ಇಂದು ಆ್ಯಕ್ಟಿವಿಸಂ ಕಡಿಮೆಯಾಗಿದೆ ಎಂದೆನಿಸುವುದಿಲ್ಲವೆ?

**ಸಾಯಿನಾಥ್ :** ಹೌದು. ಇಂದು ಪತ್ರಿಕೋದ್ಯಮದ ಸ್ಥಿತಿಗತಿ ಚಿಂತಾಜನಕವಾಗಿದೆ. ಕಾರ್ಪೊರೇಟ್ ಕಂಪೆನಿಗಳು ತಮ್ಮ ಹಣಕಾಸಿನ ಅಜೆಂಡಾ ಇಟ್ಟುಕೊಂಡು ಪತ್ರಿಕೆಗಳನ್ನು ನಡೆಸುತ್ತಿವೆ. ಇಲ್ಲಿ ಯಾವ ಆ್ಯಕ್ಟಿವಿಸಂಅನ್ನು ನಿರೀಕ್ಷಿಸಬಹುದು? ಹಾಗಂತ ನಿರಾಶರಾಗಬೇಕಿಲ್ಲ. ಕೆಲವು ಹೊಸ ಹೊಸ ಪ್ರಯೋಗಗಳು ನಡೆಯುತ್ತಿವೆ. ಸರ್ಕಾರದ ಮತ್ತು ಕಾರ್ಪೊರೇಟ್ ಕಂಪೆನಿಗಳ ಸೂತ್ರಧಾರತ್ವವಿಲ್ಲದ ಪತ್ರಿಕೆಗಳು ಬರಬೇಕು. ಇವತ್ತು ಸಮೂಹವೇ ಇಲ್ಲದ ಸಮೂಹ ಮಾಧ್ಯಮಗಳು ಕಾರ್ಯ ನಿರ್ವಹಿಸುತ್ತಿವೆ.

**ಹೊಸತು:** ಕೊನೆಯದಾಗಿ ಒಂದು ಪ್ರಶ್ನೆ, ರೈತ ಸಂಘಟನೆಗಳಿಗೆ ನಿಮ್ಮ ಸಂದೇಶವೇನು?

**ಸಾಯಿನಾಥ್ :** ಸುಮಾರು ೨೦೦ ರೈತ ಸಂಘಟನೆಗಳು ಮೆರವಣಿಗೆಯಲ್ಲಿ ಪಾರ್ಲಿಮೆಂಟಿನತ್ತ ಮೆರವಣಿಗೆ ಹೊರಡುತ್ತಿವೆ. ರೈತರಿಗೆ ಈ ಮೆರವಣಿಗೆಯಲ್ಲಿ ಅಪಾರ ಸಂಖ್ಯೆಯಲ್ಲಿ ಸೇರಿಕೊಳ್ಳಲು ಹೇಳಿ. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗಿನ ಎಲ್ಲ ರೈತರು ಈ ಮೆರವಣಿಗೆಯಲ್ಲಿ ನವೆಂಬರ್ ೩೦ರಂದು ಸುಮಾರು ೧೫೦ ಕಿಲೋ ಮೀಟರ್‌ಗಳಷ್ಟು ಕಾಲ್ನಡಿಗೆಯಲ್ಲಿ ಸಂಚರಿಸಿ ಪಾರ್ಲಿಮೆಂಟ್ ಚಲೋ ಹೊರಡಲಿದ್ದಾರೆ. ರೈತರನ್ನು ಬೆಂಬಲಿಸುವ ಎಲ್ಲಾ ಸಂಸದರೂ ಈ ಮೆರವಣಿಗೆಗೆ ಸೇರಿಕೊಳ್ಳಲಿದ್ದಾರೆ. ಮಧ್ಯಮವರ್ಗದವರೂ ಈ ಮೆರವಣಿಗೆಗೆ ಜೊತೆ ಸೇರಬೇಕು. ರೈತರ ಸಮಸ್ಯೆಯನ್ನು ಚರ್ಚಿಸಲು ೨೧ ದಿನಗಳ ವಿಶೇಷ ಅಧಿವೇಶನಕ್ಕೆ ಒತ್ತಾಯ ತರಲಾಗುತ್ತಿದೆ. ಹಾಗೆಯೇ ರೈತ ಮಹಿಳೆಯರ ಸಮಸ್ಯೆಯನ್ನು ಚರ್ಚಿಸಲು ೩ ದಿನಗಳ ವಿಶೇಷ ಅಧಿವೇಶನವು ನಡೆಯಲಿದೆ.

ಲೇಖನ ಸಿದ್ಧಪಡಿಸಿದವರು

**ಡಾ॥ ಎನ್. ಗಾಯತ್ರಿ**
೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಛತ್ರಂ ಬ್ಲಾಕ್, ಕೆಂಪೇಗೌಡ ನಗರ
ಗವಿಪುರಂ, ಬೆಂಗಳೂರು – ೫೬೦ ೦೧೯



ನವಕರ್ನಾಟಕ ಪ್ರಕಟಿಸಿರುವ ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ ಅವರು ಅನುವಾದಿಸಿರುವ ಶ್ರೀ ಪಂಕಜ್ ಸೇಖ್‌ಸರಿಯಾ ಅವರ 'ಕೊನೆಯ ಅಲೆ – ದ್ವೀಪವೊಂದರ ಕಥೆ' ಕೃತಿಯನ್ನು ೨೦–೮–೨೦೧೮ರಂದು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಯಲ್ಲಿ ಶ್ರೀ ನಾಗೇಶ ಹೆಗಡೆ ಅವರು ಲೋಕಾರ್ಪಣೆ ಮಾಡಿದರು. ವೇದಿಕೆಯಲ್ಲಿ ಶ್ರೀ ಪಂಕಜ್ ಸೇಖ್‌ಸರಿಯಾ, ಶ್ರೀ ನಾಗೇಶ ಹೆಗಡೆ, ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ ಮತ್ತು ಡಾ॥ ಸಿದ್ದನಗೌಡ ಪಾಟೀಲ ಉಪಸ್ಥಿತರಿದ್ದರು.

೧೯೮೮ರಿಂದ ಕಾರ್ಯನಿರತ ಪತ್ರಕರ್ತರಾದ ಇವರು ಅನೇಕ ಲೇಖನಗಳನ್ನು, ಕಥೆಗಳನ್ನು ರಚಿಸಿದ್ದಾರೆ. 'ಅಲಿವೇಣಿ ಅಣಿ ಮುತ್ಯಾಲು', 'ಸ್ವರೂಪ ಸುಧ', 'ದಾಲಪ್ಪ ತೀರ್ಥಂ' ಮತ್ತು 'ನಾನಿ–ವಿವೇಚನೆ' ಇವರ ಕೃತಿಗಳು. ಹಿಂದುಳಿದ ಜನರು ಜಾತಿಗಳ ಬಗ್ಗೆ ಸಹಾನುಭೂತಿ, ಸ್ತ್ರೀಯರ ಸಮಸ್ಯೆಗಳ ಕುರಿತಾಗಿ ಮುಕ್ತ ಮನಸ್ಸು, ಮಾನವ ಸಂಬಂಧಗಳ ಆಳವಾದ ಅಧ್ಯಯನ ಮತ್ತು ಆ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಬಿಂಬಿಸುವುದನ್ನು ಕಾಣುತ್ತೇವೆ.

# ಪಾದಗಳಿಗೆ ಎದುರಾದ ಪ್ರಶ್ನೆಗಳು

ತೆಲುಗು ಮೂಲ

**ಡಾ॥ ಚಿಂತಕಿಂದಿ ಶ್ರೀನಿವಾಸರಾವ್**

ಕನ್ನಡಕ್ಕೆ

**ಡಾ॥ ಗುರುಮೂರ್ತಿ ಪೆಂಡಕೂರು**

ಆ ದಿವಸ ನಮ್ಮೂರು ಚೋಡವರಂನಲ್ಲಿ ಅರಳಿದ ಹೂಗಳೆಲ್ಲಾ ದೇವಾಲಯಗಳಿಗೋ, ನಮ್ಮೂರ ಗರತಿಯರ ತುರುಬುಗಳಿಗೋ, ಭಕ್ತ ಜನರ ಕಿವಿಗೋ ಸಿಗಲಿಲ್ಲ. ಎಲ್ಲ ಕಲೆತು ನಮ್ಮ ಜಾನ್ ಮೇಷ್ಟ್ರ ಕೊರಳಿಗೆ ಅಲಂಕಾರವಾದವು. ಹೂವೆಲ್ಲಾ ಹಾರಗಳಾಗಿ ಆತನ ಎದೆಯನ್ನು ಅಲಂಕರಿಸಿದವು. ಮನಸ್ಸಿಗೆ ಬಂದಂತೆ ಓಲಾಡಿದವು. ನಮ್ಮ ಮೇಷ್ಟ್ರು ಮಾತ್ರ ಹೂಮಾಲೆಗಳ ನಡುವೆ ನಾಚಿ ನೀರಾದರು. ಜಯಕಾರಗಳ ನಡುವೆ, ಮೆರವಣಿಗೆಯ ನಡುವೆ ಅಷ್ಟು ಧೈರ್ಯವಂತರಾದರೂ ಅದೊಂದು ತರಹ ಮುಖದ ಮೇಲೆಲ್ಲಾ ಲಜ್ಜಾ ಭಾವ ತುಂಬಿದರು. ಮತ್ತೆ ಆವತ್ತೇನು ಮಾಮೂಲು ದಿನವಲ್ಲ. ನಮ್ಮೂರಿಗೆ, ನಮ್ಮ ಮೇಷ್ಟ್ರಿಗೆ ವಿಶೇಷವಾದ ದಿವಸ. ನಮ್ಮ ಇರುಪಂಚಾಲ ಹಳ್ಳಿಗಳ ಜನರಿಗೆ ಮರೆಯ ಲಾಗದ ಮಹಾದಿನ. ಮೇಷ್ಟರು ಗಂಡಿನಲ್ಲಿ ಗಂಡಾಗಿ ನಮ್ಮ ಮಾರಕಮ್ಮ ರೇವಿನಲ್ಲಿ ಕರಡಿಯೊಂದನ್ನು ತುಪಾಕಿಯಿಂದ ಗುಂಡು ಹಾರಿಸಿ ಗತಿ ಕಾಣಿಸಿದ ದಿವಸ. ಗುಂಡಿಗೆ ಬಲಿಯಾದ ಕರಡಿಯನ್ನೂ ಬಂದೂಕವನ್ನೂ ಹೆಗಲಿಗೇರಿಸಿಕೊಂಡು ಊರಿಗೆ ಶೂರನಂತೆ ನಡೆದು ಬಂದ ದಿವಸ. ಅಂದಿಗೆ ಹದಿನೈದು ದಿವಸಗಳ ಮೊದಲು ನಮ್ಮೂರಿನ ಭಾಮೆಯರು ಬಿಂದಿಗೆಗಳನ್ನು ತೆಗೆದುಕೊಂಡು ಮಾರಕಮ್ಮ ರೇವಿನ ದಂಡೆಗೆ ನೀರಿಗಾಗಿ ಹೋಗಲಿಲ್ಲ.

ನದಿ ಸ್ನಾನಮಾಡಿ ಪುಣ್ಯ ಸಂಪಾದನೆ ಮಾಡ ಬೇಕೆಂಬ ಪತಿವ್ರತಾ ಶಿರೋಮಣಿಯರು ಆಕಡೆ ಕಣ್ಣೆತ್ತಿ ನೋಡಲಿಲ್ಲ. ಹಳ್ಳದ ದಂಡೆಯ ಮಾವಿನ ತೋಟ ಗಳಲ್ಲಿ, ತಾಳೆಯ ವನದಲ್ಲಿ ಜನ ಸಂಚಾರವೇ ಇಲ್ಲ. ಅಷ್ಟೇಕೆ, ದೊಡ್ಡ ತಂಬಿಗೆ ಹಿಡಕೊಂಡು ನಾಚಿಕೆ ಪಾಚಿಕೆಯಿಲ್ಲದೆ ಮಹಾರಾಜನಂತೆ ಠೀವಿಯಲ್ಲಿ ಹಳ್ಳದ ಕೊನೆಗೆ ದಿನಾ ದೊಡ್ಡಿಗೆ ಹೋಗುವ ನಮ್ಮ ಕರಣಂ ಸರಿಪಲ್ಲಿ ಸತ್ತಿಬಾಬು ಕೂಡ ಆ ಕಡೆ ಕಣ್ಣೆತ್ತಿ ನೋಡಲಿಲ್ಲ. ಇದೆಲ್ಲದಕ್ಕೆ ಕಾರಣ ಒಂದು ಕರಡಿ ಎಂದರೆ ನಂಬುತ್ತೀರಾ? ನಂಬಲೇಬೇಕು. ನಮ್ಮೂರೆಂದರೆ ನಮ್ಮ ವಿಶಾಖಪಟ್ಟಣ ಜಿಲ್ಲೆಯ ಅರಣ್ಯಗಳಿಗೆ ಮಹಾದ್ವಾರದಂಥದು. ನಮ್ಮನ್ನು ದಾಟಿಕೊಂಡೇ ಕಾದಿಟ್ಟ ಅರಣ್ಯಕ್ಕೆ ಕಾಲಿಡಬೇಕು. ಊರಿಗೆ ಅಂಟಿಕೊಂಡಿರುವ ಮಾರಕಮ್ಮ ರೇವಿನ ಹತ್ತಿರ ಹೊಲಗಳಿಗೆ, ಹಳ್ಳದ ಬದುವಿನ ತಗ್ಗುಗಳಿಗೆ ಆಗಾಗ ಅಡವಿಯಿಂದ ನಾನಾ ಜಾತಿಯ ನರಿಗಳು, ಕರಡಿಗಳು, ಬಂದು ಹೋಗುತ್ತಿದ್ದವು. ಬಂದವು ಬಂದ ಹಾಗೆ ಸಿಕ್ಕಿದ್ದು ತಿಂದು ಪಾಡೇರು ಗುಡ್ಡಗಳಿಗೋ, ಗಂಗರಾಜ ಮೂಡುಗುಲ ಗಿರಿಗಳಿಗೋ ಹೋಗುತ್ತಿದ್ದವು. ಈ ಸಲ ಹಾಗಾಗಲಿಲ್ಲ. ಅದೇ ಸಮಸ್ಯೆ. ಈ ಸಲ ರೇವಿಗೆ ಬಂದ ಕರಡಿ, ಅಸಾಧ್ಯ ಕರಡಿ. ಅದು ಇತ್ತ ಕಾಯಿ-ಗಡ್ಡೆ ತಿನ್ನುತ್ತಾ ರೇವಿನ



ಪೊದೆಗಳಲ್ಲಿ ಮುಕ್ಕಾಮು ಹಾಕಿತು. ಆದರೆ ಸುಮ್ಮನೆ ಇರಲಿಲ್ಲ. ಪಕ್ಕದ ಚಾಕಿರೇವಿನಲ್ಲಿ ಬಟ್ಟೆ ಒಣಗಿಸುತ್ತಿದ್ದ ಮಡಿವಾಳ ಗಂಗರಾಜನ ಮೇಲೆ ದಾಳಿ ಮಾಡಿತು. ಅವನ ಮೇಲೆ ಹಿಗ್ಗಾಮುಗ್ಗಾ ಏಟು ಹಾಕಿತು. ಸಿಕ್ಕವರಿಗೆ ಸಿಕ್ಕಾಪಟ್ಟೆ ಗಾಯ ಮಾಡಿತು. ಶನಿಯಂತೆ ಹಿಡಿದ ಕರಡಿಯಿಂದ ತಪ್ಪಿಸಿಕೊಳ್ಳಲು ಗಂಗನು ನಾನಾ ರೀತಿಯಲ್ಲಿ ಹೋರಾಡಿದನು. ರಕ್ತ ಕಾರುತ್ತಾ ಓಡಿದನು. ಆದರೇನು ಉಪಯೋಗ. ಅದೊಂದು ಹೊಲಸು ಪ್ರಾಣಿ, ಆದರೇನು, ಮನುಷ್ಯ ಹೇಗೆ ಎದುರಿಸಬಲ್ಲ ? ಓಡಲಾರದಾದ, ಕೊನೆಗೆ ಆ ಕರಡಿಯಿಂದ ಗಂಗನನ್ನು ರಕ್ಷಿಸಲು ನಮ್ಮ ಅಗಸರು ನಾನಾ ಪ್ರಯತ್ನಗಳನ್ನು ಮಾಡಿದರು. ಕಲ್ಲು, ಗುಂಡು, ಕಟ್ಟಿಗೆ ಎಲ್ಲಾ ಉಪಯೋಗಿಸಿ ದಾಳಿ ಮಾಡಿದಾಗ ಅದು ಹಿಂಜರಿಯಿತು. ಕರಡಿ ದಾಳಿಗೆ ಸಾಯುವಂತಾದ ಗಂಗರಾಜನನ್ನು ತಂದು ಊರ ನಡುವಿನ ಧರ್ಮಾಸ್ಪತ್ರೆಗೆ ಸೇರಿಸಿದರು. ಸುದ್ದಿ ತಿಳಿದ ಜನರು ಗುಂಪು ಗುಂಪಾಗಿ ಆಸ್ಪತ್ರೆಗೆ ಧಾವಿಸಿದರು. ಚರ್ಮ ಕಿತ್ತ, ಮೈತುಂಬ ಗಾಯಗಳಾದ, ಮಾಂಸದ ಮುದ್ದೆಯಂತಿದ್ದ ಗಂಗನನ್ನು ಕಣ್ತುಂಬ ನೋಡಿ ಮೂಗು ಸೀನುವವರು, ಚು ಚು ಚು ಎನ್ನುವವರು, ಕರಡಿಯನ್ನು ಶಪಿಸುವವರು ತುಂಬಿದರು. ನಮ್ಮೂರು ಒಂದೇ ಏಕೆ? ಅಕ್ಕಪಕ್ಕದ ಗೋವಾದ ಅಂಬೇರುಪುರ, ರಾಯಪರಾಜುಪೇಟೆ, ಎಂಕನ್ನ ಪಾಳ್ಯ ಮುಂತಾದ ಊರ ಜನರೆಲ್ಲಾ ನಮ್ಮೂರಿಗೆ ಬಂದು ಸೇರಿದರು. ಕರಡಿಯ ತಾಯಿಯನ್ನು ಹೆಂಡಂದಿರನ್ನು ಕೂಡಾ ಶಪಿಸಿದರು. ಈ ಬೈಗಳು ಇನ್ನೂ ಮುಗಿದಿರಲಿಲ್ಲ. ಆಗಲೇ ಮತ್ತೊಂದು ದರಿದ್ರ ವಾರ್ತೆ ಬಂತು. ಗಂಗರಾಜನನ್ನು ಹೊಡೆದ ಕರಡಿಯು ಮತ್ತೊಂದು ರಂಪ ಮಾಡಿತ್ತು. ರೇವಿನ ಮಾವಿನ ತೋಪಿನಲ್ಲಿ ಗಂಜಿ ಕುಡಿಯುತ್ತಿದ್ದ ಕಾವಲುಗಾರ ಅನ್ನಾಏತ್ತುಲ ಕೋಟೇಶುವಿನ ಕತೆಯನ್ನು ಮುಗಿಸಿತು. ಮೂಲೆಯಲ್ಲಿ ಚಪ್ಪರಿಸುತ್ತಾ ಗಡಿಗೆಯಲ್ಲಿನ ಗಂಜಿಯನ್ನು ಸುರ್ರೆಂದು ಕುಡಿಯುತ್ತಿದ್ದ ಕೋಟೇಶನನ್ನು ಹಿಂದಿನಿಂದ ಹಾರಿದ ಕರಡಿ ಅವನ ಮೇಲೆ ಹತ್ತಿ ಕುಣಿದಾಡಿದೆ. ಕಪ್ಪು ಕೂದಲಿನ ಬಿಳಿ ಹಲ್ಲಿನ ಯಾವುದೋ ಪ್ರಾಣಿ ಇದ್ದಕ್ಕಿದ್ದಂತೆ ಬೆನ್ನು ಮೇಲೆ ಹತ್ತಿದಾಗ ಕೋಟೇಶನ ಮೇಲಿನ ಜೀವ ಮೇಲಕ್ಕೆ ಹೋಯಿತು. ಮೊದಲಿಗೆ ಅವನು ಅದೊಂದು ದೆವ್ವವೆಂದುಕೊಂಡನಂತೆ. ಬಿಡಿಸಿಕೊಳ್ಳಲಾಗಲೇ ಇಲ್ಲವಂತೆ. ಕರಡಿ ಅವನ ಚರ್ಮವನ್ನು ಸುಲಿಯುತ್ತಿದ್ದರೆ ಊರಿಗೆಲ್ಲಾ ಕೇಳಿಸುವಂತೆ ಆಕ್ರಂದನ ಮಾಡಿದನಂತೆ, ಗದ್ದೆಗಳಲ್ಲಿದ್ದ ಕಬ್ಬು ಕಡಿಯುವ ರೈತರ ಕೈಗೆ ಸಿಕ್ಕಿದ್ದರಿಂದ ದಾಳಿ ಮಾಡಿದಾಗ ಪಲಾಯನ ಮಾಡಿದ, ಆ ರೀತಿಯಲ್ಲಿ ಕೋಟೇಶ ಜೀವ ಉಳಿಯಿತಾದರೂ ಒಂದು ಕಣ್ಣು ಹೋಯಿತು. ಆಸ್ಪತ್ರೆಯಲ್ಲಿ ಅವನು ಗಂಗರಾಜನ ಪಕ್ಕದ ಮಂಚ ಏರಿದ್ದಾನಂತೆ. ಅಂದಿನಿಂದ ನಮ್ಮ ಮಾರಕಮ್ಮ ರೇವಿನ ಕಡೆ ಕಾಲಿಡಲು ಜನರು ನಡುಗತೊಡಗಿದರು. ಇದೇ ಅನುಕೂಲ, ಸುಖಮಯ ಎಂದು ತಿಳಿದ ಕರಡಿ ಅಲ್ಲೇ ನೆಲೆಯೂರಿತು. ಹೆಂಡ ಕುಡಿದ ಮಂಗನಂತೆ ಹುಚ್ಚೆದ್ದ ಕರಡಿ ಕಬ್ಬಿನ ತೋಟಗಳಿಗೆ ನುಗ್ಗಿ ಮನಸಾರೆ ತಿಂದು, ಧ್ವಂಸ ಮಾಡುವುದನ್ನು ಆರಂಭಿಸಿತು. ನಿಜವಾಗಿ ಹೇಳಬೇಕೆಂದರೆ ಹಳ್ಳಕ್ಕೂ ನಮ್ಮೂರಿಗೂ ಇದ್ದ ಸಂಬಂಧ ವಿಶೇಷವಾದುದು. ತಾಯಿ–ಮಕ್ಕಳ ಕರುಳ ಸಂಬಂಧದ ರೀತಿಯಿದು. ಅಂತಹ ಸಂಬಂಧವನ್ನು ಈ ಕರಡಿ ಕತ್ತರಿಸಿಹಾಕಿತು. ಈ ರೀತಿಯ ಕಾಲದಲ್ಲಿ ಊರ ಜನರ ಬದುಕು ಕಷ್ಟಕರವಾಗಿ ಅವರು ನಿದ್ದೆ ಮಾಡದಂತಾಯಿತು.

ವಿಷಯ ತಿಳಿದ ಅರಣ್ಯ ಇಲಾಖೆಯವರು ಕಂಗಾಲಾದರು. ಚೋಡವರದಲ್ಲಿಯೇ ಕ್ಯಾಂಪ್ ಹಾಕಿದರು. ಪೊಲೀಸರು ಅವರ ನೆರವಿಗೆ ಬಂದರು. ಗ್ರಾಮದ ಅಧ್ಯಕ್ಷ ಕುರುಮುದ್ದಾಲಿ ಪಾಪಾರಾವ್ ಅವರ ಕಾಲು ಹಿಡಿದು ಬೇಡಿಕೊಂಡರು. ಮುನ್ಸೀಫ್ ಕೊಟ್ನ ಮಹಾಲಕ್ಷ್ಮಿ ನಾಯುಡು, ಕರಣಂ ಸತ್ತಿಬಾಬು ನಾನಾರೀತಿಯಲ್ಲಿ ಅವರಿಗೆ ನೆರವಾದರು. ಒಂದು ಕಡೆ ಪೊಲೀಸರು, ಮತ್ತೊಂದು ಕಡೆ ಅರಣ್ಯ ಇಲಾಖೆಯವರೇ ಅಲ್ಲದೆ ನಮ್ಮೂರಿನ ಮುತ್ಥಾಳರೆಂದು ಹೆಸರಾದ ಗೋವಿಂದ ಮುಂತಾದವರು ಗುಂಪು ಗುಂಪಾಗಿ ಕರಡಿಯನ್ನು ಸಂಹರಿಸಲು ರೇವಿಗೆ ಹೊರಟರು. ಕೆಲವರ ಕೈಯಲ್ಲಿ ಖಡ್ಗಗಳು, ಮತ್ತೆ ಕೆಲವರ ಕೈಯಲ್ಲಿ ದೊಣ್ಣೆಗಳು, ಮತ್ತೆ ಕೆಲವರ ಕೈಯಲ್ಲಿ ಕೊಡಲಿಗಳು ಹಿಡಿದ ಗುಂಪು ಹೊರಟಿತು. ಅರಣ್ಯ ಇಲಾಖೆಯವರು ಸರಿಯಾಗಿ ಗುಂಡು ಹಾರುತ್ತವೆಯೋ ಇಲ್ಲವೋ ತಿಳಿಯದೆ ಹಳೆಯ ತುಪಾಕಿಗಳೊಂದಿಗೆ ಬೇಟೆಗೆ ಹೊರಟರು. ರೇವಿನವರೆಗೆ ವೀರಾಧಿವೀರರಂತೆ ಹೊರಟ ಈ ಶೂರರೆಲ್ಲಾ ಕರಡಿಯನ್ನು ಹುಡುಕೋದರಲ್ಲಿ ಬಸವಳಿದರು. ಯಾವ ಕಡೆಯಿಂದ ಅದು ಬಂದರೂ ಇವರನ್ನು ಹಣಿಯದೇ ಇರಲಾರದೆಂದು ಅಂಜುತ್ತ ಅಂಜುತ್ತ ಹುಡುಕತೊಡಗಿದರು. ಇವರೆಲ್ಲಾ ರೇವಿನ ಒಡ್ಡಿಗಿದ್ದ ಪೊದೆಯಲ್ಲಿ ಗುಂಪು ಗುಂಪಾಗಿ ಹುಡುಕುತ್ತಿರುವಾಗ, ಸ್ವಲ್ಪ ದೂರ ಹೋಗಿ ಕರಡಿಯ ಸಲುವಾಗಿ ತಡಕಾಡುತ್ತಿದ್ದ ವೀರೇಶನ ಆಕ್ರಂದನ ಜೋರಾಗಿ ಕೇಳಿಸಿತು. "ಸತ್ತೆನ್ರೋ" ಎಂದು ಅವನು ಕೇಕೆ ಹಾಕಲು ಉಳಿದವರು ಹೆದರಿ ನೀರಾದರು. ದೊಡ್ಡ ಧೈರ್ಯವಂತನಂತೆ ಕಬ್ಬಿನ ಗದ್ದೆಗೆ ಕಾಲಿಟ್ಟ ವೀರೇಶನನ್ನು ಕರಡಿ ತಕ್ಷಣ ಹಿಡಿಯಿತು. ಅವನನ್ನು ಚೆನ್ನಾಗಿ ಮೆತ್ತಗೆ ಮಾಡಿತು. ಎಲ್ಲೆಂದರಲ್ಲಿ ಕಚ್ಚಿ ಗಾಯ ಮಾಡಿತು. ಅವನ ಬಾಯಲ್ಲಿ ಸುಡುತ್ತಿರುವ ಕುದುರೆ ಮಾರ್ಕಿನ ಬೀಡಿ ಇತ್ತು. ಬೆಂಕಿಗೆ ಹೆದರಿ ಕರಡಿ ಅವನನ್ನು ಬಿಟ್ಟ ಕಾರಣ ಅವನು ಬದುಕಿ ಉಳಿದ. ಬದುಕಿದೆಯಾ ಬಡ ಜೀವವೇ ಎಂದು ಅವನು 'ಹೋ' ಎಂದು ಓಡಿ ಬಂದು ತಿಳಿಸಿದ ಮೇಲೆ ಎಲ್ಲರಿಗೂ ಗೊತ್ತಾಯಿತು. ಇನ್ನು ಈ ಕರಡಿ ವ್ಯವಹಾರ ನಮ್ಮ ಕೈಮೀರಿದ್ದು ಎಂದು ತೀರ್ಮಾನಿಸಿ ಬೇಟೆಗೆ ಹೋದ ಗುಂಪು ಮನೆಗೆ ಮರಳಿತು.

ಪಂಚಾಯಿತಿ ಬೋರ್ಡು ಸದಸ್ಯರು ಬೆಂಚಿನ ಮೇಲೆ ಕೂತು ಒದರಾಡಿದ್ದಷ್ಟೆ. ಊರ ಹಿರಿಯರೂ ಅವರೊಂದಿಗೆ ಸೇರಿ ಸಾಕಷ್ಟು ಮಾತಾಡಿ ಮಾತಾಡಿ ಸುಸ್ತಾದರು. ಕೊನೆಗೆ, ಈ ಕರಡಿಯ ತೊಂದರೆಯಿಂದ ಕಾಪಾಡುವವರಾರಪ್ಪಾ ಎಂದು ಚಿಂತನೆ ಮಾಡುವಾಗ ನಮ್ಮ ಜಾನ್ ಮೇಷ್ಟ್ರ ಹೆಸರು ತೇಲಿ ಬಂತು. ನಮ್ಮ ಜಾನ್ ಮೇಷ್ಟ್ರಂದ್ರೆ ಮಾಮೂಲು ಮೇಷ್ಟ್ರಲ್ಲ. ಧರ್ಮಪ್ರಭು, ನಮ್ಮ ಬೋರ್ಡ್ ಹೈಸ್ಕೂಲ್‌ನಲ್ಲಿ ಉಪಾಧ್ಯಾಯರು. ನಮ್ಮನ್ನೆಲ್ಲಾ ಕಣ್ಣಿನ ರೆಪ್ಪೆಗಳಂತೆ ಕಾಪಾಡುವವರು. ಅವರಿಗೆ ಹೆಂಡತಿ ಮಕ್ಕಳಿಲ್ಲ. ಹಾಗೆಂದರೆ ಅವರಿಗೆ ಯಾವುದೇ ಜವಾಬ್ದಾರಿಗಳಿಲ್ಲವೆಂದು ತಿಳಿಯಲಾಗದು. ನಾವೆಲ್ಲಾ ಅವರ ಜವಾಬ್ದಾರಿಗಳೇ. ನಮಗೆ ಸಣ್ಣ ಜ್ವರ ಬಂದರೆ ಸಾಕು, ಅವರು ತೀವ್ರ ದುಗುಡವನ್ನು ಅನುಭವಿಸುತ್ತಿದ್ದರು. ನಮ್ಮ ಪುಸ್ತಕಗಳು ಹರಿದರೆ ಹೊಸ ಪುಸ್ತಕ ಕೊಡಿಸೋರು, ತಾವು ತಿನ್ನುವುದು ಕಡಿಮೆ, ನಮಗೆ ತಿನ್ನಿಸೋದು ಹೆಚ್ಚು. ಪಕೋಡಾ ಎಂದರೆ ಅವರಿಗೆ ಪೇರಾಸೆ. ಮೇಷ್ಟ್ರ ಧೈರ್ಯದ ಕುರಿತು ತಿಳಿಸಲು ಬೇಕಾದಷ್ಟಿದೆ. ಅವರು ದೊಡ್ಡ ಹೀರೋ. ಅವರಿಗೆ ಭಯವೆಂದರೆ ಏನೆಂದೇ ಗೊತ್ತಿಲ್ಲ. ಊರಲ್ಲಿ ಕುಡಿದು ಗಲಾಟೆ ಮಾಡುವವರು ಜಾನ್ ಬಾಬು ಬಂದರೆಂದರೆ ಸೈಲೆಂಟ್ ಆಗುವರು, ಒಮ್ಮೊಮ್ಮೆ ತೀರಾ ಕುಡಿದವನು ಹೆಚ್ಚು ಮಾತಾಡಿದರೆ, ಮೊದಲ ಸಲ ಮೆಲ್ಲಗೆ ತಿಳಿ ಹೇಳುವರು. ಎರಡನೇ ಸಲ ಎಂದರೆ ನಾಲ್ಕು ಬಿಗಿದು ಅನಂತರ ಬುದ್ಧಿ ಹೇಳುವವರು. ಕಷ್ಟ ಬಂದರೆ ಮುಂದೆ ನಿಂತು ಆಧಾರವಾಗುವರು. ಅದಕ್ಕೆ ಅವರನ್ನು ಧರ್ಮಪ್ರಭು ಎಂದು ಕರೆದರು. ಆಸಾಮಿ ಆಜಾನುಬಾಹು. ಅವರ ಕೈಗಳೋ ದಪ್ಪನ ಬಡಿಗೆಗಳಂತೆ ಇದ್ದವು. ಕಾಲು ಸ್ತಂಭಗಳಂತೆಯೇ ಪಾದಗಳು ಆನೆಯ ಪಾದಗಳಂತೆ ಇದ್ದವು. ಅವರು ಕೈ ಮಾಡಿದರೆ ಯಾರಿಗೇ ಆಗಲೀ ಹಳ್ಳಿಯಲ್ಲಿ ಎಲುಬುಗಳಿಲ್ಲ ಎಂದಂತಾಗುತ್ತಿತ್ತು. ಊರವರೆಲ್ಲರೊಂದಿಗೆ ರಕ್ತದಂತೆ, ಜೀವಕ್ಕೆ ಜೀವದಂತೆ, ಜಾನ್ ಮೇಷ್ಟ್ರು ಬದುಕುತ್ತಿದ್ದರು. ಅಂದ ಹಾಗೆ ಅವರಲ್ಲಿ ತುಪಾಕಿ ಇತ್ತು. ಅದಕ್ಕೆ ಲೈಸನ್ಸ್ ಇತ್ತು. ಆ ಕಾಲದಲ್ಲಿ ಮೇಷ್ಟ್ರು ಕುಮಲಿ ಫಾರ್ಟನಲ್ಲಿ ರೈವಾಡೆ ಬೆಟ್ಟಗಳಲ್ಲಿ ಕಾಡುಹಂದಿಗಳನ್ನು ಬೇಟೆಯಾಡಿದ್ದರೆಂದು ಹಿರಿಯರ ನೆನಪು. ಇಂತಹ ಮೇಷ್ಟ್ರರಿಗೆ ಮತ್ತು ಅವರ ತುಪಾಕಿಗೆ ಮತ್ತೆ ಕೆಲಸ ಒದಗಿತು. ಕರಡಿಯ ಹಲ್ಲೆಗೆ, ದೌರ್ಜನ್ಯಕ್ಕೆ ಗುರಿಯಾದ ಹಳ್ಳಿಯ ಸಮಸ್ತರೂ ಒಂದು ದಿನ ಕೋಳಿ ಕೂಗುವ ಮುನ್ನ ಅವರ ಮನೆಗೆ ಹೋದರು. ಅಳುತ್ತಾ ಅಳುತ್ತಾ ನಡೆದ ಕತೆಯನ್ನೆಲ್ಲಾ ತಿಳಿಸಿದರು. ಕರಡಿಯ ಹಾವಳಿಯಿಂದ ಕಬ್ಬಿನ ತೋಟಗಳು ಹಾಳಾಗುತ್ತಿವೆ ಎಂದು ಮೊರೆಯಿಟ್ಟರು. ಇಲಾಖೆಯವರು ಸೋತು ಕೈಯೆತ್ತಿದರೆಂದು ಹೇಳಿದರು.

ಗಂಗರಾಜ, ಕೋಟಿ, ವೀರೇಶ ಸಾವಿನೊಂದಿಗೆ ಸೆಣಸಾಡುತ್ತಿದ್ದಾರೆಂದು ತಿಳಿಸಿದರು. ತುಪಾಕಿ ತೆಗೆದು ಕರಡಿಯನ್ನು ಕೊಂದರೆ ಎಲ್ಲರಿಗೂ ಸುಖವೆಂದು ವಿನಂತಿಸಿ, ಪ್ರಾರ್ಥಿಸಿ, ಬೇಡಿಕೊಂಡರು. ಆದರೆ ಮೇಷ್ಟರ ಹೃದಯ ಕೂಡಲೇ ಕರಗಲಿಲ್ಲ. "ಪಶು ಪ್ರವೃತ್ತಿಯೇ ಹಾಗೆ. ಇವತ್ತಲ್ಲದಿದ್ದರೂ ನಾಳೆಗಾದರೂ ಅದು ನಿಯಂತ್ರಣವಾಗುತ್ತದೆ" ಎಂದರು. "ಅಯ್ಯೋ ದೇವರೇ, ಹಾಗನ್ನಬೇಡಿ. ದಿನಗಳು ಓಡುತ್ತಿವೆ. ಊರವರು ಕಣ್ಣುಮುಚ್ಚುವಂತಿಲ್ಲ. ನನ್ನ ಗಂಡನನ್ನು ನಾಶ ಮಾಡಿದೆ. ನನ್ನ ಬದುಕು ಹಾಳಾಗಿಹೋಯ್ತು" ಎಂದು ಕರಡಿಯ ದಾಳಿಗೆ ಸಿಕ್ಕು ಸಾಯುವಂತಿರುವ ಗಂಗನ ಹೆಂಡತಿ ರತ್ನಮ್ಮ ಗೋಳೋ ಎಂದು ಮೊರೆಯಿಟ್ಟಳು. ವೀರೇಶನ ಹೆಂಡತಿ ಲಚ್ಚಮಿ ಕೂಡ ರತ್ನಮ್ಮನೊಂದಿಗೆ ಗೋಳಾಡಿದಳು. "ನನ್ನ ಗಂಡನನ್ನು ಅನ್ಯಾಯವಾಗಿ ಮೈತುಂಬ ಗಾಯ ಮಾಡಿದೆ. ದೇವರೇ, ಇನ್ನು ದೇವರೇ ನಮ್ಮನ್ನು ಕಾಯಬೇಕು" ಎಂದು ಬಾಯ್ ಬಾಯಿ ಬಡಕೊಂಡು ಅತ್ತಳು.

ಯಾವಾಗ ಈ ಹೆಂಗಳೆಯರು ಬಿದ್ದು ಬಿದ್ದು ಅಳುವುದಕ್ಕೆ ಆರಂಭಿಸಿದರೋ ಆಗ ನಮ್ಮ ಮೇಷ್ಟರ ಎದೆ ಕರಗಿ ನೀರಾಯಿತು. ಈ ಕರಡಿ ಇನ್ನೆಷ್ಟು ಜನರಿಗೆ ಈ ರೀತಿ ಗೋಳು ಹೊಯ್ದುಕೊಳ್ಳುತ್ತದೆಯೋ ಎಂಬ ಆತಂಕ ಅವರನ್ನು ಕಾಡತೊಡಗಿತು. “ಏನೂ ಹೆದರಬೇಡಿ, ನಾನು ಮಾರಕಮ್ಮ ರೇವಿಗೆ ಹೋಗ್ತೇನೆ. ನನ್ನೊಂದಿಗೆ ಯಾರೂ ಬರಬೇಡಿ. ಮನೆ ಮಠವಿಲ್ಲದ ಒಬ್ಬಂಟಿ ಜೀವ. ನಾನು ಕರಡಿಯ ಕೈಗೆ ಸಿಕ್ಕಿ ಹೋದರೂ ಪರವಾಗಿಲ್ಲ. ಅದಿರಬೇಕು ಅಥವಾ ನಾನಿರಬೇಕು. ನೋಡಿಯೇ ಬಿಡ್ತೇನೆ.” ಎಂದು ಮೇಷ್ಟ್ರು ಗಂಭೀರವಾಗಿ ಮಾತಾಡ್ತಾ ಅಭಯ ನೀಡಿದರು. ಆ ಮಾತು ಕೇಳಿದ ಜನರು ಸಮಾಧಾನದ ನಿಟ್ಟುಸಿರುಬಿಟ್ಟರು. ಆಗ ಮನೆಯೊಳಗೆ ಹೋದ ಮೇಷ್ಟ್ರು ಮಲಗುವ ಮನೆಯ ಕಟ್ಟಿಗೆಯ ಅಲಮಾರು ತೆರೆದರು. ಅದರಲ್ಲಿ ಎಂದೋ ಮಡಿಸಿಟ್ಟ ಖಾಕಿ ಅಂಗಿ, ಪ್ಯಾಂಟ್ ತೆಗೆದು ತೊಟ್ಟುಕೊಂಡರು. ತುಪಾಕಿಯನ್ನು ಸ್ವಚ್ಛ ಮಾಡಿದರು. ಟಾರ್ಚ್ ಲೈಟಿಗೆ ಹಾಕುವ ಸೆಲ್ಲಿನಂತಹ ಕಾಡತೂಸುಗಳನ್ನು ತುಪಾಕಿಯ ನಳಿಗೆಗೆ ಹಾಕಿ ತುಂಬಿದರು. ಮಾರಮ್ಮ ರೇವಿನ ಕಡೆ ಹೊರಟರು. ಆತನೊಂದಿಗೆ ತುಂಬ ಜನ ರೇವಿನ ಗಡಿಯವರೆಗೆ ಹೋದರು. ಮೇಷ್ಟ್ರನ್ನು ಒಳಗೆ ಕಳಿಸಿ ಎಲ್ಲರೂ ವಾಪಸಾದರು. ಆಗಿನ್ನೂ ಬೆಳಗಿನ ಒಂಭತ್ತರ ಸಮಯ. ಊರಿನ ಕೂಸು ಕುನ್ನಿ ಮೊದಲಾಗಿ ಎಲ್ಲರೂ ರಾಮನ ಗುಡಿಯಲ್ಲಿ ಸೇರಿ ಮೇಷ್ಟ್ರಗಾಗಿ ಭಜನೆ ಮಾಡತೊಡಗಿದರು. ಆತನು ಕ್ಷೇಮವಾಗಿ ಬರಲೆಂದು ಕೂಲಿ ಮಾಡುವ ರಾಮುಲಮ್ಮ ಆಂಜನೇಯನಿಗೆ ಎಲೆ ಪೂಜೆ ಮಾಡಿಸ್ತೀನೆಂದು ಬೇಡಿಕೊಂಡಳು. ಮೇಷ್ಟ್ರು ಕರಡಿಯ ಕೈಗೆ ಸಿಗಬಾರದೆಂದು ಯಾರ್‍ಯಾರೋ ಅವರವರ ದೇವರಿಗೆ ಮೊರೆಯಿಟ್ಟರು. ಅಸಲು ಅವರನ್ನೇಕೆ ಈ ಆಪತ್ತಿಗೆ ಈಡುಮಾಡಿದರೆಂದು ಬೋಡಿರಾಮು, ಗೆಜ್ಜಲ ಸನ್ಯಾಸಿ ಮುಂತಾದವರು ಊರಿನ ಗಣ್ಯರ ಮೇಲೆ, ಹಿರಿಯರ ಮೇಲೆ ಆಡಿಕೊಂಡರು. ಅವರನ್ನು ಸಮಾಧಾನ ಮಾಡುವುದೇ ದೊಡ್ಡವರಿಗೊಂದು ದೊಡ್ಡ ಕೆಲಸ ಆಯ್ತು. ಅಷ್ಟರಲ್ಲಿ ಮಧ್ಯಾಹ್ನವಾಯ್ತು. ಕರಡಿಯಾಗಲೀ, ಮೇಷ್ಟ್ರರಾಗಲೀ, ಚೋಡವರಂದೊಂದಿಗಾಗಲೀ, ನನಗೇನು ಸಂಬಂಧ ಎಂದು ಸೂರ್ಯನು ಪಶ್ಚಿಮ ಘಟ್ಟಗಳಲ್ಲಿ ಮರೆಯಾಗಲು ರೆಡಿ ಆಗುತ್ತಿದ್ದಾನೆ. ಇಷ್ಟರಲ್ಲಿ ಸುಮ್ಮನಿರಲಾರದೆ ಮುನ್ಸಿಫ್‌ರು ಮಾತಾಡಿದರು. “ಅಲ್ರೋ, ಇಷ್ಟು ಜನರಿದ್ದೂ ಒಬ್ಬರನ್ನೇ ರೇವಿಗೇ ಕಳಿಸಿದೆವಲ್ಲಾ. ಆ ತೋಟಗಳಲ್ಲಿ, ಆ ತೋಪುಗಳಲ್ಲಿ, ಆ ಮರಗಳ ನಡುವೆ ಮೇಷ್ಟ್ರು ಪಾಪ ಏನು ಪಡಿಪಾಟಲು ಪಡುತ್ತಿದ್ದಾರೋ, ಒಂದು ಕಡೆ ಹೊತ್ತಾಗ್ತಾ ಇದೆ. ಈಗಲೂ ನಾವು ಸುಮ್ಮನೇ ಕೂತರೆ ನಾವು ಎಂಥಾ ಗಂಡಸರಯ್ಯಾ...,” ಎಂದು ನಿಷ್ಠೂರವಾಗಿ ಮಾತಾಡಲು ಪ್ರಾರಂಭಿಸಿದರು. ಮುನಸೂಬರ ಮಾತಿಗೆ ಎಲ್ಲರೂ ಹೌದಲ್ಲೋ ಹೌದಲ್ಲೋ ಎಂದು ತಲೆ ಆಡಿಸಿದರು. ‘ನಡೆಯಿರಿ... ನಡೆಯಿರಿ’ ಎಂದು ಕೇಕೆ ಹಾಕಿದರು. ಎಲ್ಲರೂ ರೇವಿನ ಕಡೆಗೆ ಧಾವಿಸಿದರು. ರೇವಿನ ಹತ್ತಿರ ಹೋದ ಮೇಲೆ ಅಲ್ಲಿನ ಕೆಸರು ದಾರಿಯಲ್ಲಿ ಪಿತುಕು ಪಿತುಕೆಂದು ಹೆಜ್ಜೆ ಇಡುತ್ತಿದ್ದಾರೆ. ತಾಳೆಗರಿ ಕದಲಿದರೂ, ಭಯದಿಂದ ನಡುಗುತ್ತಿದ್ದಾರೆ. ಓತಿಕ್ಯಾತ ಹರಿದಾಡಿದರೂ ಕರಡಿಯೇ ಮೇಲೆ ಬಿದ್ದಂತೆ ಗಡಗಡ ನಡುಗುತ್ತಿದ್ದಾರೆ. ಸರಿಯಾಗಿ ಇವರೆಲ್ಲಾ ಅರ್ಧ ಮೈಲು ನಡೆದರೋ ಇಲ್ಲವೋ ಭೀಕರವಾಗಿ ಹೆಜ್ಜೆಯಿಡುತ್ತಾ ಧೀರ ಗಂಭೀರವಾಗಿ ಬರುತ್ತಿದ್ದ ಜಾನ್ ಮೇಷ್ಟ್ರು ಕಣ್ಣಿಗೆ ಬಿದ್ದರು. ಅವರ ಅಂಗಿ, ಪ್ಯಾಂಟ್ ಬೆವರಿನ ಮಳೆಯಲ್ಲಿ ತೋದು ತಪ್ಪಡಿ ಆಗಿದ್ದವು. ಒಂದು ಭುಜದ ಮೇಲೆ ತುಪಾಕಿ, ಮತ್ತೊಂದು ಭುಜದ ಮೇಲೆ ಕರ್‍ರನೆ ಮೂಟೆಯಂತಿರುವ ಮತ್ತೇನೋ ಇದೆ. ಊರವರನ್ನು ಕಂಡ ಕೂಡಲೇ ಅವರು “ಓಹೋ : ಬರ್‍ರಯ್ಯ ಬರ್‍ರಿ” ಎಂದು ಆನಂದದಿಂದ ಕೇಕೆ ಹಾಕಿ ಕರೆದರು. ಮಾಮೂಲಾಗಿ ಮೇಷ್ಟ್ರನ್ನು ಕಂಡಾಗ ಯಾವಾಗಲೂ ಸಂತೋಷಪಡುವ ಜನರು ಆ ದಿನ ಅವರನ್ನು ನೋಡಿ ಹುಚ್ಚೆದ್ದು ಕುಣಿಯತೊಡಗಿದರು. ಮಹಾನುಭಾವ ಕ್ಷೇಮದಿಂದ ಮರಳಿ ಬಂದರಲ್ಲಾ ಎಂದು ಆತನ ಸುತ್ತ ಮುಗಿಬಿದ್ದರು.

ಜನರೆಲ್ಲಾ ಹತ್ತಿರ ಬರಲು ಜಾನ್ ಮೇಷ್ಟ್ರ ಸಂತೋಷ ಮೇರೆ ಮೀರಿತು. ಕೂಡಲೇ ತಮ್ಮ ಭುಜದ ಮೇಲೆ ಇದ್ದ ಕಪ್ಪು ಮೂಟೆಯನ್ನು ನೋಡಿ ಜನರಿಗೆ ಮೂರ್ಛೆ ಬಂದಂತೆ ಆಯಿತು. ಅದು ಮೂಟೆಯಲ್ಲ, ಪ್ರಥಮ ತರಗತಿಯ ಕರಡಿ. ಜನರ ಕೇಕೆ, ಕುಣಿತಕ್ಕೆ ಪಾರವಿಲ್ಲದಂತಾಯಿತು. ಒಂದೇ ಹರ್ಷೋದ್ಗಾರ, ಒಂದೇ ಕುಣಿತ. ಜಾನ್ ಮೇಷ್ಟ್ರನ್ನು ಹೆಗಲ ಮೇಲೇರಿಸಿಕೊಂಡ ಜನ ಕುಣಿಯತೊಡಗಿದರು. ಸತ್ತ ಕರಡಿಯನ್ನು ಅಚ್ಚರಿಯಿಂದ, ಕುತೂಹಲದಿಂದ ನೋಡಿಯೇ ನೋಡಿದರು. “ಬಾಬು, ಆ ಊರಿಗೆ ಹಿಡಿದ ದಾರಿದ್ರ್ಯವನ್ನು ತೊಡೆದುಹಾಕಿದ್ದೀರಿ. ಕರಡಿಯನ್ನು



ಕೊಂದು ನಮ್ಮನ್ನು ನಮ್ಮ ತೋಟಗಳನ್ನು ಕಾಪಾಡಿದ್ದೀರಿ. ನಿಜವಾಗಿ ಗಂಡೆಂದರೆ ನೀವೇನಯ್ಯಾ... ನಮಗಾಗಿ ಹುಟ್ಟಿ ಬಂದೀರಿ ತಂದೆ... ನಮ್ಮಪ್ಪಾ, ಪರಮಾತ್ಮ” ಎಂದು ಕೊಂಡಾಡಿದರು. “ಇಷ್ಟಕ್ಕೂ ಈ ಅನಿಷ್ಟ ಕರಡಿ ಹೇಗೆ ಸತ್ತಿತೋ ಬಾಬು” ಎಂದು ಇರಲಾರದೇ ಕೇಳಿದರು. ಮುಂದೆ ಹಿಂದೆ ಜನರು ನಡೆದು ಬರುತ್ತಿರುವಾಗ ಈರ್ವರು ಕಾವಡಿ ಕಟ್ಟಿ ಕರಡಿಯ ಕಳೇಬರವನ್ನು ಕಟ್ಟಿಗೆಯ ಮೇಲೆ ಹೊತ್ತು ತರುತ್ತಿರುವಾಗ, ಮೇಷ್ಟ್ರು ದೊಡ್ಡ ದನಿಯಿಂದ ಹೇಳತೊಡಗಿದರು. ಬೆಳಗಿನಿಂದ ಆ ಕರಡಿ ತನಗೆ ಯಾವ ರೀತಿಯಲ್ಲಿ ತನ್ನೊಂದಿಗೆ ಕಣ್ಣುಮುಚ್ಚಾಲೆಯಾಡಿತು ಎಂಬುದನ್ನು ಹೇಳತೊಡಗಿದರು. ಕೊನೆಗೆ ಅದರ ಬೆನ್ನು ಹತ್ತಿ ಹೋದರು. ಆ ಕಳ್ಳ ಕರಡಿ ಸಂಜೆ ನಾಲ್ಕಾದರೂ ಹಳ್ಳಕ್ಕೆ ನೀರು ಕುಡಿಯಲು ಬರಲೇ ಇಲ್ಲ. ಅದು ಬಂದು ನೀರು ಕುಡಿಯಲು ಹಳ್ಳಕ್ಕೆ ಇಳಿದ ಕೂಡಲೇ ಅಲ್ಲೇ ಗುರಿಯಿಟ್ಟುಕೊಂಡು ಕಾಯುತ್ತಿದ್ದ ಮೇಷ್ಟ್ರು ತುಪಾಕಿಯನ್ನು ಗುರಿಯಿಟ್ಟು ಗುಂಡು ಹಾರಿಸಿದರಂತೆ. ಗುಂಡು ನೇರವಾಗಿ ಅದರ ಗುಂಡಿಗೆಯನ್ನು ಸೀಳಿತಂತೆ. ಆಗ ಅದನ್ನು ಮೂಟೆಯಂತೆ ಕಟ್ಟಿಕೊಂಡು ಮೇಷ್ಟ್ರು ಸಂಭ್ರಮದಿಂದ ಹೆಗಲಿಗೇರಿಸಿಕೊಂಡು ಊರ ದಾರಿ ಹಿಡಿದರಂತೆ. ಒಟ್ಟಿನಲ್ಲಿ ಕರಡಿಯನ್ನು ಸಂಹರಿಸಿದ ಮೇಷ್ಟ್ರನ್ನು ಮೆರೆಸುತ್ತಾ ಜನರು ರಾಮಮಂದಿರಕ್ಕೆ ತಂದರು. ಕೂಡಲೆ ಅಪ್ಸರಾ ಫೋಟೋ ಸ್ಟುಡಿಯೋದ ರಮಣ ಅವರನ್ನು ಕರೆತರಲು ಹೋದರು. ಈ ನಡುವೆ ಷರಾಬು ನೀಲಕಂಠಂ ನಾಲ್ಕು ಬೊಂಬು, ಕಟ್ಟಿಗೆ ತುಂಡು, ತಾಳೆ ಗರಿ ತಂದು ಹಂದರ ಹಾಕಿ ಅದರಲ್ಲಿ ಕರಡಿಯನ್ನು ಬಿದಿರಿನ ಆಸರೆಯಿಂದ ನಿಲ್ಲಿಸಿದನು. ಫೋಟೋಗ್ರಾಫರ್ ರಮಣ ಕಾಲಿಡುತ್ತಾ ನಾನಾ ಫೋಟೋ ತೆಗೆದನು. ಮೇಷ್ಟ್ರನ್ನು, ಆತನ ತುಪಾಕಿಯನ್ನು ನಾನಾ ರೀತಿಯ ಪೋಸಿನಲ್ಲಿಯೂ, ಸತ್ತ ಕರಡಿಯನ್ನು ಊರ ಹಿರಿಯರನ್ನು ಸೇರಿಸಿ ನಾನಾ ರೀತಿಯ ಫೋಟೋಗಳನ್ನು ತೆಗೆದನು. ಅನಂತರ ಎಲ್ಲಾ ಸೇರಿ ಕುಣಿ ತೆಗೆದು ಕರಡಿಯನ್ನು ಅದರಲ್ಲಿ ಹಾಕಿ ಮಣ್ಣು ಮುಚ್ಚಿದರು. ಇದೆಲ್ಲವನ್ನು ಅರಣ್ಯ ಇಲಾಖೆಯವರು ನೋಡಿಯೂ ನೋಡದಂತೆ ಸುಮ್ಮನಿದ್ದರು. ಫೋಟೋಗ್ರಾಫರ್ ರಮಣ ಮೂರು ದಿನದ ನಂತರ ಫೋಟೋಗಳನ್ನು ದೊಡ್ಡದಾಗಿ ಎನ್‌ಲಾರ್ಜ್ ಮಾಡಿ ರಟ್ಟಿನ ಮೇಲೆ ಅಂಟಿಸಿ ಮೇಷ್ಟ್ರಿಗೆ ಮತ್ತು ಊರ ಹಿರಿಯರಿಗೆ ಕೊಟ್ಟನು. ಇದೆಲ್ಲವನ್ನು ನಾವು ಹುಡುಗರು ಕಣ್ಣಾರೆ ನೋಡಿದೆವು. ಕಣ್ಣರಳಿಸಿಕೊಂಡು ನೋಡಿದೆವು. ಭಾವೋದ್ವೇಗದಿಂದ ನೋಡಿದೆವು. ಆಗ ನಾವೆಲ್ಲಾ ಹತ್ತು–ಹನ್ನೆರಡು ವರ್ಷದ ಹುಡುಗರು. ಆ ಮೇಷ್ಟ್ರಿಗೆ ಐವತ್ತಿರಬಹುದು. ಓದು ಮುಗಿದ ಮೇಲೆ ನಾವೆಲ್ಲಾ ಉದ್ಯೋಗ ನಿಮಿತ್ತ ವಿಶಾಖಪಟ್ಟಣ ಸೇರಿದರೂ ಮೇಷ್ಟ್ರನ್ನು, ಕರಡಿಯ ರಾದ್ಧಾಂತವನ್ನು ಮತ್ತೆ ಮತ್ತೆ ಮೆಲುಕುಹಾಕುತ್ತಿದ್ದೆವು. ಕಾಲಾನಂತರ ನಾನೊಮ್ಮೆ ನಮ್ಮೂರಿಗೆ ಹೋಗಲೇಬೇಕಾಯಿತು. ಬದುಕಿನಲ್ಲಿ ನಾನಾ ಕಾರಣಗಳಿಂದ

ತೀವ್ರವಾದ ಭಯದ ಪರಿಸ್ಥಿತಿ ಉಂಟಾದಾಗ, ಅದೊಂದು ಬಲಹೀನ ಸಂದರ್ಭದಲ್ಲಿ ನಮ್ಮೂರಿನ ಪೋಲಮಾಂಬೆಗೆ ನಾನಾ ರೀತಿಯಲ್ಲಿ ಹರಕೆ ಹೊತ್ತಿದ್ದೆ. ಈ ಹರಕೆಗಳು ಎಷ್ಟೋ ಕಾಲ ಹಾಗೇ ಉಳಿದವು. ಮನೆಯಲ್ಲಿ ಹೆಂಗಸರು ಜಗಳ ಮಾಡುತ್ತಿದ್ದಾರೆ. ಈ ಹರಕೆಗಳನ್ನಾದರೂ ತೀರಿಸಿದರೆ ನೆಮ್ಮದಿ ಬಂದೀತೆಂದುಕೊಂಡು ಚೋಡವರಂಗೆ ಹೋಗಿದ್ದೆ. ಬಸ್‌ಸ್ಟ್ಯಾಂಡಿನಲ್ಲಿ ಇಳಿಯುತ್ತಲೇ ಒಂದು ಗೊನೆ ಬಾಳೆಹಣ್ಣು ಖರೀದಿ ಮಾಡಿದೆ. ಅಲ್ಲಿಂದ ನೇರವಾಗಿ ಅಮ್ಮನವರ ಗುಡಿಗೆ ಹೋದೆ.

ಅಮ್ಮ ಪೋಲಮಾಂಬಗೆ ಧೂಳಿ ದರ್ಶನವೆಂದರೆ ಪರಮ ಪ್ರೀತಿ. ಆದ್ದರಿಂದ ಬಂದವನೇ ಕಾಲು ತೊಳೆಯದಂತೆ ಅಮ್ಮನ ವಿಗ್ರಹದ ಮುಂದೆ ಹಣ್ಣುಹಂಪಲು ನಿವೇದಿಸಿ ನಮಸ್ಕರಿಸಿದೆ. ಅಮ್ಮನಿಗೆಂದು ಒಯ್ದ ಸೀರೆ, ಕಾಯಿ ಇತ್ಯಾದಿ ಸಮರ್ಪಿಸಿದೆ. ನನ್ನನ್ನು, ಮನೆ ಮಂದಿಯನ್ನು, ಮಕ್ಕಳನ್ನು ರಕ್ಷಿಸಿ ಕಾಪಾಡು ತಾಯೇ ಎಂದು ಬೇಡಿಕೊಂಡೆ. ಅಮ್ಮನವರ ತಮ್ಮ ಪೋತರಾಜು ವಿಗ್ರಹಕ್ಕೆ ನಮಿಸಿ ಊದುಬತ್ತಿ ಬೆಳಗಿದೆ. ನೈವೇದ್ಯಕ್ಕೆಂದು ತಂದ ಬೆಲ್ಲದ ಅಚ್ಚುಗಳನ್ನು ನಿವೇದಿಸಿದೆ. ಸ್ವಲ್ಪ ಹೊತ್ತು ಗುಡಿಯಲ್ಲಿ ಕೂತು ಅನಂತರ ಹೊರಬಂದೆ. ತಕ್ಷಣ ನೆನಪಾದವರು ಜಾನ್ ಮೇಷ್ಟ್ರು. ಅವರನ್ನು ನೋಡಬೇಕೆಂದೆನಿಸಿತು. ಅವರಿಗೀಗ ತೊಂಬತ್ತರ ವಯಸ್ಸು. ಅವರನ್ನು ಕಾಣಲೇಬೇಕು ಎಂದುಕೊಂಡೆ. ಅವರ ಮನೆಯ ದಾರಿ ಹಿಡಿದೆ. ಗುಡಿಯಿಂದ ಅವರ ಮನೆ ದೂರವೇನಲ್ಲ. ಇನಿತರಲ್ಲಿ ಅವರ ಮನೆ ಬಂದೇಬಿಟ್ಟಿತು. ಬಗೆಬಗೆಯ ಹಸಿರು ಹಸಿರು ಬಳ್ಳಿಯಿಂದ ಆವೃತವಾದ ಪರ್ಣಶಾಲೆಯಂತಹ ಮೇಷ್ಟರ ಮನೆಗೆ ಕಾಲಿಟ್ಟೆ. ವರಾಂಡದಲ್ಲಿ ಆರಾಮ ಕುರ್ಚಿಯ ಮೇಲೆ ದೇವರಂತೆ ಕೂತಿದ್ದಾರೆ. ಅವರು ತುಂಬ ಸೊರಗಿದ್ದಾರೆ. ವೃದ್ಧಾಪ್ಯದ ದಾಳಿಯಿಂದ ಕಳಿತ ಮಾವಿನಹಣ್ಣಿನಂತಾಗಿದ್ದಾರೆ. ಅವರ ದನಿ ಮಾತ್ರ ಕಂಚಿನ ಗಂಟೆಯಂತಿದೆ. "ನಮಸ್ಕಾರ ಮೇಷ್ಟ್ರೇ," ಎಂದೊಡನೆ ಕಣ್ಣಗಲಿಸಿ ಮೇಲೆ ಕೆಳಗೆ ನೋಡಿದರು. ಗುರುತು ಹತ್ತಲಿಲ್ಲ. ಅವರಿಗೆ ಅರ್ಥ ವಾಗುವಂತೆ ಇಂಥವರ ಮಗನೆಂದು ಪರಿಚಯಿಸಿಕೊಂಡೆ. "ಅರೇ, ನೀನಾ," ಎಂದು ನನ್ನ ಕೈಹಿಡಿದು ಕುಳ್ಳಿರಿಸಿ ಅದೆಷ್ಟು ಹಿಗ್ಗಿ ಹುಗ್ಗಿಯಾದರೋ ವರ್ಣಿಸಲಾರೆ. ಬಹುಕಾಲದ ನಂತರ ಕಂಡದ್ದಕ್ಕೋ ಏನೋ ಕಂಬನಿ ತುಂಬಿ ಮಾತಾಡಿದರು. ನನಗೂ ಕಣ್ಣುಗಳು ತುಂಬಿದವು. ಹೇಗಿದ್ದ ಮೇಷ್ಟ್ರು ಹೇಗಿದ್ದಾರಲ್ಲಾ ಎನಿಸಿತು. ಉಕ್ಕಿನಂತಿದ್ದ ಸ್ನಾಯುಗಳೆಲ್ಲ ಎಲ್ಲಿಗೆ ಹೋದವು? ಸಮಯ ಬಂದರೆ ಸಾವಿಗಂಜದೆ ಹೋರಾಡುವ ಆ ಶರೀರವು ಹೀಗಾಯಿತಲ್ಲಾ? ವೃದ್ಧಾಪ್ಯವು ಮನುಷ್ಯನನ್ನು ಹಣ್ಣು ಮಾಡುತ್ತದೆ... ಎಂದು ಏನೇನೋ ಯೋಚಿಸಿದೆ. ಅಷ್ಟರಲ್ಲಿ ನಾನು ವರಾಂಡದ ಗೋಡೆಗೆ ಹಾಕಿದ್ದ ಫೋಟೋ ಕಂಡೆ. ಆ ಕಾಲದಲ್ಲಿ ಕರಡಿಯನ್ನು ಸಂಹರಿಸಿದ ನೆನಪಿಗಾಗಿ ಕರಡಿಯೊಂದಿಗೆ ಮೇಷ್ಟರು ತೆಗೆಸಿಕೊಂಡ ಫೋಟೋ ಸುಮಾರು ನಲವತ್ತು ವರುಷ ಕಳೆದಿರಬಹುದು. ಕಪ್ಪು-ಬಿಳುಪು ಫೋಟೋ ಕಾಲಯಾನದಲ್ಲಿ ಹೊಸ ಬಣ್ಣ ತಳೆದಿದೆ. ನಾನು ಆ ಫೋಟೋ ಕೆಳಗಿಳಿಸಿ ಬಟ್ಟೆಯಿಂದ ಸ್ವಚ್ಛ ಮಾಡಿದೆ. ಅಂದು ಅವರು ಮಾಡಿದ ದುಷ್ಟ ಭಲ್ಲೂಕ ಸಂಹಾರದ ಕತೆಯನ್ನು ನೆನಪು ಮಾಡಿದೆ. "ಮೇಷ್ಟರೇ, ನೀವು ತುಂಬ ಧೈರ್ಯಶಾಲಿಗಳು" ಎಂದೆ. "ಮೇಷ್ಟರೇ, ನಿಮಗೆಷ್ಟು ಸಾಹಸ ಸ್ವಭಾವವಿತ್ತಲ್ಲವೇ?" ಎಂದೆ. "ಗಂಡಸೆಂದರೆ ನೀವೇ ಸಾರ್" ಎಂದು ಪ್ರಶಂಸೆಯ ಮಳೆ ಸುರಿಸಿದೆ. ಅಂದಿನ ನನ್ನ ನೆನಪುಗಳನ್ನು ಎಳೆಎಳೆಯಾಗಿ ಅವರ ಮುಂದೆ ಬಣ್ಣಿಸಿದೆ. ಎಲ್ಲಾ ಕೇಳಿದ ಮೇಲೆ ಅವರು ಮೆಲ್ಲನೆ ಮಾತಾಡಿದರು. "ಹೋಗಲಿ ಬಿಡಯ್ಯ, ಅವೆಲ್ಲಾ ಹೋಗಲಿ ಆ ಕಾಲದಲ್ಲಿ ಅದು ಜರುಗಿಹೋಯ್ತು. ಒಂದು ಕರಡಿಯನ್ನು ಕೊಂದಾಕ್ಷಣ ನಾನು ಮಹಾಶೂರನಾಗುತ್ತೇನೆಯೇ? ಬಾಯಿಯಿಲ್ಲದ ಪ್ರಾಣಿಯನ್ನು ಕೊಲ್ಲೋದು ದೊಡ್ಡ ಸಾಹಸವೇನಯ್ಯ?" ಎಂದರು ಸಪ್ಪೆಯಾಗಿ. ಅವರು ತೇಲಿಸಿ ಮಾತಾಡುತ್ತಿದ್ದಾರೆಂದು ಅನಿಸಿದರೂ ಅವರ ಮಾತಿನ ಹಿಂದೆ ಏನೋ ಹೇಳಲಾರದ ನೋವು ತುಂಬಿಕೊಂಡದ್ದು ಅರಿವಾಯಿತು. ಈ ಮಾತಾಡುವಾಗ ಆತನ ಕಣ್ಣಲ್ಲಿ ದುಃಖ ತುಂಬಿದಂತಿತ್ತು. ಅವರೇ ಮಾತು ಮುಂದುವರಿಸುತ್ತಾ, "ನಮ್ಮೂರಿಗೆ ಆಗ ಒಂದೇ ಕರಡಿ ವಕ್ಕರಿಸಿತ್ತು. ಅದನ್ನು ಸಂಹರಿಸಿದ ಕೂಡಲೇ ಅದರ ಪೀಡೆ ತೊಲಗಿತು. ಈಗ ಅದನ್ನು ಮೀರಿಸಿದ ಕ್ರೂರ ಜಂತುಗಳು ಊರಿಗೆ ಬಂದಿವೆ. ಅವುಗಳ ಬಗ್ಗೆ ನಾನೇನು ಮಾಡಬಲ್ಲೆನಯ್ಯಾ. ನಮ್ಮೂರಿನ ರೈತರ ಭೂಮಿಗಳನ್ನು ಬಲವಂತವಾಗಿ ಆಕ್ರಮಿಸಿಕೊಂಡು ಔಷಧಗಳ ಕಾರ್ಖಾನೆ ಸ್ಥಾಪಿಸಿದ ಉಪ್ಪಲ ನಾರಾಯಣ ದೊರೆಯನ್ನು ನಾನೇನು ಮಾಡಬಲ್ಲೆ! ನಮ್ಮೂರಿನ ಜನ ಬೇಡ ಬೇಡ ಎಂದು ಬೇಡುತ್ತಿದ್ದರೂ ನ್ಯೂಕ್ಲಿಯರ್ ಪ್ಲ್ಯಾಂಟ್ ಸ್ಥಾಪಿಸಿದ ಮಾರ್ವಾಡಿ ಉಭಯ ಲಾಲ್‌ನ ಕೂದಲು ತುಂಡು ಮಾಡಲು ನಮಗೆ ಸಾಧ್ಯವೇ? ಮುಷ್ಕರ ನಿರತ ಕಾರ್ಮಿಕರನ್ನು ಗುಬ್ಬಿಗಳಂತೆ ಕೊಲ್ಲಿಸಿದ ಮಾಕ ಪನಕಾಲರಾಯನನ್ನು ನಾನೇನು ಮಾಡಲು ಸಾಧ್ಯ? ಹೇಳಯ್ಯ, ಹೇಳು, ಹೇಳು" ಎಂದು ಆವೇಶದಿಂದಲೂ, ಕೋಪದಿಂದಲೂ ನನ್ನನ್ನು ಅಲ್ಲಾಡಿಸಿ ಕೇಳಿದರು. ಆ ಸಮಯದಲ್ಲಿ ಆತ ಮಾತಾಡುತ್ತಿದ್ದರೆ ಸಿಂಹಾಚಲದ ಉಗ್ರ ನರಸಿಂಹನಂತೆ, ಅನಕಾಪಲ್ಲೆಯ ನೂಕಾಲಮ್ಮನಂತೆ, ಗಂಧವರ ಮರಡಿಮಾಂಬಳಂತೆ ಭಯಂಕರವಾಗಿ ಕಂಡರು. ಈ ಪ್ರಹಾರಕ್ಕೆ ನನ್ನ ಹೃದಯವೇ ಬಾಯಿಗೆ ಬಂದಂತಾಯಿತು. ತೊಂಬತ್ತು ವರುಷದ ಮುಪ್ಪಾದ ಮುದುಕನಾದರೂ ಜನಕಂಟಕರ ಮೇಲೆ ಬೆಂಕಿಯ ಮಳೆ ಸುರಿಸುತ್ತಾ ಮೇಷ್ಟ್ರು ಅಬ್ಬರಿಸುತ್ತಿದ್ದರೆ ನನಗಂತೂ ಎದೆ ಡಬಡಬ ಅನ್ನತೊಡಗಿತು. ಅವರ ಎದೆಯೊಳಗೆ ಎಂತಹ ದಾವಾಗ್ನಿ ಅಡಗಿದೆಯೆಂದು ತಿಳಿಯಿತು. ಏನೋ ಹೇಳಹೋದೆ. ಅವರು ಕರಡಿಯೊಂದಿಗೆ ತೆಗೆಸಿಕೊಂಡ ಫೋಟೋವನ್ನು ಥಟಕ್ಕನೆ ನನ್ನಿಂದ ತೆಗೆದುಕೊಂಡರು. ಅದನ್ನು ತುಂಡು ತುಂಡು ಮಾಡಿದರು. ಆ ತುಂಡು ಚೂರುಗಳನ್ನೆಲ್ಲಾ ಬೀದಿ ಗೆಸೆದು ಬಂದು ಮೌನವಾಗಿ ತಮ್ಮ ಖುರ್ಚಿಯಲ್ಲಿ ಕೂತರು. ಆ ವಯಸ್ಸಿನಲ್ಲಿ ಮೇಷ್ಟರು ಆ ರೀತಿ ಅಬ್ಬರಿಸಿದ್ದನ್ನು ಕಂಡು ನನಗೆ ಭಯವಾಯಿತು. ಆಗ ಅವರನ್ನು ಮತ್ತಷ್ಟು ಕೆಣಕಬಾರದೆಂದು ನಿರ್ಧರಿಸಿದೆ. ನಮಸ್ಕಾರ ಮಾಡಿ ಮೆಲ್ಲಗೆ ಮನೆಯಿಂದ ಹೊರಗೆ ಜಾರಿದೆ. ರೋಡಿಗೆ ಬಂದು ಗಾಬರಿಯಿಂದ ನಡೆಯುತ್ತಿದ್ದೇನೆ. ಇನ್ನು ನಾಲ್ಕು ಅಡಿ ಇಟ್ಟಿರಲಿಲ್ಲ. ಮೇಷ್ಟರು ಹರಿದು ಬಿಸಾಡಿದ ತುಂಡುಗಳು ಕಂಡವು. ಗಾಳಿಗೆ ರಪರಪ ಬಡಿಯುತ್ತಾ ನನ್ನ ಪಾದದ ಮುಂದೆ ಬಿದ್ದವು. "ಬಾಬು, ನಿಮ್ಮ ಜಾನ್ ಮೇಷ್ಟ್ರು ಆಡಿದ ಮಾತುಗಳಲ್ಲಿ ತಪ್ಪೇನಾದರೂ ಉಂಟಾ? ಅಕಸ್ಮಾತ್ ಏನಾದರೂ ಇದ್ದರೆ, ಆ ತಪ್ಪೇನು ತಿಳಿಸು. ತಡಮಾಡಬೇಡ" ಎಂದು ಅವೆಲ್ಲಾ ನನ್ನನ್ನು ಅಡ್ಡಗಟ್ಟಿ ಕೇಳಿದಂತೆ ನನಗನಿಸಿತು. ಇದ್ದಕ್ಕಿದ್ದಂತೆ ನಾನು ತತ್ತರಿಸಿಹೋದೆ.


ತೆಲುಗು ಮೂಲ : **ಡಾ॥ ಚಿಂತಕಿಂದಿ ಶ್ರೀನಿವಾಸರಾವ್**

ಕನ್ನಡಕ್ಕೆ : **ಡಾ॥ ಗುರುಮೂರ್ತಿ ಪೆಂಡಕೂರು**

ಬಿ-೨೦೧, ರಾಮಣ್ಣಾಸ್ ಮಿಡ್‌ಟೌನ್ ರಿಥಿಮ್ ಅಪಾರ್ಟ್‌ಮೆಂಟ್ಸ್, ಸ್ಕೈಲಾರ್ಕ್ ಗ್ರೀನ್ಸ್ ಎದುರು, ರಾಮಗೊಂಡನಹಳ್ಳಿ, ಬೆಂಗಳೂರು - ೫೬೦ ೦೬೬


## ಪ್ರೊ॥ ಶಿವರಾಮು ಕಾಡನಕುಪ್ಪೆ

ಖ್ಯಾತ ವಿಚಾರವಾದಿ ಪ್ರೊಫೆಸರ್ ಶಿವರಾಮು ಕಾಡನಕುಪ್ಪೆ ಅವರು ಇತ್ತೀಚೆಗೆ ಮೈಸೂರಿನಲ್ಲಿ ನಿಧನರಾದರು. 'ಹೊಸತು' ಲೇಖಕರ ಬಳಗದಲ್ಲಿದ್ದ ಅವರು ಕನ್ನಡ ಪ್ರಾಧ್ಯಾಪಕರಾಗಿ ೩೩ ವರ್ಷ ಶಿಕ್ಷಣ ಕ್ಷೇತ್ರದಲ್ಲಿ ದುಡಿದವರು. ಕನ್ನಡ ಸಾಹಿತ್ಯ ವಿಮರ್ಶೆಯ ಪ್ರಮುಖ ಲೇಖಕರಾದ ಇವರು ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಅದಕ್ಕೊಂದು ತಾತ್ವಿಕ ನೆಲೆ ಒದಗಿಸಲು ಪ್ರಮುಖ ಪಾತ್ರ ವಹಿಸಿದ್ದರು. ಸಮಾಜವಾದಿ ಚಿಂತನೆಗಳಿಂದ ಪ್ರಭಾವಿತರಾಗಿದ್ದ ಅವರು ಕೇವಲ ಲೇಖಕರಾಗದೆ ಸಮಾಜವಾದಿ ಯುವಜನ ಸಭಾ, ಜಾತಿ ವಿನಾಶ ಹೋರಾಟ, ಕರ್ನಾಟಕ ವಿಚಾರವಾದಿ ಒಕ್ಕೂಟ ಮುಂತಾದ ಸಂಘಟನೆಗಳಲ್ಲಿ ೭೦-೮೦ರ ದಶಕದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದರು. ಲಕ್ಷದಲ್ಲಿ ಒಬ್ಬರಿಗೆ ಬರದಂತಹ ವಿಚಿತ್ರ ಮತ್ತು ಕ್ರೂರ ಕಾಯಿಲೆಯ ನಡುವೆಯೂ ಕ್ರಿಯಾಶೀಲರಾಗಿ ಉಳಿದ ಅನನ್ಯ ವ್ಯಕ್ತಿತ್ವ ಅವರದು. ಉತ್ತಮ ಸಾಹಿತಿ, ಅಧ್ಯಾಪಕ, ವಾಗ್ಮಿ ಮತ್ತು ಕಾಲೇಜು ಪ್ರಾಚಾರ್ಯರಾಗಿದ್ದ ಶ್ರೀಯುತರು ಅಪಾರ ಮಿತ್ರವೃಂದ ಹಾಗೂ ಸಾವಿರಾರು ವಿದ್ಯಾರ್ಥಿಗಳು ಅವರೊಡನೆ ನಿಕಟಬಾಂಧವ್ಯ ಇಟ್ಟುಕೊಂಡಿದ್ದರು. ಆರಂಭದಿಂದಲೂ 'ಹೊಸತು' ಪತ್ರಿಕೆಯ ಬೆಂಬಲಿಗರಾಗಿದ್ದು ಅಪರೂಪಕ್ಕೆ ಪತ್ರಿಕೆಗೆ ಲೇಖನಗಳನ್ನೂ ಬರೆಯುತ್ತಿದ್ದ ಪ್ರೊ॥ ಶಿವರಾಮು ಅವರಿಗೆ 'ಹೊಸತು' ಕಂಬನಿ ಮಿಡಿಯುತ್ತಾ ಗೌರವವನ್ನು ಸೂಚಿಸುತ್ತದೆ.

– ಸಂ.

ಪ್ರೊ॥ ಆರ್. ಎಸ್. ನಾಯಕ, ಭಟ್ಕಳ



# ಬರೆದು ಬೆಳಕಾದ ಅರ್ಥಶಾಸ್ತ್ರಜ್ಞ

# ಜಾನ್ ರಸ್ಕಿನ್

ಕೃತಿ ರಚನೆಯ ಜೊತೆಯಲ್ಲಿ ಜನರ ಹೃದಯ ಸಂಪತ್ತನ್ನು ಸಮೃದ್ಧಿಗೊಳಿಸುವತ್ತ ದೃಷ್ಟಿ ನೆಟ್ಟಿದ್ದ ಈತ ಯೋಗ್ಯ ಶೈಲಿಗೆ ಪ್ರಾಮಾಣಿಕ ಹೃದಯವಿರಬೇಕು ಎಂದು ಹೇಳುತ್ತಿದ್ದ. ಬಾಳು ಬಂಗಾರವಾಗದೆ ಕೃತಿಗೆ ಬೆಲೆ ಬರದು ಎಂದು ನಂಬಿದ ಈತ 'ಚಿತ್ರವನ್ನು ರಚಿಸುವ ಮುನ್ನ, ಹಾಡುವ ಮುನ್ನ ನೀವು ಒಳ್ಳೆಯ ಮನುಷ್ಯರಾಗಬೇಕು' ಎನ್ನುತ್ತಿದ್ದ. ಹಳ್ಳಿಗಾಡಿನ ಪರಿಸರದಲ್ಲಿ ವ್ಯಕ್ತಿತ್ವವನ್ನು ರೂಪಿಸಿಕೊಂಡ ಈ ವ್ಯಕ್ತಿ ಮನೆಯಲ್ಲಿ ಕುಳಿತೇ ಮಾನವತಾವಾದದ ಮಹತ್ವವನ್ನು ಮನಗಂಡ. ಸಮಾಜ ಸುಧಾರಕನಾಗಲು ಹಾಗೂ ಕಲಾವಿಮರ್ಶಕನಾಗಲು ಅಗತ್ಯವಾದ ಅರ್ಹತೆ ಪಡೆದುಕೊಂಡ. ಶಾಲೆಗೆ ಹೋಗದೆಯೇ ಸೌಂದರ್ಯಶಾಸ್ತ್ರದಲ್ಲಿ ಪರಿಣತಿಯನ್ನು ಸಾಧಿಸಿದ. ತಾಯಿಯ ಸಹಾಯದಿಂದ ಬೈಬಲ್‌ಅನ್ನು ಓದಲಾರಂಭಿಸಿದ ಈತನಿಗೆ ತಂದೆಯಿಂದ ಕಾವ್ಯ ಮತ್ತು ಚಿತ್ರಕಲೆಯ ಪರಿಚಯವಾಯಿತು. ಇವುಗಳ ಪರೋಕ್ಷ ಪ್ರಭಾವದಿಂದಲೇ ಈತ ಮುಂದೆ ಆಕ್ಸ್‌ಫರ್ಡ್‌ನ ಪದವೀಧರನಾಗಲು, ನಂತರ ಅದೇ ವಿಶ್ವವಿದ್ಯಾಲಯದ ಪ್ರಾಧ್ಯಾಪಕನಾಗಲು ಸಾಧ್ಯವಾಯಿತು. ಪ್ರಭಾವಿ ಉಪನ್ಯಾಸಕನಾದ ಈತನ ವಿಚಾರಗಳನ್ನು ಕೇಳಲು ಜನ ಮುಗಿಬೀಳುತ್ತಿದ್ದರು. ವಿಶ್ವದ ಶ್ರೇಷ್ಠ ಚಿಂತಕರ ಸಾಲಿಗೆ ಸೇರುವ ಈತನ ಕೃತಿಗಳಿಗೆ ಗ್ರೇಟ್‌ಬ್ರಿಟನ್ ಮತ್ತು ಅಮೆರಿಕಾಗಳಲ್ಲಿ ಅಪಾರವಾದ ಬೇಡಿಕೆ ಇತ್ತು. ಈತ ೧೮೧೯ರ ಫೆಬ್ರವರಿ ೮ರಂದು ಹುಟ್ಟಿ, ೧೯೦೦ರ ಜನವರಿ ೨೦ರಂದು ತೀರಿಕೊಂಡ.

ಈತ ಬರೆದ 'ಅನ್‌ಟು ದಿಸ್ ಲಾಸ್ಟ್' ಕೃತಿಯನ್ನು ಓದಿ ನಮ್ಮ ರಾಷ್ಟ್ರಪಿತ ಪ್ರಭಾವಿತರಾದರೆಂದರೆ ನೀವು ಈ ವ್ಯಕ್ತಿ ಜಾನ್ ರಸ್ಕಿನ್ ಎಂದು ಸರಿಯಾಗಿಯೇ ಊಹಿಸಿರುತ್ತೀರಿ. ಹೌದು, ಇಂದಿಗೆ ಸುಮಾರು ೨೦೦ ವರ್ಷಗಳ ಹಿಂದೆ ಲಂಡನ್‌ನ ಹಳ್ಳಿಯೊಂದರಲ್ಲಿ ಹುಟ್ಟಿ, ೮೦ ವರ್ಷಗಳ ಕಾಲ ಬದುಕಿದ ಈ ವ್ಯಕ್ತಿಯನ್ನು ಜಗತ್ತು ಮರೆಯಲು ಸಾಧ್ಯವಿಲ್ಲ. ಯುರೋಪಿನ ಕಲಾ ಇತಿಹಾಸ ಬರೆಯುವ ಯಾವುದೇ ವ್ಯಕ್ತಿ ಜಾನ್ ರಸ್ಕಿನ್‌ನನ್ನು ಮುಟ್ಟದೆ ಮುಂದೆ ಸಾಗಲಾರ.

ಗ್ರೇಟ್ ಬ್ರಿಟನ್ನಿನ ಇತಿಹಾಸದಲ್ಲಿ ಅತ್ಯಂತ ಸಂಕೀರ್ಣ ಯುಗ ಎನ್ನಬಹುದಾದ ವಿಕ್ಟೋರಿಯನ್ ಯುಗದಲ್ಲಿ (೧೮೩೦-೧೯೦೩) ರಸ್ಕಿನ್ ಬದುಕಿದ್ದ. ಮಾನವನ ಚೈತನ್ಯ ಯಂತ್ರಗಳ ಎದುರು ದುರ್ಬಲಗೊಂಡ ಕಾಲ ಅದು. ರಸ್ಕಿನ್ ಈ ಕಾಲಧರ್ಮಕ್ಕೆ ತಿರುಗಿಬಿದ್ದ. ಈ ಯುಗದ ಉದ್ದಿಮೆ ಸಂಸ್ಕೃತಿ ಮನುಷ್ಯನನ್ನು ಯಂತ್ರದ ಮಟ್ಟಕ್ಕಿಳಿಸಿ ಅವನಿಗೆ ಸ್ವತಂತ್ರವಾಗಿ ಯೋಚಿಸಲು ಅವಕಾಶ ಕೊಡುವುದಿಲ್ಲವೆಂದು ಕಿಡಿ ಕಾರುತ್ತಿದ್ದ. ಸತ್ಯ ಮತ್ತು ಸೌಂದರ್ಯವನ್ನು ಅರಸುತ್ತಿದ್ದ ಈತ ತನ್ನ ಕೃತಿಗಳಲ್ಲಿ ಬಡವರ ಮತ್ತು ದುರ್ಬಲರ ಬಗ್ಗೆ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತಿದ್ದ.

'ಅನ್‌ಟು ದಿಸ್ ಲಾಸ್ಟ್', 'ಮುನೇರ್ ಪಲ್‌ವರಿಸ್', 'ಫಾರ್ಸ್ ಕ್ಲೇವಿಜೆರ್', 'ಸೆಸೆಮಿ ಲಿಲೀಸ್', 'ಎತಿಕ್ಸ್ ಆಫ್ ದಿ ಡಸ್ಟ್', 'ಕ್ರೌನ್ ಆಫ್ ವೈಲ್ಡ್ ಅಲಿವ್' ಇವು ರಸ್ಕಿನ್‌ನ ಪ್ರಮುಖ ಕೃತಿಗಳು. 'ಅನ್‌ಟು ದಿಸ್ ಲಾಸ್ಟ್' ಪುಟ್ಟ ಕೃತಿಯಾಗಿದ್ದರೂ ಅದು ರಸ್ಕಿನ್‌ನ ಆದರ್ಶಗಳನ್ನು ಅಚ್ಚುಕಟ್ಟಾಗಿ ನಿರೂಪಿಸುತ್ತದೆ. ೧೮೬೦ರ ಸುಮಾರಿಗೆ ಆ ಕಾಲದಲ್ಲಿದ್ದ ರಾಜಕೀಯ ಅರ್ಥಶಾಸ್ತ್ರದ ಸಿದ್ಧಾಂತಗಳನ್ನು ನಿರಾಕರಿಸಿ ಹೊಸ ವ್ಯವಸ್ಥೆಯೊಂದನ್ನು ಸ್ಥಾಪಿಸಲು ಈತ ನಿರ್ಧರಿಸಿದ್ದ. ಆ ವಿಷಯವಾಗಿ ಲೇಖನಗಳನ್ನು ಬರೆದು ಕಾರ್ನ್‌ಹಿಲ್ ಮ್ಯಾಗಜೀನ್‌ಗೆ ಕಳಿಸಿದ. ಸಂಪಾದಕರು ಜನರ ಪ್ರತಿಭಟನೆಗೆ ಹೆದರಿ ಪ್ರಕಟಣೆಯನ್ನು ನಿಲ್ಲಿಸಿದಾಗ ರಸ್ಕಿನ್ ಆ ಲೇಖನಗಳನ್ನು 'ಅನ್‌ಟು ದಿಸ್ ಲಾಸ್ಟ್' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದ.

ಸಮಾಜ ಸುಧಾರಣೆಯ ಕನಸು ಕಾಣುತ್ತಿದ್ದ ಈ ಸಾಹಿತಿ ಪ್ರಖ್ಯಾತ ರಾಜಕೀಯ ಅರ್ಥಶಾಸ್ತ್ರಜ್ಞನಾಗಿದ್ದ. ಮೊದಮೊದಲಿಗೆ ಆತನ ಬರಹಗಳಲ್ಲಿ ಆ ಕಾಲಧರ್ಮಕ್ಕೆ ತಕ್ಕಂತೆ ವಾಗ್ವೈಭವ ತುಂಬಿಕೊಂಡಿದ್ದರೂ, ಕ್ರಮೇಣ ಅದರಿಂದ ಬಿಡಿಸಿಕೊಂಡು ಓದುಗರ ಮನಸ್ಸನ್ನು ಸೆಳೆಯುವಂತಹ ನಿರಾಭರಣ ಶೈಲಿಯನ್ನು ರೂಢಿಸಿಕೊಂಡ. ತಾನು ಹೇಗೆ ಹೇಳುತ್ತೇನೆ ಎನ್ನುವುದಕ್ಕಿಂತ ಏನು ಹೇಳುತ್ತೇನೆ ಎಂಬುದು ಮುಖ್ಯವಾಗಬೇಕು ಅಂದುಕೊಂಡ. 'ಅನ್‌ಟು ದಿಸ್ ಲಾಸ್ಟ್'ದಲ್ಲಿ ತಾನು ಹೇಳಬೇಕಾದುದನ್ನು ಸರಿಯಾಗಿ ಮತ್ತು ಸರಳವಾಗಿ ಹೇಳಿದ. 'ನಾನು ರಚಿಸಿದ ಕೃತಿಗಳಲ್ಲಿ ಪುಸ್ತಕ ಎಂದು ಕರೆಯಬಹುದಾದ ಕೃತಿಯೆಂದರೆ ಇದೊಂದೇ' ಎಂದು ಆತನೇ ಹೇಳಿಕೊಂಡ.

ಮಾಲೀಕ ಮತ್ತು ಸೇವಕನಲ್ಲಿ ಚೈತನ್ಯ ಮತ್ತು ವಿವೇಚನೆ ಯಾವ ಮಟ್ಟದಲ್ಲಿದ್ದರೂ ಒಬ್ಬರನ್ನೊಬ್ಬರು ದ್ವೇಷಿಸದೆ, ಪ್ರೀತಿ, ವಿಶ್ವಾಸ ಇಟ್ಟುಕೊಂಡಿದ್ದರೆ ಅವರಿಂದ ಒಳ್ಳೆಯ ಫಲಿತಾಂಶ ದೊರೆಯುವುದೆಂದು ರಸ್ಕಿನ್ ಹೇಳಿದ. ಮಾಲೀಕನು ಸೇವಕನಿಂದ ಹೆಚ್ಚು ಕೆಲಸ ಮಾಡಿಸಲು ಮುಂದಾಗದೆ ಉಪಯುಕ್ತವಾಗುವ ಕೆಲಸ ಮಾಡಿಸಬೇಕು ಎನ್ನುತ್ತಿದ್ದ. ನ್ಯಾಯದ ಮಾರ್ಗದಲ್ಲಿ ಮತ್ತು ಹಿತಕರವಾದ ರೀತಿಯಲ್ಲಿ ಒಲವು ಪಡೆದ ಸೇವಕ ಸಾಧ್ಯವಾದಷ್ಟು ಉತ್ತಮವಾಗಿ ಸೇವೆ ಸಲ್ಲಿಸುವನೆಂದೂ ಹೇಳಿದ. ಉದಾರಿಯಾಗಿರುವ ಮಾಲೀಕನೊಂದಿಗೆ ಅಪ್ರಾಮಾಣಿಕನಾಗಿ ವ್ಯವಹರಿಸುವ ಸೇವಕ ನ್ಯಾಯಪರನಾಗಿರುವುದಿಲ್ಲ ಎಂದು ಹೇಳಲೂ ಆತ ಮರೆಯಲಿಲ್ಲ.

ತನ್ನ ಕೃತಿರಾಶಿಯಲ್ಲಿ ಎಲ್ಲವೂ ಅಳಿದುಹೋಗಿ, ಇದೊಂದೇ ಉಳಿದುಕೊಂಡರೂ ತನಗೆ ತೃಪ್ತಿ ಎಂದೂ ಹೇಳಿದ. ಇದು ರಾಜಕೀಯ ಅರ್ಥಶಾಸ್ತ್ರದ ಕೃತಿಯಾದರೂ ಸಮಾಜವಿಜ್ಞಾನಿಗಳ, ಇತಿಹಾಸಕಾರರ, ಸಾಹಿತ್ಯಾಭಿಮಾನಿಗಳ ಅಂತರಾಳವನ್ನು ತಟ್ಟುವಂತಹ ಕೃತಿ.

ನಮ್ಮ ಗಾಂಧೀಜಿ ಒಮ್ಮೆ ಜೊಹಾನ್ಸ್‌ಬರ್ಗ್‌ನಿಂದ ಡರ್ಬಾನ್‌ಗೆ ಪ್ರಯಾಣ ಮಾಡುವ ಕಾಲದಲ್ಲಿ ರಸ್ಕಿನ್‌ನ ಈ ಕೃತಿಯನ್ನು ಓದಿದರು. ಅದು ಅವರ ಮನಸ್ಸನ್ನು ಸೆರೆಹಿಡಿಯಿತಷ್ಟೇ ಅಲ್ಲ, ಅವರ ಜೀವನವನ್ನೇ ಪರಿವರ್ತಿಸಿತು. ಈ ಗದ್ಯಕೃತಿಯನ್ನು ಓದಿದ ಮೇಲೆ ಬಾಪೂಜಿಗೆ ರಸ್ಕಿನ್‌ನು ಮಾನವ ಹೃದಯದಲ್ಲಿ ಅವಿತಿಟ್ಟುಕೊಂಡಿರುವ ಒಳ್ಳೆಯ ಭಾವಗಳನ್ನು ಹೊರಸೆಳೆಯುವ ಕವಿಯಾಗಿ ಕಂಡ. ಈ ಪುಟ್ಟ ಕೃತಿಯಲ್ಲಿ ನಾಲ್ಕು ಪ್ರಮುಖ ಅಂಶಗಳಿರುವುದನ್ನು ಗಾಂಧಿ ಅರ್ಥಮಾಡಿಕೊಂಡರು. ಒಂದು, ಸರ್ವರ ಕಲ್ಯಾಣದಲ್ಲಿ ವ್ಯಕ್ತಿಯ ಕಲ್ಯಾಣ ಅಂತರ್ಗತವಾಗಿರುತ್ತದೆ. ಎರಡು, ಕ್ಷೌರಿಕನ ದುಡಿಮೆ ವಕೀಲನ ದುಡಿಮೆಯಷ್ಟೇ ಬೆಲೆಯುಳ್ಳದ್ದು. ಮೂರು, ತಮ್ಮ ದುಡಿಮೆಯಿಂದ ತಮ್ಮ ಬದುಕಿಗೆ ಅಗತ್ಯವಾಗಿರುವ ವರಮಾನವನ್ನು ಗಳಿಸುವ ಹಕ್ಕು ಎಲ್ಲರಿಗೂ ಸಮಾನವಾಗಿರುವುದು. ನಾಲ್ಕು, ಕಾರ್ಮಿಕನ ಜೀವನ ಅಂದರೆ ಜಮೀನನ್ನು ಉಳುವವನ ಮತ್ತು ಕರಕುಶಲಕರ್ಮಿಯ ಜೀವನ ಯೋಗ್ಯತೆಯಿಂದ ಬಾಳಲು ತಕ್ಕ ಜೀವನವೇ ಆಗಿದೆ. ಈ ಅಂಶಗಳನ್ನು ಗ್ರಹಿಸಿ ಪ್ರಭಾವಿತರಾದ ಬಾಪೂಜಿ ಮರುದಿನ ಮುಂಜಾವಿನಿಂದಲೇ ಈ ತತ್ವಗಳನ್ನು ಆಚರಣೆಗೆ ತರಲು ಸನ್ನದ್ಧರಾದರೆಂದರೆ ಇದರ ಪ್ರಭಾವ ಎಂತಹದ್ದೆಂದು ಊಹಿಸಬಹುದು.

ಮಾಲೀಕ ಮತ್ತು ಸೇವಕನಲ್ಲಿ ಚೈತನ್ಯ ಮತ್ತು ವಿವೇಚನೆ ಯಾವ ಮಟ್ಟದಲ್ಲಿದ್ದರೂ ಒಬ್ಬರನ್ನೊಬ್ಬರು ದ್ವೇಷಿಸದೆ, ಪ್ರೀತಿ, ವಿಶ್ವಾಸ ಇಟ್ಟುಕೊಂಡಿದ್ದರೆ ಅವರಿಂದ ಒಳ್ಳೆಯ ಫಲಿತಾಂಶ ದೊರೆಯುವುದೆಂದು ರಸ್ಕಿನ್ ಹೇಳಿದ. ಮಾಲೀಕನು ಸೇವಕನಿಂದ ಹೆಚ್ಚು ಕೆಲಸ ಮಾಡಿಸಲು ಮುಂದಾಗದೆ ಉಪಯುಕ್ತವಾಗುವ ಕೆಲಸ ಮಾಡಿಸಬೇಕು ಎನ್ನುತ್ತಿದ್ದ. ನ್ಯಾಯದ ಮಾರ್ಗದಲ್ಲಿ ಮತ್ತು ಹಿತಕರವಾದ ರೀತಿಯಲ್ಲಿ ಒಲವು ಪಡೆದ ಸೇವಕ ಸಾಧ್ಯವಾದಷ್ಟು ಉತ್ತಮವಾಗಿ ಸೇವೆ ಸಲ್ಲಿಸುವನೆಂದೂ ಹೇಳಿದ. ಉದಾರಿಯಾಗಿರುವ ಮಾಲೀಕನೊಂದಿಗೆ ಅಪ್ರಾಮಾಣಿಕನಾಗಿ ವ್ಯವಹರಿಸುವ ಸೇವಕ ನ್ಯಾಯಪರನಾಗಿರುವುದಿಲ್ಲ ಎಂದು ಹೇಳಲೂ ಆತ ಮರೆಯಲಿಲ್ಲ.

ಸಮರ್ಪಕವಾಗಿ ಮತ್ತು ಅಸಮರ್ಪಕವಾಗಿ ಕೆಲಸ ಮಾಡುವ ಕಾರ್ಮಿಕರಿಗೆ ಕೊಡುವ ಶುಲ್ಕದಲ್ಲಿ ತಾರತಮ್ಯವಿರಬಾರದು ಎಂಬುದು ರಸ್ಕಿನ್‌ನ ವಾದ. ತನ್ನ ವಾದವನ್ನು ಪುಷ್ಟೀಕರಿಸಲು ಆತ, 'ನೀವು ಒಳ್ಳೆಯ ಹಾಗೂ ಸಾಧಾರಣ ವೈದ್ಯರಿಬ್ಬರಿಗೂ, ಒಳ್ಳೆಯ ಹಾಗೂ ಅಸಮರ್ಪಕ ಶಿಕ್ಷಕರಿಬ್ಬರಿಗೂ ಸಮಾನವಾಗಿ ಶುಲ್ಕ ನೀಡುತ್ತೀರಿ. ಹಾಗೆಯೇ ಮನೆ ಕಟ್ಟುವಾಗ ಒಳ್ಳೆಯ ಮತ್ತು ಅಸಮರ್ಪಕ ಶ್ರಮಿಕರಿಬ್ಬರಿಗೂ ಸಮಾನವಾಗಿ ಶುಲ್ಕ ನೀಡಬೇಕಾಗುತ್ತದೆ' ಎನ್ನುತ್ತಿದ್ದ. ಅವನ ಈ ವಾದವನ್ನು ತೆಗೆದುಹಾಕುವಂತಿಲ್ಲ. ಯಾಕೆಂದರೆ ಸಮರ್ಪಕ ಮತ್ತು ಅಸಮರ್ಪಕ ಕೆಲಸಗಾರರಿಬ್ಬರಿಗೂ ಹಸಿವಿದೆ ಮತ್ತು ಬದುಕುವ ಹಕ್ಕಿದೆ.

ಹಾಗೆಂದು ರಸ್ಕಿನ್ನನಿಗೆ ನ್ಯಾಯಾನ್ಯಾಯ, ಉಚಿತಾನುಚಿತದ ಅರಿವಿರಲಿಲ್ಲವೆಂದಲ್ಲ. 'ಒಬ್ಬ ನ್ಯಾಯವಾದಿ ಲಂಚ ತೆಗೆದುಕೊಂಡು ತನ್ನ ತೀಕ್ಷ್ಣ ಬುದ್ಧಿ ಹಾಗೂ ಕಾನೂನು ತಿಳಿವಳಿಕೆಯನ್ನು ಉಪಯೋಗಿಸಿಕೊಂಡು ಅನ್ಯಾಯದ ತೀರ್ಮಾನಗಳನ್ನು ನ್ಯಾಯಸಮ್ಮತವೆಂದು ತೋರಿಸುತ್ತಾನೆ ಎಂಬ ಭಾವನೆ ಬಂದರೆ ಅವನ ಬುದ್ಧಿಮಟ್ಟ ಎಷ್ಟು ಮೇಲ್ಮಟ್ಟದಲ್ಲಿದ್ದರೂ ನಾವು ಅವನಿಗೆ ಗೌರವ ಕೊಡುವುದಿಲ್ಲ' ಎಂದು ಹೇಳುತ್ತಿದ್ದ. ಮತ್ತೆ ಮುಂದುವರೆದು, 'ವೈದ್ಯನಲ್ಲಿ ವೈಜ್ಞಾನಿಕ ತಿಳಿವಳಿಕೆಯಿದ್ದರೂ ನ್ಯಾಯವಾದಿಯಲ್ಲಿ ತೀಕ್ಷ್ಣ ಬುದ್ಧಿಯಿದ್ದರೂ ಒಳ್ಳೆಯತನವಿಲ್ಲದಿದ್ದರೆ ಕ್ಷಮಿಸಲಾಗದು. ಒಬ್ಬ ಪುರೋಹಿತನ ಬುದ್ಧಿಶಕ್ತಿ ಚುರುಕಾಗಿಲ್ಲದಿದ್ದರೂ ಅವನಲ್ಲಿ ನಿಸ್ವಾರ್ಥ ಗುಣವಿದೆ ಮತ್ತು ಸೇವಾ ಮನೋಭಾವವಿದೆ ಎಂದಾದರೆ ಅವನನ್ನು ಗೌರವಿಸುತ್ತೇವೆ' ಎನ್ನುತ್ತಿದ್ದ.

ಅವಕಾಶ ಸಿಕ್ಕಾಗಲೆಲ್ಲ ರಸ್ಕಿನ್ ವಿಕ್ಟೋರಿಯನ್ ಸಮಾಜದ ಅನಿಷ್ಟಗಳನ್ನು ಖಂಡಿಸುತ್ತಿದ್ದ. ದಾರಿ ತಪ್ಪಿದ ಸಮಾಜವನ್ನು ಸರಿದಾರಿಗೆ ತರಲು ಪ್ರಯತ್ನಿಸುತ್ತಿದ್ದ. ಕಲೆ, ನೀತಿ, ಶಿಕ್ಷಣ, ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಗಟ್ಟಿಯಾಗಿ ಮಾತನಾಡುತ್ತಿದ್ದ. ದೇಶವನ್ನು ಸುಧಾರಿಸಲು ಒಳ್ಳೆಯ ರಸ್ತೆಗಳನ್ನು ನಿರ್ಮಿಸಬೇಕೆಂದು ಆತ ತನ್ನ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದ. ಅವನ ವಿಚಾರಗಳ ಪ್ರಸ್ತುತತೆಗೆ ದೇಶಕಾಲಗಳ ಗಡಿ ಇರಲಿಲ್ಲ. ಅದಕ್ಕಾಗಿಯೇ ಟಾಲ್‌ಸ್ಟಾಯ್, 'ರಸ್ಕಿನ್ ನಮ್ಮ ಕಾಲಕ್ಕೆ ಮತ್ತು ಇಂಗ್ಲೆಂಡಿಗೆ ಮಾತ್ರವಲ್ಲದೆ ಎಲ್ಲ ದೇಶಗಳಿಗೂ ಎಲ್ಲ ಕಾಲಕ್ಕೂ ಸಲ್ಲುವ ಒಬ್ಬ ಅಸಾಧಾರಣ ಪುರುಷನಾಗಿದ್ದಾನೆ' ಎಂದು ಹೇಳಿದ್ದು. ಹಾಗಾಗಿದ್ದರಿಂದಲೇ ಗಾಂಧೀಜಿ ಆತನ ಗಾಢ ಪ್ರಭಾವಕ್ಕೆ ಒಳಗಾಗಿದ್ದು.

**ಪ್ರೊ॥ ಆರ್. ಎಸ್. ನಾಯಕ, ಭಟ್ಕಳ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಅಂಜುಮನ್ ಪದವಿ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರ, ಭಟ್ಕಳ, ಉತ್ತರ ಕನ್ನಡ – ೫೮೧ ೩೨೦

## ತಮ್ಮಾ ಒಮರ, ಇದು ಆಜಾದಿ ಬಂದ ದಿನ...

ಬಡಿಯಿತು, ನಡುರಾತ್ರಿ ಹನ್ನೆರೆಡು
ಬಂದೇಬಿಟ್ಟಿತು ಮತ್ತೊಂದು ಪಂದ್ರಾ ಆಗಸ್ಟು
ರಾಜಪಥದಲಿ ಗುಂಡುಗೋವಿ ಮಿಸೈಲು
ವಾಘಾ ಬಾಗಿಲ ಬಳಿ ಉದ್ರೇಕದ ಕೂಗು
ಸಮವಸ್ತ್ರ ಸಂಭ್ರಮ ಉಬ್ಬಿದೆದೆಯ ಸೆಲ್ಯೂಟು
ಹಾರುವ ತಿರಂಗ, ಹೋಶಿಯಾರ್ ಬಹುಪರಾಕು..

ತಮ್ಮಾ ಒಮರ, ಇದು ಆಜಾದಿ ಬಂದ ದಿನ..

ಮೂರು ಸುತ್ತೂ ಮೊರೆವ ಕಡಲು
ಕನ್ನಡಿಯಂತೆ ಮುಗಿಲ ಬಿಂಬಿಸುತಿರಲು
ಕರುವಾ, ಪಟನಾದ ಎಳೆಕೂಸುಗಳು,
ಮಾಲೂರು, ಹಾವೇರಿಯ ಪೋರಿಯರು
ಮಣ್ಣೊಳಗೆ ತಣ್ಣಗೆ ಮಲಗಿಬಿಟ್ಟಿದ್ದಾರೆ
ನೆಲಮುಗಿಲ ಸಂದುಗಳಲಿ
ಬೆಟ್ಟ ಬಯಲು ಬೀದಿಗಳಲಿ
ಮೊಲೆಯೋನಿಗಳ ಹಿಸಿಯಲಾಗುತ್ತಿದೆ

ಯುದ್ಧದಲ್ಲೂ ಶಾಂತಿಯಲ್ಲೂ
ನಿದ್ರೆಯಲ್ಲೂ ಎಚ್ಚರದಲ್ಲೂ
ಮಹಲುಗಳಲೂ ಮೋರಿಯಲ್ಲೂ
ಮಠಮಂದಿರಗಳಲೂ ಮಸಣದಲ್ಲೂ
ಲೆಕ್ಕವಿರದಷ್ಟು ಭಾರತಮ್ಮನ ಹೆಣ್ಣುಗಳು
ತೊಡೆ ನಡುವೆ ರಕ್ತ ಸುರಿಸಿದ್ದಾರೆ

ಭೀತಿಯರದ ನೆಲವೇ ಮಾತೃಭೂಮಿ
ಭಯವಿರದ ಬದುಕೇ ಆಜಾದಿ
ಹುಣ್ಣಿಮೆಯಂದು ಚಿಕ್ಕೆಗಳು ನೆಲಕಿಳಿದು
ಚಂದಿರನಿಗಾಗಿ ಹುಡುಕತೊಡಗಿರಲು
ನಾವು ದನಿಗೂಡಿಸುವುದಾದರೂ ಹೇಗೆ
ಅವರ ಜಯಘೋಷಗಳಿಗೆ?

ತಮ್ಮಾ ಒಮರ, ಇಂದು ಆಜಾದಿ ಬಂದ ದಿನ
ಎಷ್ಟು ಹುಡುಗಿಯರ ನೆತ್ತರ ಕುಡಿದಿದೆಯೋ ನೆಲ
ಎಲ್ಲೂ ಇಲ್ಲದಷ್ಟು ಕೆಂಪಾಗಿ ಅರಳಿದೆ ದಾಸವಾಳ

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೩೧



# ಪಾಕಿಸ್ತಾನ – ನಾಗರಿಕ ಸರಕಾರ ಬಂದರೂ ಸೇನೆಯದೆ ಮೇಲುಗೈ



ಪಾಕಿಸ್ತಾನದಲ್ಲಿ ಚುನಾವಣೆಗಳು ನಡೆದು ಕ್ರಿಕೆಟಿಗ ಇಮ್ರಾನ್ ಖಾನ್ ಪಕ್ಷ 'ತೆಹ್ರೀಕ್–ಎ–ಇನ್ಸಾಫ್' ಪಕ್ಷ ಅತ್ಯಧಿಕ ಸ್ಥಾನಗಳನ್ನು ಗಳಿಸಿ ಅಧಿಕಾರಕ್ಕೇರಿದೆ. ಇಮ್ರಾನ್ ಖಾನ್ ಪ್ರಧಾನಿಯಾಗಿ ಅಧಿಕಾರ ಸ್ವೀಕರಿಸಿದ್ದಾರೆ. ಈತ ಭಾರತದ ಮಟ್ಟಿಗೆ ಹೊಸಬನೇನಲ್ಲ. ಪಾಕಿಸ್ತಾನ ಕ್ರಿಕೆಟ್ ಟೀಮಿನ ನಾಯಕನಾಗಿ ಪರಿಚಿತ. ಈಗ ಹೊಸ ಅವತಾರದಲ್ಲಿ ಪಾಕಿಸ್ತಾನದ ಪ್ರಧಾನಿ. ಸೇನೆಯ ಕೈವಾಡ ಆಯ್ಕೆಯ ಹಿಂದೆ ಇದೆ ಎಂಬ ಆರೋಪ ಇದೆ. ಇದರಲ್ಲಿ ಅನುಮಾನವೇ ಇಲ್ಲ. ಪಾಕಿಸ್ತಾನದಲ್ಲಿ ನಾಗರಿಕ ಸರಕಾರ ಅಧಿಕಾರದಲ್ಲಿದ್ದರೂ ಸೇನೆಯದೇ ಪಾರುಪತ್ಯ. ಪ್ರಮುಖ ವಿಷಯಗಳಲ್ಲಿ, ಮುಖ್ಯವಾಗಿ ಭಾರತದೊಂದಿಗೆ ಸಂಬಂಧಗಳ ವಿಚಾರದಲ್ಲಿ ಸೇನೆಯ ನಿರ್ಧಾರವೇ ಅಂತಿಮ.

ಅಧಿಕಾರದ ಸವಿಯನ್ನುಂಡಿರುವ ಪಾಕ್ ಸೇನೆ ಅದನ್ನು ಬಿಟ್ಟುಕೊಡುವುದು ಸುಲಭವಲ್ಲ. ಎಪ್ಪತ್ತು ವರ್ಷಗಳ ಅವಧಿಯಲ್ಲಿ ಅರ್ಧಕ್ಕೂ ಹೆಚ್ಚು ಕಾಲ ಮಿಲಿಟರಿ ಸರ್ವಾಧಿಕಾರದ್ದೇ ಆಡಳಿತ. ನಾಗರಿಕ ಸರಕಾರ ಇದ್ದರೂ ಅಷ್ಟೆ, ಇಲ್ಲದಿದ್ದರೂ ಅಷ್ಟೆ, ಕಾರುಬಾರೆಲ್ಲ ಸೇನೆಯದೆ. ಪಾಕ್ ಸೇನೆ ಪ್ರಬಲವಾಗಿರುವುದರ ಜೊತೆಗೆ ನ್ಯೂಕ್ಲಿಯರ್ ಶಕ್ತ ರಾಷ್ಟ್ರ. ಅಮೆರಿಕದೊಂದಿಗೆ ಸ್ಥಾಪನೆಯಾದಾಗಿನಿಂದ ಪಾಕಿಸ್ತಾನ ಒಳ್ಳೆಯ ಸಂಬಂಧ ಇರಿಸಿಕೊಂಡಿದೆ. ಹೆಚ್ಚಿನ ಸೇನಾನಿಗಳು ಅಮೆರಿಕದಲ್ಲಿ ತರಬೇತಿ ಪಡೆದಿರುವವರೆ. ಒಂದು ಕಾಲದಲ್ಲಿ, ಅಂದರೆ ಶೀತಯುದ್ಧ ತೀವ್ರವಾಗಿದ್ದಾಗ ಅಮೆರಿಕ ಆಗ್ನೇಯ ಏಶಿಯದಲ್ಲಿ ಹೊಸೆದಿದ್ದ ಮಿಲಿಟರಿ ಕೂಟದಲ್ಲಿ ಪಾಕಿಸ್ತಾನ ಸದಸ್ಯ ರಾಷ್ಟ್ರವಾಗಿತ್ತು. ಪಾಕಿಸ್ತಾನದ ಭದ್ರತೆ, ವಿದೇಶೀ ನೀತಿ, ಮುಖ್ಯವಾಗಿ ಭಾರತದೊಂದಿಗೆ ಸಂಬಂಧ ಇವೆಲ್ಲ ಯಾವುದೇ ಸರಕಾರ ಇರಲಿ ಸೇನೆಯ ಸುಬರ್ದಿನಲ್ಲಿರುವುದು ಎನ್ನುವುದನ್ನು ಜಗತ್ತು ಅರಿತಿದೆ. ಹಾಗಾಗಿ ಪ್ರಧಾನಮಂತ್ರಿ ಯಾರೇ ಆದರೂ ಸೇನೆ ಹಾಕಿದ ಗೆರೆಯನ್ನು ಮೀರುವಂತಿಲ್ಲ. ಪಾಕಿಸ್ತಾನದ ನಡವಳಿಕೆಗಳಲ್ಲಿ ಇದನ್ನು ಸ್ಪಷ್ಟವಾಗಿ ಕಂಡಿದ್ದೇವೆ. ಇಮ್ರಾನ್ ಖಾನ್ ನೇತೃತ್ವದ ಸರಕಾರ ಅದಕ್ಕೆ ಹೊರತೇನಲ್ಲ.

ಪಾಕಿಸ್ತಾನದ ಸೇನೆಯಲ್ಲಿರುವ ಗೂಢಚರ್ಯೆ ಸಂಸ್ಥೆ ಐಎಸ್ಐ ಅತ್ಯಂತ ಪ್ರಬಲ. ಭಯೋತ್ಪಾದಕ ಕೃತ್ಯಗಳನ್ನು ಸಂಘಟಿಸುವುದರಲ್ಲಿ ಪ್ರಮುಖ ಪಾತ್ರ ಇದರದ್ದು. ಸೇನಾನಿಗಳಿಗೂ ಅದರ ನಿಯಂತ್ರಣ ಅಸಾಧ್ಯ ಎನ್ನುವಮಟ್ಟಿಗೆ ಅದು ಬೆಳೆದಿದೆ. ಭಾರತದ ವಿರುದ್ಧದ ಭಯೋತ್ಪಾದಕ ಕೃತ್ಯಗಳಲ್ಲಿ, ಕಾಶ್ಮೀರದ ಪ್ರತ್ಯೇಕವಾದಿಗಳಿಗೆ ಒತ್ತಾಸೆ ನೀಡುವುದರ ಹಿಂದೆ ಐಎಸ್ಐನ ಕೈವಾಡ ಇರುವುದಕ್ಕೆ ಬೇಕಾದಷ್ಟು ಪುರಾವೆಗಳಿವೆ. ನಾಗರಿಕ ಸರಕಾರಗಳ ಗಮನಕ್ಕೆ ಭಾರತ ಗಮನಕ್ಕೆ ತಂದರೂ ಪ್ರಯೋಜನವಾಗಿಲ್ಲ. ಇಮ್ರಾನ್ ಖಾನ್ ಅದನ್ನು ಬದಲಿಸಿಯಾರು ಎಂದು ನಿರೀಕ್ಷಿಸುವುದು ಸರಿಯಲ್ಲ. ಹೇಳಿ ಕೇಳಿ ಇಮ್ರಾನ್ ಖಾನ್ ಆಯ್ಕೆಯ ಹಿಂದೆ ಮಿಲಿಟರಿ ಇದೆ ಎನ್ನುವುದನ್ನು ಮರೆಯುವಂತಿಲ್ಲ. ಹಾಗಾಗಿ, ಪಾಕಿಸ್ತಾನದ ಪ್ರಧಾನಿಯಿಂದ ಯಾರೇ ಆದರೂ ಏನನ್ನೂ ನಿರೀಕ್ಷಿಸುವುದು ವ್ಯರ್ಥ.

ಅಧಿಕಾರದಲ್ಲಿ ಇಲ್ಲದಿದ್ದಾಗ ಇಮ್ರಾನ್ ಖಾನ್ ಹೇಳಿಕೆಗಳನ್ನು ಆಧರಿಸಿ ಭಾರತದ ನೀತಿ ನಿರೂಪಕರು ಗುಣಾತ್ಮಕ ಬದಲಾವಣೆಗಳನ್ನು ಕಾಣುವುದು ಸರಿಯಲ್ಲ. ನಾಗರಿಕ ಸರಕಾರದೊಂದಿಗೆ ವ್ಯವಹರಿಸುವಾಗ ಸೇನೆಯನ್ನು ಗಮನಕ್ಕೆ ತೆಗೆದುಕೊಳ್ಳದೆ ಯಾವ ನಿರ್ಧಾರಕ್ಕೂ ಬರಲಾಗದು. ಇಮ್ರಾನ್ ಖಾನ್ ನೇತೃತ್ವದ ಪಕ್ಷ ಬಹುಮತವನ್ನು ಹೊಂದಿಲ್ಲ. ಸ್ವತಂತ್ರರು ಹಾಗೂ ಸಣ್ಣಪುಟ್ಟ ಪಕ್ಷಗಳ ಬೆಂಬಲದಿಂದ ಆಡಳಿತ ನಡೆಸಬೇಕು. ಇವೆಲ್ಲ ಸೇನೆಯ ಪ್ರಭಾವದಲ್ಲಿ ಇವೆ. ಅದರಿಂದ ಪ್ರಧಾನಿ ಇಮ್ರಾನ್ ಖಾನ್ ಸೇನೆಯ ಆಣತಿಯನ್ನು ಮೀರುವಂತಿಲ್ಲ. ಹಿಂದೆ ಇದ್ದ ಷರೀಫ್ ಸರಕಾರ ಪಾಕಿಸ್ತಾನದ ಭದ್ರತೆಯ ವಿಷಯದಲ್ಲಿ ಸೇನೆಯ ಅಪೇಕ್ಷೆಯನ್ನು ಮೀರಿದಾಗ, ಭಾರತದೊಂದಿಗೆ ಮೃದು ಧೋರಣೆ ತಳೆಯಲು ಪ್ರಯತ್ನಿಸಿದಾಗ ಏನಾಯಿತು ಎನ್ನುವುದನ್ನು ಭಾರತ ಸರಕಾರ ಗಮನದಲ್ಲಿಟ್ಟುಕೊಳ್ಳಬೇಕು.



ಭಾರತ–ಪಾಕ್ ಸಂಬಂಧಗಳು ಇಂದು ತೀರಾ ಕೆಳಮಟ್ಟದಲ್ಲಿವೆ. ಪಾಕಿಸ್ತಾನದಲ್ಲಿ ನಡೆಯಬೇಕಿದ್ದ 'ಸಾರ್ಕ್' ಶೃಂಗಸಭೆ ರದ್ದಾಗಿ ವರ್ಷಗಳು ಉರುಳಿವೆ. ಶೃಂಗ ಸಭೆಗೆ ಮುನ್ನ ಪಾಕ್ ಭಯೋತ್ಪಾದಕರು ಸೇನಾ ಶಿಬಿರದ ಮೇಲೆ ನಡೆಸಿದ ದಾಳಿಯೇ ಮೂಲವಾಯಿತು ಅದಕ್ಕೆ. ಇಮ್ರಾನ್ ಖಾನ್‌ಗೆ 'ಸಾರ್ಕ್' ಶೃಂಗ ನಡೆಸುವ ಇರಾದೆ ಇದ್ದರೂ ಅದು ಫಲಕಾರಿಯಾಗುವುದು ಅನುಮಾನ. ಭಾರತ – ಪಾಕ್ ಗಡಿಯಲ್ಲಿ, ಅದರಲ್ಲೂ ಪಾಕ್ ಆಕ್ರಮಿತ ಕಾಶ್ಮೀರದ ಗಡಿಯಲ್ಲಿ ಘರ್ಷಣೆಗಳು ನಿರಂತರವಾಗಿ ಮುಂದುವರಿದಿವೆ. ಕಾಶ್ಮೀರದಲ್ಲಿ ಪ್ರತ್ಯೇಕವಾದಿಗಳ ಅಬ್ಬರ ಭಾಜಪ – ಪಿಡಿಪಿ ಸರಕಾರ ಅಸ್ತಿತ್ವಕ್ಕೆ ಬಂದ ನಂತರ ಜೋರಾಗಿದ್ದುದು, ಈಗ ರಾಜ್ಯಪಾಲರ ಆಡಳಿತದಲ್ಲಿ ಇನ್ನಷ್ಟು ತೀವ್ರಗೊಂಡಿದೆ. ಭಾರತ – ಪಾಕ್ ಸಂಬಂಧಗಳಲ್ಲಿ ಕಾಶ್ಮೀರದ ಪ್ರಶ್ನೆ ಯಾವತ್ತೂ ಕಗ್ಗಂಟು. ಎರಡೂ ದೇಶಗಳ ಮಧ್ಯೆ ನಾಲ್ಕು ಸಲ ಯುದ್ಧವಾಗಿದ್ದರೂ ಯಾವ ಸಮಸ್ಯೆಯೂ ಇತ್ಯರ್ಥಗೊಂಡಿಲ್ಲ. ಪ್ರತಿಸಲ ಒಪ್ಪಂದಕ್ಕೆ ಬರುವ ಸೂಚನೆ ಕಂಡು ಬಂದಾಗಲೂ ಏನಾದರೊಂದು ಭಯೋತ್ಪಾದಕ ಕೃತ್ಯ ಜರುಗಿ ಸಂಬಂಧಗಳು ಹಳಸಿ ಕೊಂಡಿವೆ. ಪ್ರಧಾನಿ ನರೇಂದ್ರ ಮೋದಿ ೨೦೧೪ರಲ್ಲಿ ಅಧಿಕಾರ ವಹಿಸಿಕೊಂಡಾಗ 'ಸಾರ್ಕ್' ರಾಷ್ಟ್ರಗಳ ಅಧಿಪತಿಗಳು, ಪಾಕಿಸ್ತಾನದ ಪ್ರಧಾನಿಯಾಗಿದ್ದ ನವಾಜ್ ಷರೀಫ್ ಭಾಗವಹಿಸಿದ್ದನ್ನು ಬಿಟ್ಟರೆ, ನಂತರದ ಬೆಳವಣಿಗೆಗಳೆಲ್ಲ ಭಾರತ – ಪಾಕ್ ಸಂಬಂಧಗಳನ್ನು ಅಧೋಗತಿಗೆ ತಂದಿವೆ. ಒಂದು ರೀತಿಯಲ್ಲಿ ನೋಡಿದರೆ ಮೋದಿ ಸರಕಾರ ಅಧಿಕಾರಕ್ಕೆ ಬಂದ ಮೇಲೆ ನೆರೆಯ ರಾಷ್ಟ್ರಗಳ ಜೊತೆ ಸಂಬಂಧಗಳು ಶಿಥಿಲಗೊಂಡಿವೆ.



ಇಮ್ರಾನ್ ಖಾನ್ ಅಧಿಕಾರ ಸ್ವೀಕಾರ ಸಮಾರಂಭಕ್ಕೆ 'ಸಾರ್ಕ್' ಅಧಿಪತಿಗಳನ್ನು ಆಹ್ವಾನಿಸುವ ಬಯಕೆಯನ್ನು ವ್ಯಕ್ತಮಾಡಿದ್ದರೂ ಈಗ ಅದರ ಪ್ರಸ್ತಾಪವೇ ಇಲ್ಲ. ಭಾರತದ ಕ್ರಿಕೆಟಿಗರಾದ ಕಪಿಲ್ ದೇವ್ ಮತ್ತು ನವಜೋತ್ ಸಿಂಗ್ ಸಿಧು ಅವರಿಗೆ ಮಾತ್ರ ಆಮಂತ್ರಣವಿದೆ. ಸೇನೆಯ ಕೃಪೆ ಇರುವವರೆಗೆ ಇಮ್ರಾನ್ ಖಾನ್ ಅಧಿಕಾರ ಇರುವುದು ಎನ್ನುವುದನ್ನು ಗಮನದಲ್ಲಿರಿಸಿಕೊಳ್ಳಬೇಕು. ಅಲ್ಪ ಮತೀಯ ಸರಕಾರ ಯಾವಾಗ ಬೇಕಾದರೂ ಪತನವಾಗಬಲ್ಲದು. ಸೇನೆಯ ವಿರೋಧ ಕಟ್ಟಿಕೊಂಡ ನವಾಜ್ ಷರೀಫ್ ಗತಿ ಏನಾಯಿತೆಂಬುದು ತಿಳಿದಿರುವ ವಿಷಯ. ಹಾಗಾಗಿ, ಭಾರತ ಸರಕಾರ ಪಾಕಿಸ್ತಾನದ ಹೊಸ ಸರಕಾರದೊಂದಿಗೆ ವ್ಯವಹರಿಸುವಾಗ ಎಚ್ಚರಿಕೆ ವಹಿಸಬೇಕು. ಸೇನೆಯನ್ನು ಗಣನೆಗೆ ತೆಗೆದುಕೊಂಡು ಮಾತುಕತೆಗೆ ಮುಂದಾಗಬೇಕು.

**ಸೀಯಾರ್ಕೆ,** 'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಗಣಪತಿ ಹಬ್ಬದ ಚಂದ್ರ

ಸೆಪ್ಟೆಂಬರ್ ೧೩ರಂದು ಗಣಪತಿ ಹಬ್ಬ; ಆ ದಿನ ಚಂದ್ರನನ್ನು ಮರೆಯದೇ ನೋಡಿ. ಇಲ್ಲದಿದ್ದಲ್ಲಿ ಅತಿ ಸುಂದರ ದೃಶ್ಯವೊಂದನ್ನು ಕಳೆದುಕೊಳ್ಳುವಿರಿ. ಅಂದು ಚಂದ್ರ, ಗುರು ಮತ್ತು ಶುಕ್ರ ಪುಟ್ಟ ತ್ರಿಕೋಣವಾಗಿ ಕಾಣಲಿವೆ. ಕ್ಯಾಮೆರಾಗೆ ೧೧ರಿಂದಲೇ ಕೆಲಸ ಕೊಡಿ. ಹಂತಹಂತವಾಗಿ ಚಂದ್ರ ಶುಕ್ರದತ್ತ ಸರಿಯುವುದನ್ನು ಸೆರೆ ಹಿಡಿಯಿರಿ.

ಈ ತಿಂಗಳಲ್ಲಿ ಆಕಾಶ ಶುಭ್ರ ವಾಗಿರುವ ಸಾಧ್ಯತೆ ಕಡಿಮೆ. ಆದರೂ ಚಂದ್ರ ಮತ್ತು ಶುಕ್ರ – ಇವುಗಳನ್ನು ತೆಳ್ಳನೆಯ ಮೋಡದ ಮಧ್ಯೆಯೂ ಪತ್ತೆ ಮಾಡಬಹುದು. ಸಂಜೆ ಪಶ್ಚಿಮದಲ್ಲಿ ಶುಕ್ರ ಮತ್ತು ಶುಕ್ರದ ಪ್ರತಿಸ್ಪರ್ಧಿ ಎಂಬಂತೆ ಕಾಣುವ ಗುರು ಗ್ರಹ ಇವುಗಳನ್ನು ನೋಡ ಬಹುದು. ಪೂರ್ವದಲ್ಲಿ ಮಂಗಳ, ಅದರ ಮೇಲೆ ಶನಿ ಇವುಗಳನ್ನೂ ಕಾಣಬಹುದು. ಹೀಗೆ ನಾಲ್ಕೂ ಗ್ರಹಗಳನ್ನು ಸಂಜೆಯೇ ಕಾಣಬಹುದು. ಇನ್ನೊಂದು ಗ್ರಹ ಬುಧ ಬೆಳಗಿನ ಜಾವ ಕಾಣುತ್ತದೆ. ಕಳೆದ ತಿಂಗಳ ಕೊನೆಯಲ್ಲಿ ಗರಿಷ್ಠ ಕೋನೋನ್ನತಿ ಇತ್ತು. ಈಗ ಅದು ಕ್ರಮೇಣ ಕೆಳಗಿಳಿಯುತ್ತಿದೆ. ೬ ರಂದು ಮಘ ನಕ್ಷತ್ರದ ಸಮೀಪ ಕಾಣಲಿದೆ. ೨೧ ರಂದು ಸೂರ್ಯನ ಆಚೆ ಬದಿಯಿಂದ ಹಾದುಹೋಗುತ್ತದೆ. ಶನಿಗ್ರಹದ ಹಿನ್ನಡೆ ೬ರಂದು ಮುಕ್ತಾಯ ವಾಗುತ್ತದೆ, ಆ ಮುಂದೆ ಅದು ಮಕರ ರಾಶಿಯತ್ತ ಹೊರಡುತ್ತದೆ.




೨೩ರಂದು ಶರದ್ ವಿಷುವ. ಹಗಲು ರಾತ್ರಿಗಳ ಅವಧಿ ಸಮ. ಮುಂದೆ ಹಗಲಿನ ಅವಧಿ ಕಡಿಮೆಯಾಗುತ್ತಾ ಹೋಗುತ್ತದೆ. ಶರದ್ ಪೂರ್ಣಿಮೆ ೨೫ರಂದು. ಆ ದಿನ ಚಂದ್ರನ ಸಮೀಪ ಇರುವ ನಕ್ಷತ್ರವೇ ಭಾದ್ರಪದ.

ಸಂಜೆಯ ಆಕಾಶದಲ್ಲಿ ವೃಶ್ಚಿಕ, ಧನು ಈ ರಾಶಿಗಳ ಮೂಲಕ ಕಾಣುವ ಸುಂದರ ಆಕಾಶಗಂಗೆಯನ್ನು ನೋಡಲು ಮೋಡಗಳು ಅವಕಾಶ ಕೊಡಬೇಕಷ್ಟೆ. ಇದರ ಒಂದು ಭಾಗ ರಾಜಹಂಸ (ಸಿಗ್ನಸ್), ಗರುಡ (ಅಕ್ವಿಲಾ) ಮತ್ತು ವೀಣಾ (ಲೈರಾ) ಪುಂಜಗಳ ಮೂಲಕ ಸಾಗುತ್ತದೆ. ಆಕಾಶದ ಉಳಿದ ಭಾಗಗಳಲ್ಲಿ ಉದಾಹರಣೆಗೆ ನೆತ್ತಿಯ ಮೇಲಿನ ಭೀಮ (ಹರ್‌ಕ್ಯುಲೆಸ್), ಪೂರ್ವ ದಲ್ಲಿ ಕುಂಭ, ಪಶ್ಚಿಮದಲ್ಲಿ ಕನ್ಯಾ – ಹೀಗೆ ನಕ್ಷತ್ರಗಳು ಸಾಕಷ್ಟಿಲ್ಲ ಎಂಬುದು ಬರಿಗಣ್ಣಿಗೇ ತಿಳಿಯುತ್ತದೆ.

೩ರಂದು ಚಂದ್ರ ರೋಹಿಣಿ ನಕ್ಷತ್ರವನ್ನು ಮರೆ ಮಾಡುವ ಆಚ್ಛಾದನೆ ಎಂಬ ಘಟನೆ ನಡೆಯಲಿದೆ. ಬೆಳಗಿನ ಜಾವ ಇದರ ಆರಂಭವನ್ನು ನೋಡಬಹುದು. ಆದರೆ ಚಂದ್ರನ ಹಿಂದಿನಿಂದ ಇದು ಹೊರಬರುವಾಗ ಸೂರ್ಯೋದಯವಾಗಿರುತ್ತದೆ.


೧೩ರಂದು ಸಂಜೆ ಪಶ್ಚಿಮದಲ್ಲಿ ಚಂದ್ರ, ಶುಕ್ರ ಮತ್ತು ಗುರು

### ಖಗೋಳ ದಿನಚರಿ

೧ ಚಿತ್ರಾ ನಕ್ಷತ್ರ ಮತ್ತು ಶುಕ್ರ ಒಟ್ಟಾಗಿ ಕಾಣುತ್ತವೆ.*
೩ ರೋಹಿಣಿ ನಕ್ಷತ್ರದ ಆಚ್ಛಾದನೆ (ಮುಂಜಾವು): ಚಾಂದ್ರಮಾಸದ ಕೊನೆಯ ಪಾದ
೬ ಬುಧ – ಮಘ ನಕ್ಷತ್ರ ಜೋಡಿ; ಶನಿಗ್ರಹದ ಹಿನ್ನಡೆ ಮುಕ್ತಾಯ*
೮ ಭೂಮಿ ನಡುವೆ ಕನಿಷ್ಠ ದೂರ ; ಚಂದ್ರ – ಮಘ ನಕ್ಷತ್ರ ಜೋಡಿ
೯ ಅಮಾವಾಸ್ಯೆ ೨೩:೦೦ಕ್ಕೆ; ಬುಧದ ಆಚ್ಛಾದನೆ (ಕಾಣುವುದಿಲ್ಲ)
೧೪ ಚಂದ್ರ – ಗುರು ನಡುವೆ ಕನಿಷ್ಠ ಕೋನ *
೧೬ ಚಾಂದ್ರ ಮಾಸದ ಮೊದಲ ಪಾದ; ಶನಿ – ಚಂದ್ರ ಜೋಡಿ*
೨೦ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೨೩ ಶರದ್ ವಿಷುವ
೨೫ ಹುಣ್ಣಿಮೆ ೦೬:೩೦ಕ್ಕೆ
೩೦ ಚಂದ್ರ – ರೋಹಿಣಿ ಜೋಡಿ*
(*ಛಾಯಾಗ್ರಹಣಕ್ಕೆ ಸದವಕಾಶ)


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ಮೇರಿ ಎಲಿಜಾ ಮಹೋನಿ

## (ನರ್ಸ್ ಮತ್ತು ಪ್ರಗತಿಪರ ಹೋರಾಟಗಾರ್ತಿ ೧೮೪೫-೧೯೨೬)



**ಜ**ಗತ್ತಿನೆಲ್ಲೆಡೆ ವ್ಯಾಪಿಸಿರುವ ತಾರತಮ್ಯ ಭಿನ್ನ ಪ್ರದೇಶಗಳಲ್ಲಿ ಭಿನ್ನ ಸ್ವರೂಪ ಪಡೆದಿದ್ದು ಬದಲಾದ ಸ್ಥಿತಿಯಲ್ಲಿ ಬದಲಾದ ರೂಪದಲ್ಲಿರುವಂತೆ ಕಂಡು ಬರುತ್ತದೆ. ಭಾರತದಲ್ಲಿ ಅದು ಪ್ರಮುಖವಾಗಿ 'ಜಾತಿ' ಶ್ರೇಣೀಕರಣ ವ್ಯವಸ್ಥೆಯ ರೂಪದಲ್ಲಿ ನೆಲೆಗೊಂಡಿದ್ದರೆ ಜಗತ್ತಿನ ಬಲಿಷ್ಠ ರಾಷ್ಟ್ರವಾದ ಅಮೆರಿಕಾದಲ್ಲಿ 'ವರ್ಣ'ಭೇದ ನೀತಿಯ ನೆಲೆಯಲ್ಲಿ ತಾರಕಕ್ಕೇರಿದ್ದನ್ನು ಕಾಣಬಹುದು. ಜಗತ್ತಿನ ಕ್ರಾಂತಿಕಾರಿಗಳು, ಹೋರಾಟಗಾರರು, ಸುಧಾರಣಾವಾದಿಗಳು, ಚಿಂತಕರು ನಾಗರಿಕ ಸಮಾಜದಲ್ಲಿ ಬೇರುಬಿಟ್ಟಿರುವ ವಿವಿಧ ಬಗೆಯ ಅಮಾನವೀಯ ಭೇದಭಾವಗಳನ್ನು ನಿರ್ಮೂಲನೆ ಮಾಡಲು ತಮ್ಮ ಜೀವಿತ ಕಾಲಘಟ್ಟಗಳಲ್ಲಿ ಪ್ರಯತ್ನಿಸಿದ್ದಾರೆ. ಅವರು ಸ್ವಂತ ಸಾಮರ್ಥ್ಯ ಮತ್ತು ಹೋರಾಟದ ಮನೋಭಾವದಿಂದ ಎಂತಹುದೇ ಉಸಿರುಗಟ್ಟಿಸುವ ವಾತಾವರಣವನ್ನೂ ತಿಳಿಗೊಳಿಸಿ ತಾವೊಂದು ಇತಿಹಾಸದ ಹೊಸಪುಟವಾಗಿ ಚಿರಾಯುವಾಗಿದ್ದಾರೆ. ಅಂತಹ ವ್ಯಕ್ತಿಗಳಲ್ಲಿ ಮೇರಿ ಎಲಿಜಾ ಮಹೋನಿ ಕೂಡ ಒಬ್ಬರು ಎಂದು ಹೇಳಬಹುದು.

ಅಮೆರಿಕಾದ ವೈದ್ಯಕೀಯ ಇತಿಹಾಸದಲ್ಲಿ ಹೊಸ ಪುಟವನ್ನು ಮೇರಿ ಎಲಿಜಾ ಮಹೋನಿ ತನ್ನ ಸೇವೆ, ಕಾರ್ಯತತ್ಪರತೆ, ದಕ್ಷತೆಯಿಂದ ಬರೆದಿದ್ದಾಳೆ. ಇಂದಿಗೂ ಅಮೆರಿಕಾದ ಅತ್ಯುತ್ತಮ ಐವರು ನರ್ಸ್‌ಗಳಲ್ಲಿ ಮೇರಿ ಎಲಿಜಾ ಮಹೋನಿಯ ಹೆಸರು ಸೇರಿದೆ. ಒಬ್ಬ ಕಪ್ಪು ಮಹಿಳೆಯಾಗಿ ಅಂದಿನ ದಿನಗಳಲ್ಲೇ ಮೇರಿ ಮಾಡಿದ ಕೆಲಸ ಕೇವಲ ಆಕೆಯ ಅಭಿವೃದ್ಧಿಗೆ ಮಾತ್ರ ಸೀಮಿತವಾಗಲಿಲ್ಲ, ಒಂದು ದಮನಿತ ಸಮುದಾಯದ ಮಹಿಳೆಯಾಗಿ ಆ ಸಮುದಾಯದ ಅಭಿವೃದ್ಧಿಗೂ ಶ್ರಮಿಸಿದ್ದಾಳೆ. ವ್ಯಕ್ತಿ ಉನ್ನತ ಹುದ್ದೆ, ಸ್ಥಾನಕ್ಕೆ ಹೋದಂತೆ ಸ್ವಕೇಂದ್ರಿತ ಆಲೋಚನೆಗಳು ಹೆಚ್ಚಿ ಸಮುದಾಯ, ಪ್ರದೇಶದ ಬಗೆಗೆ ಯೋಚಿಸುವುದು ಕಡಿಮೆಯಾಗುತ್ತದೆ. ಆದರೆ ಮೇರಿ ಅಂತಹ ವ್ಯಕ್ತಿಗಳ ಸಾಲಿಗೆ ಸೇರದೆ ಭಿನ್ನವೆನಿಸಿದ್ದಾಳೆ. ಅಂದಿನ ದಿನಗಳಲ್ಲಿ ಅಮೆರಿಕಾದಲ್ಲಿ ಜನಾಂಗೀಯ ಭೇದ ನೀತಿ ತೀವ್ರವಾಗಿತ್ತು. ಕಪ್ಪು ಜನಾಂಗವನ್ನು ಬಿಳಿ ಜನರ ಗುಲಾಮರಂತೆ ಕಾಣುತ್ತಿದ್ದು ಶಿಕ್ಷಣದಲ್ಲಾಗಲೀ ಉದ್ಯೋಗದಲ್ಲಾಗಲೀ ಅವರಿಗೆ ಯಾವುದೇ ಬಗೆಯ ಅವಕಾಶಗಳನ್ನು ನಿರಾಕರಿಸಲಾಗಿತ್ತು. ಆಧುನಿಕ ನಾಗರಿಕ ಸಮಾಜದ ಜೀವನ ಮೌಲ್ಯಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತೆ ಕಪ್ಪು ಜನರಿಂದ ದೂರ ಉಳಿದಿದ್ದವು. ಅಂದು ಕಪ್ಪು ಜನಾಂಗವೇ ನಿಕೃಷ್ಟತೆಗೆ ಒಳಗಾಗಿದ್ದು, ಕಪ್ಪು ಮಹಿಳೆ ಮತ್ತಷ್ಟು ಹೀನಾಯ ಸ್ಥಿತಿಯಲ್ಲಿದ್ದಳು. ಅಂತಹ ಸಂದರ್ಭದಲ್ಲಿ ತನ್ನ ಕರ್ತವ್ಯ ಮತ್ತು ಸೇವಾ ಮನೋಭಾವನೆ ಮಾತ್ರದಿಂದ ತನ್ನ ಸುತ್ತ ನೆಲೆಯೂರಿದ್ದ ವರ್ಣಭೇದ ನೀತಿಯಾಚೆಗೆ ತುಡಿಯಲು ಮತ್ತು ಜನಮನ ಗೆಲ್ಲಲು ಆಕೆಗೆ ಸಾಧ್ಯವಾಗಿದ್ದು ತನ್ನ ನಿಷ್ಕಳಂಕ ಮತ್ತು ಪ್ರಾಮಾಣಿಕ ಮಾತೃಹೃದಯ ಸೇವಾಗುಣ ಮಾತ್ರ ಎಂದು ಹೇಳಬಹುದು.

ಅಮೆರಿಕಾದಲ್ಲಿ ಶುಶ್ರೂಷಕಿ ಸೇವೆಯಲ್ಲಿ ಅಳಿಸಲಾಗದ ಸಾಧನೆ ಮಾಡಿ ಹೆಸರು ಗಳಿಸಿದ ಆಕೆ ೧೮೭೯ರಲ್ಲಿ ವೃತ್ತಿಪರ ನರ್ಸ್‌ಕೋರ್ಸ್ ಪೂರ್ಣ ಗೊಳಿಸಿದ ಕಪ್ಪು ಜನಾಂಗದ ಮೊದಲ ಮಹಿಳೆಯಾಗಿ ಗುರುತಿಸಲಾಗುತ್ತದೆ. ಕಪ್ಪು ಜನರ ಶ್ರೇಯೋಭಿವೃದ್ಧಿಗಾಗಿ ತನ್ನ ಜೀವನದ ಕೊನೆಯವರೆಗೂ ಶ್ರಮಿಸಿದ ಮಹೋನಿ ಕಪ್ಪು ಜನರ ಅಭಿವೃದ್ಧಿಗಾಗಿ ಹೋರಾಡಿದ ಫಲವಾಗಿ ಅಲ್ಲಿ ಇಂದು ಕಪ್ಪು ಜನಾಂಗಕ್ಕೆ ಹಲವಾರು ಅವಕಾಶಗಳು, ಆಯ್ಕೆಗಳು, ಸೌಲಭ್ಯಗಳು ಲಭ್ಯವಾಗಿವೆ. ಆಕೆ ಮಹಿಳಾ ಹಕ್ಕುಗಳ ಹೋರಾಟಗಾರ್ತಿ ಯಾಗಿಯೂ ತನ್ನನ್ನು ಗುರುತಿಸಿಕೊಂಡಿದ್ದಾಳೆ.

ಮೇರಿ ಎಲಿಜಾ ಮಹೋನಿ ೧೮೪೫ರ ಮೇ ೫ (ಕೆಲವು ಮೂಲಗಳ ಪ್ರಕಾರ ಏಪ್ರಿಲ್ ೧೬)ರಂದು ಬೋಸ್ಟನ್‌ನ ಮ್ಯಾಸಚೂಸೆಟ್ಸ್‌ನಲ್ಲಿ ಹುಟ್ಟಿದಳು. ಆಕೆ ಮೇರಿ ಜೇನ್ ಸ್ಟುವರ್ಡ್ ಮತ್ತು ಚಾರ್ಲ್ಸ್ ದಂಪತಿಯ ಹಿರಿಯ ಮಗಳಾಗಿದ್ದಳು. ಬೋಸ್ಟನ್‌ನ ಫಿಲಿಪ್ಸ್ ಶಾಲೆಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮುಗಿಸಿದ ಆಕೆ ಈ ಶಾಲೆಯಲ್ಲಿ ಮಾನವೀಯತೆ ಮತ್ತು ನೈತಿಕತೆ ತುಂಬಿದ ಮೌಲ್ಯ ಶಿಕ್ಷಣವನ್ನು ಶಾಲಾ ಪಠ್ಯದ ಭಾಗವಾಗಿ ಕಲಿತಳು. ಆಕೆ ತನ್ನ ಜೀವನದಲ್ಲಿ ಶುಶ್ರೂಷಕಿಯಾಗಬೇಕೆಂಬ ಬಯಕೆಯನ್ನು ಹೊಂದುವಲ್ಲಿ ಆ ಶಾಲೆಯ ಕಲಿಕಾ ಪಠ್ಯಗಳು ಪ್ರಭಾವ ಬೀರಿದ್ದವು. ಮಹೋನಿ ಇಪ್ಪತ್ತು ವರ್ಷ ತುಂಬುವ ಮೊದಲೇ ವೈದ್ಯನೊಬ್ಬನೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದು ಇಬ್ಬರೂ ಪರಸ್ಪರ ಅವಲಂಬಿತರಾಗಿದ್ದರು. ಆದರೆ ಅವರ ಸಂಬಂಧ ತುಂಬ ದಿನಗಳವರೆಗೆ ಮುಂದುವರಿಯಲೂ ಇಲ್ಲ, ಮದುವೆಯ ಬಂಧನದಲ್ಲಿ ಕೊನೆಯಾಗಲೂ ಇಲ್ಲ. ಇದರಿಂದ ಬಹುವಾಗಿ ನೊಂದುಕೊಂಡ ಮಹೋನಿ ಜೀವನ ಪರ್ಯಂತ ತಾನು ಮದುವೆಯಾಗದೆ ಒಬ್ಬೊಂಟಿಯಾಗಿರಬೇಕೆಂದು ನಿರ್ಣಯಿಸಿ ಅದರಂತೆ ನಡೆದುಕೊಂಡಳು.

ಬೋಸ್ಟನ್‌ನಲ್ಲಿದ್ದ ನ್ಯೂ ಇಂಗ್ಲೆಂಡ್ ಎಂಬ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯಲ್ಲಿ ತನ್ನ ಹದಿನೆಂಟನೆಯ ವಯೋಮಾನದಲ್ಲಿ ವೃತ್ತಿ ಜೀವನವನ್ನು ಪ್ರಾರಂಭಿಸಿದಳು. ತಾನು ನೇಮಕಗೊಂಡ ಹುದ್ದೆಯ ಕೆಲಸದ ವ್ಯಾಪ್ತಿಯಲ್ಲದೆ ಅಡುಗೆ ಮಾಡುವುದು, ಕಾವಲು ಕಾಯುವುದು, ಬಟ್ಟೆ ತೊಳೆಯುವದು, ನೆಲ ಒರೆಸುವದು ಮುಂತಾದ ಕೆಲಸಕಾರ್ಯಗಳನ್ನು ಪ್ರತಿದಿನ ಹದಿನಾರು ಗಂಟೆ ಮಾಡುತ್ತಿದ್ದಳು. ಕಪ್ಪು ಜನಾಂಗದ ಮಹಿಳೆ ಯಾಗಿದ್ದರಿಂದ ಅವರಿಗೆ ಕೇವಲ ತಮ್ಮ ಕೆಲಸ ಮಾಡುವುದು ಮಾತ್ರ ಇರುತ್ತಿರಲಿಲ್ಲ, ಹೆಚ್ಚುವರಿ ಕೆಲಸವನ್ನೂ ಮಾಡಬೇಕಿತ್ತು. ಯಾವುದೇ ಗೊಣಗಾಟ ಮಾಡದೇ ಈ ತರಹ ಹದಿನೈದು ವರ್ಷಗಳ ಕಾಲ ಸೇವೆ ಸಲ್ಲಿಸಿದಳು. ತನ್ನ ಮೂವತ್ತ ಮೂರನೆಯ ವಯಸ್ಸಿನಲ್ಲಿ ವೃತ್ತಿಪರ ಅಥವಾ ಅಧಿಕೃತ ಶುಶ್ರೂಷಕಿ ಆಗಲು ೧೮೭೮ರಲ್ಲಿ ಅದೇ ಆಸ್ಪತ್ರೆಯಲ್ಲಿ ಹದಿನಾರು ತಿಂಗಳ ನರ್ಸ್ ತರಬೇತಿಗೆ ಪ್ರವೇಶ ಪಡೆದಳು. ಆ ಕೋರ್ಸ್‌ಗೆ ಪ್ರವೇಶ ನೀಡಲು ಅವಳ ವಯಸ್ಸನ್ನು ಪರಿಗಣಿಸದೆ ಆಕೆ ಆಸ್ಪತ್ರೆಯಲ್ಲಿ ಸಲ್ಲಿಸಿದ ಅತ್ಯುತ್ತಮ ಮತ್ತು ಹೆಚ್ಚುವರಿ ಸೇವೆಯನ್ನು ಕೊನೆಗೂ ಆ ಸಂಸ್ಥೆ ಪರಿಗಣಿಸಿ ಅವಕಾಶ ಮಾಡಿಕೊಟ್ಟಿತ್ತು. ಆಕೆ ನರ್ಸ್‌ಕೋರ್ಸ್‌ಗೆ ಪ್ರವೇಶ ಪಡೆದ ಆಫ್ರಿಕಾ-ಅಮೆರಿಕನ್ ಸಮುದಾಯದ ಮೊದಲ ಮಹಿಳೆಯೆನಿಸಿದಳು.

ಈ ಕೋರ್ಸ್‌ನ ಬೋಧನಾ ತರಗತಿಗಳು ಕೆಲವು ಗಂಟೆಗಳ ಅವಧಿಗೆ ಸೀಮಿತವಾಗಿದ್ದರೆ ರೋಗಿಗಳ

**ಡಾ॥ ಸರೋಜಾ ಸಂತಿ**

ಆರೈಕೆ, ಕಾಳಜಿ, ಚಿಕಿತ್ಸೆಯ ಪ್ರಾಯೋಗಿಕ ತರಗತಿಗಳು ಹಲವು ಗಂಟೆಗಳ ಅವಧಿಗೆ ವಿಸ್ತರಿಸಿದ್ದವು. ಈ ಕೋರ್ಸ್‌ಗೆ ಪ್ರವೇಶ ಪಡೆದ ನಲವತ್ತೆರಡು ವಿದ್ಯಾರ್ಥಿಗಳಲ್ಲಿ ಕೇವಲ ನಾಲ್ಕು ವಿದ್ಯಾರ್ಥಿಗಳು ಮಾತ್ರ ಪರೀಕ್ಷೆಯಲ್ಲಿ ಪಾಸಾಗಿದ್ದರು. ಆ ನಾಲ್ಕು ವಿದ್ಯಾರ್ಥಿಗಳಲ್ಲಿ ಮಹೋನಿ ಕೂಡ ಒಬ್ಬಳಾಗಿದ್ದಳು. ಕಪ್ಪು ಜನಾಂಗ ಬಿಳಿ ಜನರ ಸೇವೆಯನ್ನು ಮಾಡಲು ಮಾತ್ರ ಅರ್ಹರು – ಜಾಣರಲ್ಲ, ಬುದ್ಧಿವಂತರಲ್ಲ ಎಂಬ ಪೂರ್ವಾಗ್ರಹ ಬಿಳಿಜನರಲ್ಲಿ ತುಂಬಿತ್ತು ಆದ್ದರಿಂದ ಅವರನ್ನು ಗುಲಾಮರಂತೆ ಕಾಣುತ್ತಿದ್ದರು. ಮೇರಿ ಎಲಿಜಾ ಮಹೋನಿ ಆ ಪರೀಕ್ಷೆಯನ್ನು ಪಾಸು ಮಾಡುವ ಮೂಲಕ ತಾನು ವೃತ್ತಿಪರ ಶುಶ್ರೂಷಕಿಯಾಗಲು ಅರ್ಹಳೆಂದು, ಬುದ್ಧಿವಂತಳೆಂದು ಸಾಬೀತು ಪಡಿಸಿದಳು. ೧೮೭೯ರಲ್ಲಿ ಆಫ್ರಿಕನ್–ಅಮೆರಿಕನ್ ಇತಿಹಾಸದಲ್ಲಿ ವೃತ್ತಿಪರ ನರ್ಸ್ ಎಂದು ಪರವಾನಗಿ ಪಡೆದ ಮೊದಲ ಕಪ್ಪು ಮಹಿಳೆಯಾದಳು. ನಂತರ ನಾಲ್ಕು ದಶಕಗಳವರೆಗೆ ಖಾಸಗಿ ನರ್ಸ್ ವೃತ್ತಿ ಜೀವನ ನಡೆಸಿದಳು. ತನ್ನ ಅತ್ಯುತ್ತಮ ವೃತ್ತಿಪರತೆಯಿಂದಾಗಿ ಅಮೆರಿಕಾದಾದ್ಯಂತ ಆಕೆ ಚಿರಪರಿಚಿತಳಾದಳು. ಅಮೆರಿಕದ ಉತ್ತರ, ಆಗ್ನೇಯ ಕರಾವಳಿ ಭಾಗದ ರೋಗಿಗಳಿಂದ ಆಕೆಯ ಸೇವೆ ಕೋರಿ ಮನವಿಗಳು ಬರುತ್ತಿದ್ದವು. ಕೆಲವೊಮ್ಮೆ ಬೇರೆ ರಾಜ್ಯಗಳಲ್ಲೂ ಆಕೆ ಸೇವೆ ಸಲ್ಲಿಸಿದ್ದಾಳೆ. ಕಪ್ಪು ಜನಾಂಗ ಗುಲಾಮರಾಗಿದ್ದು ನಿಕೃಷ್ಟತೆಯಿಂದ ಅವಕಾಶವಿಲ್ಲದೆ ಬಡವರಾಗಿಯೇ ಉಳಿದಿದ್ದರಿಂದ ಆಕೆ ಕಪ್ಪು ಮಹಿಳೆಯಾಗಿದ್ದರೂ ಕಪ್ಪು ಜನರ ಸೇವೆ ಮಾಡುವ ಅವಕಾಶವಿರಲಿಲ್ಲ. ಮಹೋನಿ ಸೇವೆ ಸಲ್ಲಿಸುವ ಸಮಯದಲ್ಲೂ ಬಿಳಿಯರು ಆಕೆಯನ್ನು ವೃತ್ತಿಪರ ನರ್ಸ್ ಒಬ್ಬಳಿಗೆ ನೀಡುವ ಗೌರವವನ್ನು ತೋರದೆ ಗುಲಾಮಳಂತೆ, ಸೇವಕಿಯಂತೆ ನಡೆಸಿಕೊಳ್ಳುತ್ತಿದ್ದರು. ಅದರಿಂದ ಅಪಮಾನಿತಳಾದ ಆಕೆ ನೋವುಂಡು ಜನಾಂಗೀಯ ತಾರತಮ್ಯವನ್ನು ಬುಡಮೂಲದಿಂದ ಕಿತ್ತೊಗೆಯಲು ಹೋರಾಟ ಪ್ರಾರಂಭಿಸಿದಳು. ಹೊವಾರ್ಡ್ ಕಪ್ಪು ಮಕ್ಕಳ ಅನಾಥಾಶ್ರಮದ ನಿರ್ದೇಶಕಿಯಾಗಿ ಆಕೆ ೧೯೧೧–೧೨ರವರೆಗೆ ಕೆಲಸ ಮಾಡಿದಳು. ಇದು ಕಪ್ಪು ಮಕ್ಕಳ ಮತ್ತು ವಯಸ್ಕ ಅನಾಥರ ಮನೆಯಾಗಿತ್ತು. ಈ ಸಂಸ್ಥೆಯನ್ನು ಆಫ್ರಿಕನ್ – ಅಮೆರಿಕನ್ನರು ನಡೆಸುತ್ತಿದ್ದರು. ಆಕೆ ತನ್ನೆಲ್ಲ ಜ್ಞಾನ ಬಳಸಿ ಅವರ ಅಭಿವೃದ್ಧಿಗಾಗಿ ಏಳಿಗೆಗಾಗಿ ದುಡಿಯತೊಡಗಿದಳು. ಈ ಮೂಲಕ ತನ್ನ ಶುಶ್ರೂಷಕಿ ವೃತ್ತಿ ಜೀವನವನ್ನು ಅನಾಥಾಶ್ರಮದಲ್ಲಿಯೇ ಕೊನೆಗೊಳಿಸಿದಳು.

ತನ್ನ ನಾಲ್ಕು ದಶಕಗಳ ಶುಶ್ರೂಷಕಿ ಸೇವೆಯ ನಿವೃತ್ತಿ ನಂತರ ಮಹೋನಿ ತನ್ನ ಗಮನವನ್ನೆಲ್ಲ ಮಹಿಳಾ ಸಮಾನತೆಯ ಹಕ್ಕುಗಳಿಗಾಗಿ, ಜನಾಂಗೀಯ ತಾರತಮ್ಯ ವಿರುದ್ಧದ ಹೋರಾಟಕ್ಕಾಗಿ ಕೇಂದ್ರೀಕರಿಸಿದಳು. ೧೮೯೬ರಲ್ಲಿ ಅಮೆರಿಕಾ ಮತ್ತು ಕೆನಡಾದ ಶುಶ್ರೂಷಕಿಯರ ಸಂಘಟನೆಯ (ನರ್ಸಸ್ ಅಸೋಸಿಯೇಟೆಡ್ ಅಲ್ಯುಮಿನಾ ಆಫ್ ದ ಯುನೈಟೆಡ್ ಸ್ಟೇಟ್ಸ್ ಆ್ಯಂಡ್ ಕೆನಡಾ–NAAUSC) ಸದಸ್ಯೆಯಾದಳು. ಇದು ನಂತರ ಅಮೆರಿಕಾ ನರ್ಸಸ್ ಅಸೋಸಿಯೇಷನ್ ಎಂದಾಯಿತು. ಈ ಸಂಘಟನೆ ಬಿಳಿ ಮಹಿಳೆಯರಿಂದ ತುಂಬಿಹೋಗಿದ್ದು, ಕಪ್ಪು ಮಹಿಳೆಯರನ್ನು ಗೌರವದಿಂದ ಕಾಣುತ್ತಿರಲಿಲ್ಲ. ಆದಕಾರಣ ಮಹೋನಿ, ಮಾರ್ಥಾ ಮಿನರ್ವ್ ಫ್ರಾಂಕಲಿನ್ ಮತ್ತು ಇತರ ಸದಸ್ಯರ ಜೊತೆಗೂಡಿ ೧೯೦೮ರಲ್ಲಿ ನ್ಯಾಷನಲ್ ಅಸೋಸಿಯೇಷನ್ ಆಫ್ ಕಲರ್ಡ್ ಗ್ರ್ಯಾಜ್ಯುಯೇಟ್ ನರ್ಸಸ್ (NACGN) ಎಂಬ ಸಂಘಟನೆಯನ್ನು ಆರಂಭಿಸಿ ಅದರ ಸ್ಥಾಪಕ ಸದಸ್ಯೆಯಾದಳು. ಈ ಸಂಘಟನೆಯ ಮೊದಲ ಸಭೆಯಲ್ಲಿ ಎಲ್ಲರೂ ಬೆರಗಾಗುವಂತೆ ಭಾಷಣ ಮಾಡಿದಳು. ಈ ಸಂಘಟನೆ ನೋಂದಣಿಯಾದ ಆಫ್ರಿಕನ್ – ಅಮೆರಿಕನ್ ಶುಶ್ರೂಷಕಿಯರ ಕೆಲಸದ ಗುಣಮಟ್ಟ ಮತ್ತು ದೈನಂದಿನ ಜೀವನವನ್ನು ಉತ್ತಮಪಡಿಸಲು ಶ್ರಮಿಸಿತು. ಈ ಕ್ಷೇತ್ರದಲ್ಲಿರುವ ಜನಾಂಗೀಯ ತಾರತಮ್ಯವನ್ನು ತೊಡೆದುಹಾಕುವಲ್ಲಿ ಗಮನಾರ್ಹ ಪ್ರಭಾವ ಬೀರಿತು. ಆಕೆ ತನ್ನ ಪ್ರಾಮಾಣಿಕ, ದಕ್ಷ, ಕೌಶಲ್ಯಯುತ ಕೆಲಸ ಕಾರ್ಯಗಳಿಂದ ಕಪ್ಪು ವರ್ಣದ ಶುಶ್ರೂಷಕಿಯರನ್ನು ನೋಡುವ ದೃಷ್ಟಿಕೋನವನ್ನು ಬದಲಿಸಿದಳು. ಒಬ್ಬ ಮಹಿಳೆ ಇಡೀ ತನ್ನ ಸಮುದಾಯವನ್ನು ನೋಡುವಂತೆ, ಗೌರವಿಸುವಂತೆ ಮಾಡಬೇಕಾದರೆ ಆಕೆಯ ಸಮುದಾಯದ ಪ್ರೀತಿ ಮತ್ತು ಆಕೆಯ ಘನತೆಯ ಬದುಕನ್ನು ತೋರಿಸುತ್ತದೆ. ಕಪ್ಪು ಜನಾಂಗ ಗುಲಾಮರಂತೆ ಬದುಕುವುದನ್ನು ಬಿಟ್ಟು ಸ್ವಾವಲಂಬಿಗಳಾಗಬೇಕು, ವ್ಯಕ್ತಿಗಳಿಗೆ ತಮ್ಮ ಕನಸನ್ನು ನನಸು ಮಾಡಿಕೊಳ್ಳುವ ಅವಕಾಶವಿರಬೇಕು, ಅದಕ್ಕೆ ವರ್ಣವ್ಯವಸ್ಥೆ ಅಡ್ಡಿಯಾಗಬಾರದು. ಮನುಷ್ಯರನ್ನು ಮನುಷ್ಯರಂತೆ ಕಾಣಬೇಕೇ ಹೊರತು ಗುಲಾಮರಂತಲ್ಲ ಎಂದು ಹೇಳುತ್ತಿದ್ದಳು. ಈ ಸಂಘಟನೆ ಬಿಳಿ ಮತ್ತು ಕಪ್ಪು ಜನಾಂಗದ ನಡುವಿನ ಅಂತರ ಕಡಿಮೆಯಾದ ಹಾಗೇ ೧೯೫೧ರಲ್ಲಿ ಅಮೆರಿಕನ್ ನರ್ಸಸ್ ಅಸೋಸಿಯೇಷನ್ ಜೊತೆಗೆ ವಿಲೀನವಾಯಿತು.

ಮಹೋನಿ ಕೇವಲ ಆಫ್ರಿಕನ್ – ಅಮೆರಿಕನ್ ಮಹಿಳೆಯರಿಗೆ ಮಾತ್ರ ಪ್ರೇರಣೆ, ಮಾದರಿಯಾಗಿರದೆ ಜಗತ್ತಿನಾದ್ಯಂತವಿರುವ ಶುಶ್ರೂಷಕಿ ವೃತ್ತಿಯವರಿಗೆ ಪ್ರೇರಕಳಾಗಿದ್ದಾಳೆ. ಆಕೆಯ ಅದಮ್ಯ ಆಸಕ್ತಿ, ಅನುರಾಗ ಮತ್ತು ವೃತ್ತಿಪರತೆಯಿಂದಾಗಿ ಶುಶ್ರೂಷಕಿ ವೃತ್ತಿಗೆ ಗೌರವ ತಂದಿದ್ದಾಳೆ, ಈ ಮೂಲಕ ಮಹಿಳಾ ಸಮುದಾಯಕ್ಕೂ ಕೊಡುಗೆ ನೀಡಿದ್ದಾಳೆ. ೧೯೨೦ರಲ್ಲಿ ಅಮೆರಿಕಾ ಸಂವಿಧಾನದ ೧೯ನೆಯ ತಿದ್ದುಪಡಿ ಅನುಮೋದನೆಗಾಗಿ ನಡೆದ ಮತದಾನದಲ್ಲಿ ಬೋಸ್ಟನ್‌ನಲ್ಲಿ ನೋಂದಣಿ ಮಾಡಿಸಿದ ಪ್ರಥಮ ಮಹಿಳೆಯಾಗಿದ್ದಾಳೆ. ಈ ತಿದ್ದುಪಡಿ ಮಹಿಳೆಯರಿಗೆ ಮತದಾನದ ಹಕ್ಕು ನೀಡುವುದಾಗಿದ್ದು, ೧೯೨೦ ಆಗಸ್ಟ್ ೨೬ರಂದು ಅನುಮೋದನೆಗೊಂಡಿತು. ೧೯೭೬ರಲ್ಲಿ ನರ್ಸಿಂಗ್ ಹಾಲ್ ಆಫ್ ಫೇಮ್ ಮತ್ತು ೧೯೯೩ರಲ್ಲಿ ನ್ಯಾಷನಲ್ ವುಮನ್ಸ್ ಹಾಲ್ ಆಫ್ ಫೇಮ್‌ನಲ್ಲಿ ಮಹೋನಿಯ ಹೆಸರು ಆಕೆಯ ಕಾರ್ಯ, ಕೌಶಲ್ಯ, ಸಾಧನೆಗಳಿಗಾಗಿ ಸೇರ್ಪಡೆಗೊಂಡಿತು.

ಮಹೋನಿ ತನ್ನ ೮೦ನೆಯ ವಯಸ್ಸಿನಲ್ಲಿ ೧೯೨೬ರ ಜನವರಿ ೪ರಂದು ಮರಣ ಹೊಂದುವ ಮೊದಲು ಸತತ ಮೂರು ವರ್ಷಗಳ ಕಾಲ ಸ್ತನ ಕ್ಯಾನ್ಸರ್‌ನಿಂದ ಬಳಲುತ್ತಿದ್ದಳು. ಮಹೋನಿ ಸತ್ತು ಹತ್ತು ವರ್ಷಗಳ ನಂತರ 'ಮೇರಿ ಮಹೋನಿ' ಹೆಸರಿನಲ್ಲಿ ಶುಶ್ರೂಷಕಿಯರಲ್ಲಿ ಜನಾಂಗೀಯ ಏಕೀಕರಣಕ್ಕಾಗಿ ದುಡಿದವರನ್ನು ಗುರುತಿಸಿ ಪ್ರಶಸ್ತಿ ನೀಡಲು ಪ್ರಾರಂಭಿಸಲಾಯಿತು. ಇಂದಿಗೂ ಅಮೆರಿಕಾದಲ್ಲಿ ಈ ಪ್ರಶಸ್ತಿ ನೀಡಲಾಗುತ್ತಿದೆ. ರಾಷ್ಟ್ರೀಯ ಆಫ್ರಿಕನ್ – ಅಮೆರಿಕನ್ ಸೋದರಿ ಸಮಾಜದ ಚಿ ಇಟಾ ಫಿ ಅವರು ೧೯೭೩ರಲ್ಲಿ ಮಹೋನಿ ಪ್ರತಿಮೆಯನ್ನು ಸ್ಥಾಪಿಸಿದ್ದಾರೆ. ಆ ದೇಶದ ಕಪ್ಪು ನರ್ಸ್‌ಗಳು ಮಾತ್ರವಲ್ಲದೆ ಜಗತ್ತಿನಲ್ಲಿರುವ ಎಲ್ಲ ಶುಶ್ರೂಷಕಿಯರೂ ಮೇರಿ ಮಹೋನಿಯನ್ನು ಸ್ಮರಿಸುತ್ತಾರೆ.



**ಡಾ॥ ಸರೋಜಾ ಸಂತಿ**
ಪಿಡಿಎಫ್ ಫೆಲೋ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಬಳ್ಳಾರಿ ಜಿಲ್ಲೆ



ಭಾನುವಾರ ಕಳೆದು, ಸೋಮವಾರದಂದು ಎಂದಿನಂತೆ ಶಾಲೆ ತೆರೆಯಿತು. ಇಂದೂ ಪೂಜಾಳ ಹಾಜರಿ ಇಲ್ಲ. ಮತ್ತೊಮ್ಮೆ ಕಾವ್ಯನನ್ನು ವಿಚಾರಿಸಿದಾಗ ಗೊತ್ತಿಲ್ಲ ಎಂದದ್ದು ಬೇಸರವನ್ನುಂಟುಮಾಡಿತು ಕಮಲಾ ಟೀಚರ್‌ಗೆ. ಅಂದಿನ ಹಾಜರಾತಿಯನ್ನು ತೆಗೆದುಕೊಂಡ ನಂತರ ಪಾಠ ಪ್ರಾರಂಭಿಸಲು ಮುಂದಾದರು. ತರಗತಿಯ ಹೊರಗೆ ಮೈದಾನದಲ್ಲಿ ಮುತ್ತಮ್ಮಜ್ಜಿ ತನ್ನ ಮೊಮ್ಮಗಳ ಕೈಹಿಡಿದು ಬಲವಂತದಿಂದ ದರದರನೆ ಎಳೆಯುತ್ತಾ, ಅವಳಿಗೆ ರಪ ರಪ ಎಂದು ಬೆನ್ನಿಗೆ ಬಾರಿಸುತ್ತಿದ್ದದ್ದನ್ನು ಕಂಡ ಕಮಲಾ ಟೀಚರ್ ಕೊಂಚ ಗಾಬರಿಯಿಂದ ಕೊಠಡಿಯಿಂದ ಹೊರಬಂದು ಅಜ್ಜಿಯನ್ನು ತಡೆದರು.

# ಕನಕಾಂಬರ

ಶಾಲೆಯು ಎಂದಿನಂತೆ ಮುಂಜಾನೆ ಒಂಬತ್ತಕ್ಕೆ ತನ್ನ ಘಂಟಾನಾದ ಹೊರಡಿಸಿತು. ಶಾಲೆಯ ಅಂಗಳದಲ್ಲಿ ಕೇಕೆ ಚೀರಾಟದೊಂದಿಗೆ ಆಟವಾಡುತ್ತಿದ್ದ ಮಕ್ಕಳು ಬೇಸರದಿಂದ ತರಗತಿಯ ಒಳಸೇರಿದವು. ಮುತ್ತಮ್ಮಜ್ಜಿ ತನ್ನ ಮೊಮ್ಮಗಳ ಎಳೆಯ ಕೈಗಳನ್ನು ಹಿಡಿದು, ‘ಇವತ್ತೂ ಬೈಸಿಕೊಳ್ಳುವಂತೆ, ನಡಿ’ ಎಂದು ಬೈಗುಳದೊಂದಿಗೆ ದಾಪುಗಾಲಿಡುತ್ತಾ ಶಾಲೆಯನ್ನು ತಲಪುವದರಲ್ಲಿ ಅಂಗಳವು ಬರಿದಾಗಿತ್ತು.

ಕಮಲಾ ಟೀಚರ್ ಮಕ್ಕಳ ಹಾಜರಾತಿಯನ್ನು ತೆಗೆದುಕೊಳ್ಳುತ್ತಿದ್ದು, ಕೊಠಡಿಯ ಬಾಗಿಲ ಬಳಿ ಬಂದು ನಿಂತಿದ್ದ ಪೂಜಾಳನ್ನು ಒಳಕಳಿಸುವಂತೆ ಅಜ್ಜಿಗೆ ಸನ್ನೆ ಮಾಡಿದರು. ಮರುತ್ತರವಾಗಿ ಮುತ್ತಮ್ಮಜ್ಜಿ ಟೀಚರ್‌ಅನ್ನು ಒಂದು ನಿಮಿಷ ಹೊರಬರುವಂತೆ ಕೇಳಿಕೊಂಡಿತು. ‘ಓ, ಇವತ್ತೊ ದೂರಿನ ದೊಡ್ಡ ಪಟ್ಟಿ ಇದ್ದಂತೆ ಕಾಣುತ್ತದೆ’ ಎಂದು ಮನದಲ್ಲೇ ಅಂದುಕೊಂಡು ಕಮಲಾ ಟೀಚರ್ ಹೊರಬಂದರು.

‘ನೋಡಿ ಟೀಚರ್, ದಿನ ಬೆಳ್ಗೆ ಏಳೋದೇ ಲೇಟು. ಒಂದು ನೂರ್ ಸಲ ಹೇಳ್ಬೇಕು. ಬೆಳ್ಳಂಬೆಳಗ್ಗೆ, ಕೆಲಸ ಕಮ್ಮೀನಾ, ನಾನೂ ಎಷ್ಟೊಂತ ಹೇಳ್ಲಿ, ಮೂರೊತ್ತೂ ಆಟ ಆಟ...’ ಹನುಮಂತನ ಬಾಲದಂತೆ ಬೆಳೆಯುತ್ತಾ ಹೋಯಿತು ಮೊಮ್ಮಗಳ ಬಗೆಗಿನ ದೂರಿನ ಪಟ್ಟಿ. ತಾನು ಟೀಚರ್‌ಗೆ ಬಾಯಿಪಾಠ ಮಾಡಿ ಒಪ್ಪಿಸುವ ಗಣಿತದ ಮಗ್ಗಿಯಂತೆ, ತನ್ನ ಬಗ್ಗೆ ದೂರು ಒಪ್ಪಿಸುತ್ತಿದ್ದ ಅಜ್ಜಿಯ ಬೊಚ್ಚುಬಾಯಿಯನ್ನೊಮ್ಮೆ, ಟೀಚರ್‌ನ ಮುಖವನ್ನೊಮ್ಮೆ, ಕೈ ಕಟ್ಟಿ ತಲೆಬಗ್ಗಿಸಿ ಸಿಕ್ಕಿಕೊಂಡ ಕಳ್ಳನಂತೆ ನೋಡುತ್ತಿದ್ದ ಪೂಜಾಳಿಗೆ, ಟೀಚರ್ ಕೊಂಚ ಜೋರುದನಿಯಲ್ಲಿ ಗದರುವಂತೆ ‘ಪೂಜಾ, ಬೆಳಗ್ಗೆ ಬೇಗ ಏಳಬೇಕು ತಾನೆ, ಅಜ್ಜಿಗೆ ಯಾಕೆ ಕಷ್ಟ ಕೊಡೋದು? ನಾಳೆಯಿಂದ ನೀನೇ ಏಳಬೇಕು. ಕ್ಲಾಸ್‌ಗೆ ಸರಿಯಾದ ಸಮಯಕ್ಕೆ ಬರದೆ ಹೋದರೆ, ದಿನವಿಡೀ ಕ್ಲಾಸ್‌ಗೆ ಸೇರಿಸೊಲ್ಲ. ಅರ್ಥ ಆಯಿತಾ?’ ಎಂದು ಗದರಿದರು.

‘ಎಸ್ ಮಿಸ್’ ಎನ್ನುವಂತೆ ಬಾಯಿ ತೆರೆಯದೇ ತಲೆ ಬಗ್ಗಿಸಿಯೇ, ತಲೆಯನ್ನೊಮ್ಮೆ ಅಲ್ಲಾಡಿಸಿ ಬಂದಿತು ಉತ್ತರ ಪೂಜಾಳಿಂದ.

ತನ್ನ ಮುಂದೆಯೇ ಮೊಮ್ಮಗಳನ್ನು ಟೀಚರ್ ಗದರಿಸಿದ್ದು, ತಾನು ಹೇಳಿದ ದೂರಿನ ಸಫಲತೆಯ ಪ್ರತಿಫಲವೆಂಬಂತೆ ಅಜ್ಜಿ ನಮ್ರತೆಯಿಂದ ವಂದಿಸಿ ಸಂಜೆ ಬರುವುದಾಗಿ ಹೇಳಿ ಮನೆಗೆ ಹಿಂತಿರುಗಿತು.

ಟೀಚರ್, ‘ನಾಳೆಯಿಂದ ಬೇಗ ಬರಬೇಕು, ಆಯಿತಾ’ ಎಂದು ಮೃದುವಾಗಿ ಹೇಳಿ ಮುಗುಳ್‌ನಕ್ಕರು.

ತಕ್ಷಣವೇ ಪೂಜಾ ತನ್ನ ಪುಟ್ಟ ಕೈಗಳನ್ನು ತನ್ನ ಬೆನ್ನ ಹಿಂದೆ ಬೇತಾಳನಂತೆ ನೇತಾಡುತ್ತಿದ್ದ ಬ್ಯಾಗಿನ ಒಳಗೆ ಇಳೆಬಿಟ್ಟಳು. ಕಾಗದದಲ್ಲಿ ಸುತ್ತಿದ್ದ ಒಂದು ಮೊಳ ಕನಕಾಂಬರ ಹೂವನ್ನು ಕೈಯಲ್ಲಿ ಹಿಡಿದು ಟೀಚರ್‌ನ ಮುಂದೆ ಹಿಡಿದು, ‘ಮಿಸ್, ನಿಮ್ಮ ಉದ್ದ ಜಡೆಗೆ ಈ ಹೂ ಮುಡಿದುಕೊಳ್ಳಿ’ ಎಂದು ಎಂದಿನಂತೆ ನುಡಿದಳು.

‘ಅರೆ, ಲೇಟಾದ್ರೂ ಒಂದು ದಿನವೂ ಮಿಸ್ ಮಾಡಲ್‌ವಲ್ಲ ನೀನು, ಇದಕ್ಕೆ ಟೈಮ್ ಇರುತ್ತ ನಿಂಗೆ?’ ಎಂದರು ಟೀಚರ್.

‘ಅಮ್ಮ ಕೊಟ್ಟಿದ್ದು. ಟೀಚರ್’ ಎಂದು ಪೂಜಾ ಮುಗುಳ್‌ನಕ್ಕು ಸಂತೋಷದಿಂದ ಹಿಗ್ಗಿ, ತನ್ನ ಎರಡು ಭುಜವನ್ನೊಮ್ಮೆ ಕುಣಿಸಿ ತರಗತಿಯ ಒಳಹೊಕ್ಕು ತನ್ನ ಜಾಗದಲ್ಲಿ ಕೂತಳು..

✶ ✶ ✶

ಶಾಲೆಯ ಪ್ರತೀ ಮಗುವು ವಿಭಿನ್ನ. ಈ ಮಕ್ಕಳ ಪ್ರಶ್ನಿಸುವ ಎದೆಗಾರಿಕೆ, ಪರಿಸರವನ್ನರಿಯುವ ಕುತೂಹಲ, ಹೊಸ ಹೊಸದನ್ನು ತಿಳಿಯುವ ತಹತಹಿಕೆ ಅವರಿಂದ ಕಲಿಯಲು ಮತ್ತು ಕಲಿಸಲು ಸದಾ ಉತ್ಸಾಹಿಯಾಗಿದ್ದವರು ಕಮಲಾ ಟೀಚರ್. ಪಕ್ಕದ ಊರಿನಿಂದ ವರ್ಗಾವಣೆಯಾಗಿ ಬಿದರ್‌ಕಲ್ಲಿಗೆ ಬಂದು ಕೇವಲ ನಾಲ್ಕೈದು ತಿಂಗಳಾಗಿದ್ದವು.

**ನಿರ್ಮಲ ಹೆಚ್. ಎಲ್.**

ಪೂಜಾ ಎಲ್ಲರಂತಲ್ಲ, ತರಗತಿಯಲ್ಲಿ ಹೆಚ್ಚು ಮಾತಿಲ್ಲ. ಅವಳೊಂದಿಗೆ ಹತ್ತು ಮಾತನಾಡಿದರೆ ಒಂದು ಮಾತನ್ನ ಅವಳ ಬಾಯಿಂದ ಹೊರಡಿಸುವುದು ಹರಸಾಹಸವೇ ಆಗಿತ್ತು. ಆದರೆ ಪಠ್ಯೇತರ ವಿಷಯದಲ್ಲಿ ತಾನೇ ಮೊದಲು. ಪಠ್ಯಕ್ಕೆ ಸಂಬಂಧಪಟ್ಟ ಯಾವುದೇ ಪ್ರಶ್ನೆಗೆ ಬಾಯಿ ತುದಿಯಲ್ಲೇ ಕಾದಿರುತ್ತಿತ್ತು ಉತ್ತರ. ಪಠ್ಯೇತರ ವಿಷಯಕ್ಕೆ ಸಂಬಂಧಪಡದ ಒಂದೇ ಒಂದು ವಾಕ್ಯವನ್ನು ದಿನವೂ ಕಮಲಾ ಟೀಚರ್ ಕೇಳಬಹುದಾಗಿದ್ದು 'ಮಿಸ್, ನಿಮ್ಮ ಉದ್ದ ಜಡೆಗೆ ಈ ಹೂ ಮುಡಿದುಕೊಳ್ಳಿ' ಎಂಬುದನ್ನು. ಉಳಿದಂತೆ ಇಡೀ ದಿನ ಗಣೇಶನ ಹಬ್ಬಕ್ಕೆ ಮನೆಗೆ ತಂದ ಪುಟ್ಟ ಗೌರಿಯೇ.



ಮೂರು ದಿನಗಳಿಂದ ಶಾಲೆಗೆ ಗೈರುಹಾಜರಾದ ಪೂಜಾಳ ಬಗ್ಗೆ ಕಮಲಾ ಟೀಚರ್ ತರಗತಿಯಲ್ಲಿ ವಿಚಾರಿಸಿದಾಗ, ಅವಳ ಮನೆಯ ಬಳಿ ಇರುವ ವಿದ್ಯಾರ್ಥಿನಿ ಕಾವ್ಯ, 'ವಾರಣಾಸಿಯಿಂದ ಅವರ ಅಪ್ಪ ಬಂದಿದ್ದಾರೆ' ಎಂದು ತಿಳಿಸಿದ್ದಳು. ಮತ್ತೊಮ್ಮೆ ವಿಚಾರಿಸಿದಾಗ 'ಗೊತ್ತಿಲ್ಲ'ವೆಂಬ ಉತ್ತರ ಬಂದಿತು. ಆದರೆ ಎರಡು ವಾರವಾದರೂ ಶಾಲೆಗೆ ಬರದೇ ಹೋದದ್ದು ಕಮಲಾ ಟೀಚರ್ ತಲೆಯಲ್ಲಿ ನೂರಾರು ಪ್ರಶ್ನೆಗಳನ್ನೇ ಹುಟ್ಟುಹಾಕಿತು. ತಂದೆ ಬಂದರೆ ಸಂಭ್ರಮ ಹೆಚ್ಚೆಂದರೆ ನಾಲ್ಕು ದಿನಗಳು, ಒಂದು ವೇಳೆ ತೀರ ಅನಾರೋಗ್ಯದಿಂದ ಬಳಲುತ್ತಿದ್ದಾಳೆಯೆ, ಅಥವಾ ಆ ಪುಟ್ಟ ಕಂದಮ್ಮನ ಶಾಲೆಯ ಕಲಿಕೆಗೆ ವಿರಾಮ ಇಟ್ಟರಾ? ಇಲ್ಲ ಬಾಲ್ಯ ವಿವಾಹ? ಉತ್ತರವಿಲ್ಲದ ಪ್ರಶ್ನೆಗಳದ್ದೇ ಅಟ್ಟಹಾಸ. ಸರಿ, ನಾಳೆ ಸೋಮವಾರ ಒಂದು ದಿನ ನೋಡಿ ನಾಳೆಯೂ ಬರದೇ ಹೋದರೆ ನಾನೇ ಒಮ್ಮೆ ಅವಳ ಮನೆಗೆ ಹೋಗಿ ಬಂದರಾಯಿತೆಂದು ಸುಮ್ಮನಾದರು.

* * *

ಭಾನುವಾರ ಕಳೆದು, ಸೋಮವಾರದಂದು ಎಂದಿನಂತೆ ಶಾಲೆ ತೆರೆಯಿತು. ಇಂದೂ ಪೂಜಾಳ ಹಾಜರಿ ಇಲ್ಲ. ಮತ್ತೊಮ್ಮೆ ಕಾವ್ಯನನ್ನು ವಿಚಾರಿಸಿದಾಗ ಗೊತ್ತಿಲ್ಲ ಎಂದದ್ದು ಬೇಸರವನ್ನುಂಟುಮಾಡಿತು ಕಮಲಾ ಟೀಚರ್‌ಗೆ. ಅಂದಿನ ಹಾಜರಾತಿಯನ್ನು ತೆಗೆದುಕೊಂಡ ನಂತರ ಪಾಠ ಪ್ರಾರಂಭಿಸಲು ಮುಂದಾದರು. ತರಗತಿಯ ಹೊರಗೆ ಮೈದಾನದಲ್ಲಿ ಮುತ್ತಮ್ಮಜ್ಜಿ ತನ್ನ ಮೊಮ್ಮಗಳ ಕೈಹಿಡಿದು ಬಲವಂತದಿಂದ ದರದರನೇ ಎಳೆಯುತ್ತಾ, ಅವಳಿಗೆ ರಪ ರಪ ಎಂದು ಬೆನ್ನಿಗೆ ಬಾರಿಸುತ್ತಿದ್ದದ್ದನ್ನು ಕಂಡ ಕಮಲಾ ಟೀಚರ್ ಕೊಂಚ ಗಾಬರಿಯಿಂದ ಕೊಠಡಿಯಿಂದ ಹೊರಬಂದು ಅಜ್ಜಿಯನ್ನು ತಡೆದರು.

'ಅಜ್ಜಿ, ಯಾಕೆ ಏನಾಯ್ತು, ಯಾಕೆ ಹೀಗೆ ಹೊಡೀತಾ ಇದ್ದೀರ? ಎಂದು ಕೇಳಿದರು.

'ನೋಡಿ ಟೀಚರ್, ಶಾಲೆಗೆ ಬರ್ದೆ ಎರಡು ವಾರ ಆಯ್ತು, ಇವತ್ತು ಶಾಲೆಗೆ ಹೋಗಲ್ಲ ಅಂತ ಹಠ ಮಾಡ್ತಾಳೆ.'

ಅಜ್ಜಿ ಈ ಹಿಂದೆ ಪೂಜಾಳ ಬಗ್ಗೆ ಹೇಳುತ್ತಿದ್ದ ದೂರಿಗಿಂತ ವಿಭಿನ್ನವಾಗಿತ್ತು ಇದು. ಆಶ್ಚರ್ಯದಿಂದಲೇ,

'ಯಾಕೆ ಪೂಜ, ಶಾಲೆಗೆ ಬರಕ್ಕೆ ಇಷ್ಟವಿಲ್ವ ನಿನಗೆ? ಎಲ್ಲಿ ತಲೆ ಎತ್ತು' ಎಂದರು ಟೀಚರ್.

ಯಾವುದೇ ಉತ್ತರವನ್ನೂ ನೀಡದ್ದನ್ನು ನೋಡಿ, 'ಹೇಳೇ, ಮಾತಾಡು ನಿಮ್ಮ ಟೀಚರ್ ಕೇಳ್ತಾ ಇಲ್ವಾ?' ಎಂದು ಮತ್ತೇ ಎರಡು ಬೆನ್ನಿಗೆ ಹೊಡೆದರು ಅಜ್ಜಿ. ಬೆನ್ನ ಮೇಲೆ ಹೊಡೆದಲ್ಲೇ ತನ್ನ ಪುಟ್ಟ ಕೈಗಳನ್ನು ಹರಿಸಿದಳು ಪೂಜಾ.

'ಅಜ್ಜಿ, ನಾನು ವಿಚಾರಿಸುತ್ತಿದ್ದೀನಲ್ಲ, ಹೊಡೆದರೆ ಮಕ್ಕಳು ಮನಸ್ಸಿನಲ್ಲಿರೋ ನೋವನ್ನ ಹೇಳುತ್ತಾರ?' ಎಂದು ಟೀಚರ್ ಪೂಜಾಳ, ಗಲ್ಲವನ್ನೆತ್ತಿ, 'ಎಲ್ಲಿ ತಲೆ ಎತ್ತು. ಅಳಬಾರದು ಹೀಗೆ. ಅಜ್ಜಿಗೆ ನೀನು ಶಾಲೆಗೆ ಹೋಗಲ್ಲ ಅಂತ ಬೇಜಾರು ಅಷ್ಟೇ' ಎಂದರು. ವಿಷಯವನ್ನ ಬದಲಾಯಿಸಲು ಟೀಚರ್, 'ಎಲ್ಲಿ, ಎಷ್ಟೋ ದಿನ ಆಯ್ತಲ್ಲಾ ಪೂಜಾ ನನಗೆ ನೀನು ಹೂ ಕೊಟ್ಟು, ಎಲ್ಲಿ ಬ್ಯಾಗಿನಲ್ಲಿ ಇದೆಯಾ?' ಎಂದು ಕೇಳಿದರು.

ಇಲ್ಲಿಯವರೆಗೂ ಸುಮ್ಮನೆ ಅಳುತ್ತಿದ್ದ ಹುಡುಗಿ ಒಮ್ಮೆಲೆ ಬಿಕ್ಕಿ ಬಿಕ್ಕಿ ಬಾಯಿ ತೆರೆದು ಅಳತೊಡಗಿದಳು. ತಾನೇನೋ ಕೇಳಬಾರದನ್ನ ಕೇಳಿ ಬಿಟ್ಟೆನಾ? ಒಂದು ವೇಳೆ ಮನೆಯಲ್ಲಿ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲವಾ? ಹೂ ತೆಗೆದುಕೊಳ್ಳಲು ಸಾಧ್ಯವಾಗದೆ ಅಳು ಜೋರಾಯಿತಾ? ಯಾವುದೊಂದು ತಿಳಿಯದೆ

ಕನ್ನಡ ಸಾಹಿತ್ಯ ಪರಿಷತ್ತಿನ ೨೦೧೭ರ ದತ್ತಿ ಪ್ರಶಸ್ತಿ ಪ್ರಕಟಣೆ

### ನವಕರ್ನಾಟಕ ಪ್ರಕಾಶನಕ್ಕೆ ಆರು ಪ್ರಶಸ್ತಿಗಳು

೨೦೧೭ರ ವಿವಿಧ ದತ್ತಿ ಪ್ರಶಸ್ತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ್ದು, ಇವುಗಳಲ್ಲಿ ಆರು ಪ್ರಶಸ್ತಿಗಳು ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಮತ್ತು ಅದರ ಪ್ರಕಟಣೆಗಳಿಗೆ ಸಂದಿವೆ.

೧. **ಬಿಸಲೇರಿ ಜಯಣ್ಣ ಮತ್ತು ಬಿಸಲೇರಿ ಬ್ರದರ್ಸ್ ದತ್ತಿ ಪ್ರಶಸ್ತಿ** (ವಿಜ್ಞಾನ – ತಂತ್ರಜ್ಞಾನ)
– 'ವಿಜ್ಞಾನ ಹೆದ್ದಾರಿಯಲ್ಲಿ ಮಹಾತಿರುವುಗಳು' *(ಡಾ॥ ಟಿ. ಆರ್. ಅನಂತರಾಮು)*

೨. **ವಸುದೇವ ಭೂಪಾಲಂ ದತ್ತಿ ಪ್ರಶಸ್ತಿ** (ಸಣ್ಣಕಥೆ)
– 'ಇಹದ ಪರಿಮಳ' *(ಕಂನಾಡಿಗಾ ನಾರಾಯಣ)*

೩. **ಡಾ॥ ಎಸ್. ಧರಣೇಂದ್ರಯ್ಯ ಮನೋವಿಜ್ಞಾನ ದತ್ತಿ ಪ್ರಶಸ್ತಿ**
– 'ಸೃಜನಶೀಲ ಶಿಕ್ಷಣ' *(ಡಾ॥ ಮಹಾಬಲೇಶ್ವರ ರಾವ್)*

೪. **ವಸುದೇವ ಭೂಪಾಳಂ ದತ್ತಿ ಪ್ರಶಸ್ತಿ** (ಅನುವಾದ) – 'ಜುಮ್ಮಾ' *(ಸೃಜನ್)*

೫. **ಕಾಕೋಳು ಸರೋಜಮ್ಮ ದತ್ತಿ ಪ್ರಶಸ್ತಿ** (ನಾಟಕ) – 'ಸೀತಾ ಚರಿತ' *(ಎಸ್. ಮಾಲತಿ)*

೬. **ಆರ್. ಎನ್. ಹಬ್ಬು ದತ್ತಿ ಪ್ರಶಸ್ತಿ** (ಪ್ರಕಾಶಕರಿಗೆ)
– 'ನವಕರ್ನಾಟಕ ಪ್ರಕಾಶನ ಸಂಸ್ಥೆ' *(ಇಹದ ಪರಿಮಳ ಪ್ರಕಟಣೆಗಾಗಿ)*

ಅಜ್ಜಿಯ ಮುಖವನ್ನೊಮ್ಮೆ ನೋಡಿದರು ಟೀಚರ್. ಅಜ್ಜಿಯು ತನ್ನ ಸೆರಗಿ ನಂಚಿನಿಂದ ಕಣ್ಣೀರನ್ನೊರೆಸಿಕೊಂಡು ಸೆರಗಿನಿಂದ ತನ್ನ ಬಾಯಿ ಬಿಗಿಹಿಡಿದರು. ಅಜ್ಜಿ ದುಃಖವನ್ನು ಗಂಟಲಿನಲ್ಲಿಡಿದು, 'ಇನ್ನೆಲ್ಲಿ ಹೂವು. ಮನೇಲಿ ಅದರ ಮಾತೆ ಎತ್ತೋ ಹಾಗಿಲ್ಲ. ಆ ರಾಕ್ಷಸ ಬಂದು ಕೂತವನಲ್ಲ. ಇವಳು ಹೂ ಕೊಟ್ಟಿಲ್ಲ ಅಂದರೆ ಶಾಲೆಗೆ ಹೋಗಲ್ಲ ಅಂತ ಹಠ ಮಾಡತ್ತಾ ಇದ್ಲು, ಅದಕ್ಕೆ ಎರಡು ಬಾರಿಸಿ ಕರ್‍ಕೊಂಡು ಬಂದೆ.'

'ಅಜ್ಜಿ, ಯಾವ ರಾಕ್ಷಸ, ಏನು?' ಏನೂ ಅರ್ಥವಾಗದ ಟೀಚರ್ ಮತ್ತೆ ಕೇಳಿದರು.

'ನನ್ನ ಹೊಟ್ಟೇಲೇ ಹುಟ್ಟಿದ ಮಗ, – ಇವರಪ್ಪ. 'ಆರು ತಿಂಗಳಿಗೆ ಒಂದು ಸಲ ಬರ್‍ತಾನೆ. ಮನೆಗೆ ಬೇಕಾದ್ದನ್ನೆಲ್ಲ ತಂದಾಕ್ತನೆ. ಬಂದು ಸೊಸೇನಾ ತಿರುಪತಿಗೆ ಕರ್‍ಕಂಡು ಹೋಗಿ ತಲೆ ಕೂದಲು ಬೋಳಿಸಿ ಕರ್‍ಕಂಡು ಬರ್‍ತಾನೆ. ಕೇಳಿದ್ರೆ, ಮುಡಿ ಅಂತಾನೆ, ನನ್ನ ಹೊಟ್ಟೇಲಿ ಹುಟ್ಟಿದವನು ಇವನೇನಾ ಅಂತ ಬೇಜಾರಾಗುತ್ತವ್ವ' ಎಂದು ದುಃಖಿಸಿದರು.

'ಮುಡಿನಾ? ಆರು ತಿಂಗಳಿಗೊಮ್ಮೆ' ವಿಚಿತ್ರವೆಂಬಂತೆ ಟೀಚರ್ ಅಜ್ಜಿಯ ಮುಖವನ್ನೇ ನೋಡುತ್ತಿದ್ದಂತೆ, ಅಜ್ಜಿ ಮುಂದುವರಿದು, 'ಅದು ನೆಪ, ಅಷ್ಟೆ. ಅವಳು ಒಂದು ಹೂವನ್ನೂ ಮುಡಿಬಾರದು. ಒಂದು ಒಳ್ಳೆ ಸೀರೆಯನ್ನೂ ಉಡಬಾರದು, ಮದ್ವೇ ಹೊಸದ್ರಲ್ಲಿ ನಿಮ್ಮಂಗೇ ಬಾರಿ ಉದ್ದ ಜಡೆ ನನ್ನ ಸೊಸೆಗೂ. ಹೂ ಅಂದರೇ ಬಾಳ ಪ್ರೀತಿ ಅವಳ್ಗೆ. ಈಗ್ಲು ದಿನಾ ಹೂ ತಗೊತ್ತಾಳೆ, ಆಸೆಯಿಂದ ಕಟ್ಟುತ್ತಾಳೆ, ಕನ್ನಡಿ ಮುಂದೆ ಹೋಗಿ, ತನ್ನ ಬೋಳು ತಲೆಯಲ್ಲಿ ಇರುವ ಪುಡಿಗೂದಲಿಗೆ ಮುಡಿಸಕ್ಕೆ ಹೋಗಿ ಇಷ್ಟವಾಗದೆ, ದಿನ ನಿಮಗೇ ಕೊಟ್ಟುಕಳಿಸ್ತಾಳೆ' ಎಂದು ಕಣ್ಣೀರ ಒರಸಿಕೊಂಡಿತು ಅಜ್ಜಿ.

'ನೀವೇನು ಹೇಳಲ್ವೇ ಅಜ್ಜಿ , ಮಗನಿಗೆ?'

'ನನ್ನ ಹೆಂಡತಿ ಅಂತ ಅಧಿಕಾರದಿಂದ ಬೊಗಳುತ್ತಾನೆ. ಹೆಚ್ಚಿಗೆ ಮಾತಾದ್ರೆ 'ಮನೆ ಬಿಟ್ಟು ಹೋಗು' ಅಂತಾನೆ. 'ಎಲ್ಲಿ ಹೋಗಲಿ, ಈ ವಯಸಲ್ಲಿ.'

ಏನು ಹೇಳಲೂ ತಿಳಿಯದ ಟೀಚರ್ ಅಜ್ಜಿಯ ಭುಜವನ್ನು ಹಿಡಿದು 'ಸಮಾಧಾನ ಮಾಡಿಕೊಳ್ಳಿ' ಎಂದರು.

'ಸರಿ ಬರ್‍ತೀನಿ ಟೀಚರ್' ಎಂದು ಅಜ್ಜಿ ಕಣ್ಣೀರೊಂದಿಗೆ ಮನೆಯ ಹಾದಿ ಹಿಡಿಯಿತು.

ಹಿಂದೊಮ್ಮೆ ಅಜ್ಜಿ ಕಾಯಿಲೆ ಬಿದ್ದಾಗ, ಪೂಜಾಳನ್ನು ಶಾಲೆಗೆ ಕರೆತಂದ ಅವಳ ಅಮ್ಮ, ಆ ಬೋಳು ತಲೆಗೆ ಸುತ್ತಿದ್ದ ಸೆರಗು, ನಿದ್ದೆಯಿಂದ ಎಚ್ಚೆತ್ತ ಕಂದನನ್ನು ಮತ್ತೆ ಸದ್ದಿಲ್ಲದೆ ತಟ್ಟಿ ಮಲಗುವಂತೆ ಮಾಡುವ ತಾಯಿಯಂತೆ, ಪದೇ ಪದೇ ಎದ್ದು ನಿಲ್ಲುತ್ತಿದ್ದ ತನ್ನ ತಲೆಯ ಮೇಲಿನ ಪುಡಿಕೂದಲನ್ನು ಮುಚ್ಚಲು, ಆ ಸೆರಗನ್ನು ಆಕೆಯ ಕೈಗಳು ಸರಿಪಡಿಸುತ್ತಿದ್ದದ್ದು, ಸದಾ ನೆಲವನ್ನೇ ನೋಡುತ್ತಿದ್ದ ಆ ಕಣ್ಣುಗಳು, ಎಲ್ಲವೂ ಒಮ್ಮೆಲೇ ಟೀಚರ್‌ನ ಕಣ್ಣು ಕಟ್ಟಿದವು.

ಶಾಲೆಯ ತರಗತಿಯೊಳಗಿನ ಮಕ್ಕಳ ಕೇಕೆ, ಕಮಲಾ ಟೀಚರನ್ನು ಕಣ್ಮುಂದೆ ಕಟ್ಟಿದ ಆ ದೃಶ್ಯವನ್ನು ಕದಡಿಸಿತು. ಅಳುತ್ತಾ ನಿಂತಿದ್ದ ಪೂಜಾಳ ಕಣ್ಣೊರೆಸಿ, 'ಪೂಜಾ, ಹೂ ತಂದಿಲ್ಲಾ ಅಂತ ಬೇಜಾರ?' ಎಂದು ಕೇಳಿದರು ಟೀಚರ್. ಬಿಕ್ಕಿ ಅಳುತ್ತಾ ನಿಂತಿದ್ದ ಪೂಜಾ ಹೌದೆಂದು ತಲೆ ಅಲ್ಲಾಡಿಸಿದಳು.

'ಯಾವ ಹೂ? ಅದರ ಹೆಸರೇನು? ಹೇಳು ನೋಡೋಣ' ಎಂದು ಕೇಳಿದರು. ಅಲ್ಲಿಯವರೆಗೂ ಒಂದೂ ಮಾತನಾಡದ ಪೂಜಾ, ಮೆಲ್ಲನೆ ಬಾಯಿ ತೆರೆದು, ಬಿಕ್ಕುತ್ತಾ, 'ಕನಕ–ಅಂಬರ' ಎಂದಳು.

ಟೀಚರ್ ಒಮ್ಮೆ ಅವಳನ್ನು ಬಿಗಿದಪ್ಪಿ ಮನದಲ್ಲೇ, 'ನಿಜವಾದ ಕನಕಾಂಬರ ನಿನ್ನ ತಾಯಿಯಂಥವರೇ, ಅಂಬರವನ್ನೇ ನೋಡಲು ಬಿಡದೇ 'ಕನಕ'ಳೆಂದು ಭೂಮಿಯ ಒಳಗೆ ಅಗೆದು, ಅವಳ ಇರುವಿಕೆಯನ್ನೆ ಬಚ್ಚಿಡಲೆತ್ನಿಸುತ್ತಾರೆ. ಮೂರ್ಖರು. ಭೂಮಿಯ ಒಡಲಿನಿಂದಲೇ ಬಾಯಿ ತೆರೆದು ಅಂಬರಕ್ಕೇ ಕೈಚಾಚಿ ಬರುವ ಕಾಲ ಇನ್ನು ದೂರವಿಲ್ಲ' ಎಂದು ಆ ಪುಟ್ಟ ಕೈಗಳನ್ನು ಹಿಡಿದು ತೆರೆದ ಜ್ಞಾನಭಂಡಾರದ ತರಗತಿಯ ಬಾಗಿಲ ಒಳ ನಡೆದರು.

**ನಿರ್ಮಲ ಹೆಚ್. ಎಲ್.**
W/o ಶ್ರೀ ರಾಮಕುಮಾರ್ ಎಂ. ಎಸ್.
ನಂ. ೪೭೭/ಬಿ, ೧ನೇ 'ಬಿ' ಅಡ್ಡರಸ್ತೆ, ೩ನೇ ಮುಖ್ಯರಸ್ತೆ, ಮತ್ತಿಕೆರೆ
ಬೆಂಗಳೂರು – ೫೬೦ ೦೫೪

# ನಿಜ ಹೇಳಿ...



**ಸು**ಳ್ಳರು ಸುಳ್ಳರಿಗೆ ಹೇಳದರು
ನಿಜ ಹೇಳಿ.




ಸರಕಾರಿ ಪ್ರಕಟಣೆಯಾಗಿದೆ
ನಿಜ ಹೇಳಿ.

ಮನೆಯೊಳಗೊಂದು ಸುಳ್ಳರ
ಮಾರುಕಟ್ಟೆ ಇದೆ.

ಬಾಗಿಲ ಮೇಲೆ ಬರೆದಿಹರು
ನಿಜ ಹೇಳಿ.

ಹೂವಿಲ್ಲದ ಬೊಕ್ಕೆಯಲಿ
ಸೌಹಾರ್ದವೆಂದು ಬರೆದಿಹರು.

ಬೊಕ್ಕೆಯೊಳಗೇನಿದೆ
ನಿಜ ಹೇಳಿ.

ಗಂಗಾಮಾತೆಯೇ, ಮುಳುಗಿ ಹೋದವರು
ನಮ್ಮವರಾಗಿದ್ದರು.

ದೋಣಿಯಲಿ ರಂಧ್ರ ಕೊರೆದವರಾರು
ನಿಜ ಹೇಳಿ.

ಉರ್ದು ಮೂಲ : **ಡಾ|| ರಾಹತ್ ಇಂದೋರಿ**
ಕನ್ನಡಕ್ಕೆ : **ಜಿ. ಕಲೀಂ ಬಾಷ**
ಸೋಫಿಯಾ ನಗರ, ೩ನೇ ಮೇನ್, ೩ನೇ ಕ್ರಾಸ್
ವಿದ್ಯಾನಗರ 'ಬಿ' ಬ್ಲಾಕ್, ಹರಿಹರ – ೫೭೭ ೬೦೧

## ಹೊಸ ಓದು



### ಅಚಲ ಗುರುಮಾರ್ಗ

(ಮರೆತ ದಾರಿಗಳ ಅಧ್ಯಯನ)

ಪದ್ಮಾಲಯ ನಾಗರಾಜ್

**ಪುಟ : ೧೮೬**

**ಬೆಲೆ : ರೂ. ೨೦೦**

**ಆದಿಮ ಪ್ರಕಾಶನ,** ಕೋಲಾರ.

*ಕನ್ನಡ ಹಾಗೂ ತೆಲುಗಿನ ಅಚಲ ತತ್ವಪದಗಳ ಸಂಗ್ರಹ ಕಾರರಾದ ಶ್ರೀ ಪದ್ಮಾಲಯ ನಾಗರಾಜರವರ ಕೃತಿಯಿದು. ಇದು ಅಚಲ ಪರಂಪರೆಯನ್ನು, ಅದರ ತಾತ್ವಿಕತೆಯ ಸೂಕ್ಷ್ಮ ಸಂಗತಿಗಳೊಡನೆ ಕನ್ನಡದ ಶೈಕ್ಷಣಿಕ ವಲಯಕ್ಕೆ ಪರಿಚಯಿಸುತ್ತಿರುವ ಕೃತಿ. ಅಚಲವೆನ್ನುವುದು ಒಂದು ಜೀವನ ಕ್ರಮ. ಬೌದ್ಧ ಮಧ್ಯಮ ಮಾರ್ಗವಾದ ಶೂನ್ಯತೆಯ ಅನುಸಂಧಾನವು ಅಚಲರ ಮಾರ್ಗ. ಇವರು ಜಾತಿ, ಅಸ್ಪೃಶ್ಯತೆ, ಲಿಂಗತಾರತಮ್ಯವಿಲ್ಲದ, ಮನಸ್ಸಿನ ಮೂಲೆಯಲ್ಲಿಯೂ ಏನನ್ನೂ ಮುಚ್ಚಿಟ್ಟುಕೊಳ್ಳದೆ ಬಾಳುವ ಬಹಿರಂಗಿ ಮಾರ್ಗಕಾರರು. ಆಂಧ್ರದ ನಾಗಾರ್ಜುನಕೊಂಡ, ಶ್ರೀಶೈಲಗಳಿಂದ ಕವಲೊಡೆದ ಈ ತತ್ವ ಮಾರ್ಗವು ದಕ್ಷಿಣದ ಕೆಲ ಭಾಗಗಳಲ್ಲಿಯೂ ಅನುಯಾಯಿಗಳನ್ನು ಹೊಂದಿದೆ. ನಾಗಾರ್ಜುನನ ದಶಭೂಮಿಕಾಶಾಸ್ತ್ರ ಇವರ ಆಕರ ಮೂಲವಾಗಿದೆ. ಲೋಕವನ್ನು ಗ್ರಹಿಸಬೇಕಾದ ಹತ್ತು ಹಂತಗಳಾದ ಪ್ರಮುದಿತ, ವಿಮಲ, ಪ್ರಭಾಕರಿ, ಅರ್ಚಿಷ್ಮತಿ, ಸುದುರ್ಜಯ, ಅಭಿಮುಖಿ, ದೂರಾಗಮ, ಅಚಲ, ಸಾಧುಮತಿ ಮತ್ತು ಧರ್ಮಮೇಘಗಳಲ್ಲಿ ಅಚಲವೂ ಒಂದು. ಇದರ ಆಚರಣೆ ವಿಧಾನಗಳನ್ನು ಕೃತಿಯ ಎರಡು ಭಾಗಗಳ ಅಧ್ಯಾಯಗಳಲ್ಲಿ ವಿವರಿಸಿದ್ದಾರೆ. ಅಚಲ ಗುರು ಪರಂಪರೆ ಬಗ್ಗೆ ತಿಳಿಸುತ್ತ ಅಚಲ ತತ್ವಪದಗಳನ್ನು ವಿವರಿಸುತ್ತಾ ಯಾವುದೇ ಮಾನವ ರಚನೆಗಳನ್ನು ನಂಬದೇ ಅವರು ಸಮಾಜದ ಸುಸ್ಥಿರ ಜೀವನಕ್ಕೆ ಸೇವೆ ಸಲ್ಲಿಸುತ್ತಿರುವ ಕುರಿತು ಹೇಳಿ, ದ್ವಾದಶೋಪದೇಶಗಳೊಡನೆ ಅಚಲರಗುರು ಪರಂಪರೆಯಿಂದ ಬಂದ ತತ್ವ ಪದಗಳನ್ನು ಇಟ್ಟುಕೊಂಡು ವೇದ ವೇದಾಂಗಗಳನ್ನು, ಬದುಕಿನ ಸಂಕೀರ್ಣತೆಯನ್ನು ವೈಜ್ಞಾನಿಕವಾಗಿ ವಿಮರ್ಶಿಸಿದ್ದಾರೆ.*

### ಪರಿಹಾಸ

*ಭಾರತೀ ಕಾಸರಗೋಡು*

**ಪುಟ : IV+೭೮** **ಬೆಲೆ : ರೂ. ೫೫**

**ತೇಜು ಪಬ್ಲಿಕೇಷನ್ಸ್,** ನಂ.೨೩೩, ೭ನೇ 'ಎ' ಅಡ್ಡರಸ್ತೆ, ಶಾಸ್ತ್ರಿನಗರ
ಬೆಂಗಳೂರು – ೫೬೦ ೦೨೮

*ಹಲವು ಘಟನಾವಳಿಗಳನ್ನು ಅವಲೋಕಿಸಿ ಅಲ್ಲಿ ಹುದುಗಿದ ಅಂತರಗಂಗೆಯಂತಹ ತಿಳಿಹಾಸ್ಯದ ತುಣುಕುಗಳನ್ನು ಈಚೆಗೆಳೆದು ಸಂಗ್ರಹಿಸಿದ ಪ್ರಬಂಧ ರೂಪದ ಲೇಖನಗಳು. ಸದ್ದಿಲ್ಲದೇ ಸರಿದು ಹೋಗುವ ದಿನಗಳಲ್ಲಿನ ಸಹಜ ಕೆಲಸಕಾರ್ಯಗಳಲ್ಲೇ ಹಾಸ್ಯರಸವನ್ನು ಹಿಂಡಿ ತೆಗೆದು ಉಣಬಡಿಸುವ ಅಪರೂಪದ ಕತೆಗಳಿವೆ. ನಗು–ಹಾಸ್ಯ ಎರಡೂ ಯಾರನ್ನೂ ನೋಯಿಸದ ರೀತಿಯಲ್ಲಿದ್ದು ಮನಕ್ಕೆ ಮುದ ನೀಡುವಂತಿದ್ದರೆ ಅದು ಸ್ವಾಗತಾರ್ಹವೆನಿಸುವುದು. ಅಲ್ಲಿ ವ್ಯಂಗ್ಯದ – ಪ್ರತೀಕಾರದ ಛಾಯೆಯೂ ಸುಳಿಯಕೂಡದು. ಇಲ್ಲವಾದಲ್ಲಿ ಮಹಾಭಾರತದ ದ್ರೌಪದಿಯ ನಗುವಿನಂತೆ ದೊಡ್ಡ ಕುರುಕ್ಷೇತ್ರವೇ ಆಗಿಬಿಡಬಹುದು. ಬದುಕಿನ ಹಲವಾರು ಪ್ರಸಂಗಗಳು ಲೇಖಕಿಯ ಕಣ್ಣುತಪ್ಪಿಸಿ ನಡೆಯಲು ಸಾಧ್ಯವಿಲ್ಲವೆಂಬಂತೆ ಅಲ್ಲಿನ ಹಾಸ್ಯ ಪ್ರಸಂಗಗಳು ಬುಗ್ಗೆಗಳಂತೆ ಹೊರಹೊಮ್ಮಿ ಬಂದಿವೆ. ಸಮಾಜದ ಕುಂದು ಕೊರತೆಗಳನ್ನು ನೀಗಿಸುವಷ್ಟರ ಮಟ್ಟಿಗೆ ಕೆಲವೊಮ್ಮೆ ಹಾಸ್ಯ ಸಹಕಾರಿಯಾಗಬಲ್ಲುದು. ಅದಕ್ಕೆ ವಿಡಂಬನೆ ಎಂಬ ಬೇರೆ ಹೆಸರೂ ಇದೆಯೆನ್ನಿ. ಹಿಂದೆ ನಾಟಕಗಳಲ್ಲಿ ಹಾಸ್ಯಗಾರನೆಂಬ ಒಂದು ಪಾತ್ರ ಇದ್ದೇ ಇರುತ್ತಿತ್ತು. ಆತನ ಸಂಭಾಷಣೆ ವಿಚಿತ್ರ ಆದರೂ ಡೊಂಕನ್ನು ತಿದ್ದುವ ಕೆಲಸ ಮಾಡೇ ಮಾಡುತ್ತಿತ್ತು. **"ಕುಂಬಳ ಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿನೋಡಿಕೊಂಡ"** ಎಂಬಂತೆ ಜನ ತಮ್ಮ ತಪ್ಪು ತಿದ್ದಿಕೊಳ್ಳುತ್ತಿದ್ದರು. ಕೃತಿಯು ಸ್ವಾರಸ್ಯಕರ ಸಂಗತಿಗಳನ್ನು ಪ್ರಸ್ತುತಪಡಿಸಿದೆ.*



### ರಾಣಿ ಬಗೀಚ್ (ಕಥಾ ಸಂಕಲನ)

*ಪರಶುರಾಮ ಶಿವಶರಣ*

**ಪುಟ: XII+೮೯** **ಬೆಲೆ : ರೂ. ೧೫೦**

**ನಯನಾ ಪ್ರಕಾಶನ,** ಶಿಕಾರಖಾನೆ ರೇಲ್ವೆ ಸ್ಟೇಶನ್ ಬ್ಯಾಕ್ ರೋಡ್, ವಿಜಯಪುರ.

*ಒಳಿತು – ಕೆಡುಕುಗಳ ನೇರ ಸಂಘರ್ಷದಂತೆ ಕಂಡುಬಂದಿರುವ ಈ ಕಥೆಗಳೆಲ್ಲ ಈ ಸಮಾಜದಲ್ಲಿನ ನಮ್ಮೆಲ್ಲರ ದಿನನಿತ್ಯದ ಗೋಳುಗಳೇ ಆಗಿವೆ. ಕ್ಷುಲ್ಲಕ ಕಾರಣಗಳಿಗಾಗಿ ನಡೆಯುವಂಥ ದೊಡ್ಡ ದೊಡ್ಡ ಗಲಭೆಗಳು ಅಮಾಯಕರನ್ನು ಬಲಿ ತೆಗೆದುಕೊಳ್ಳುತ್ತವೆ. ಕೋಪ – ದ್ವೇಷ – ಜಾತಿ ಪ್ರೇಮ – ಅಸಹನೆ – ಮತಾಂಧತೆ, ಅದಕ್ಕಾಗಿ ಬಡಿದಾಟ – ಕೊಲೆ! ಇವೆಲ್ಲ ಒಂದು ಕಡೆಗಾದರೆ ಅವುಗಳ ದುಷ್ಫಲಗಳೆಲ್ಲ ಬೇರೊಂದು ವರ್ಗದ ಅದಕ್ಕೆ ಸಂಬಂಧವೇ ಇಲ್ಲದ ಮುಗ್ಧ ಜನಗಳ ಮೇಲೆ. ನಡೆಯುವುದೇ ಬೇರೆ – ವರದಿಯಾಗುವುದೇ ಬೇರೆ – ಶಿಕ್ಷೆ ಇನ್ನಾವುದೋ ಜನ ಸಾಮಾನ್ಯರಿಗೆ! ನ್ಯಾಯ – ಅನ್ಯಾಯಕ್ಕೆ ಕೂದಲೆಳೆಯಷ್ಟೇ ಅಂತರ. ಶೋಷಕರು – ಶೋಷಿತರ ಹಸಿ ಬಿಸಿ ಕಥಾನಕಗಳೇ ಇಲ್ಲಿ ಪರಿಚಯಗೊಂಡಿವೆ. ಇನ್ನು ಜನರ ಕಷ್ಟ ಕೋಟಲೆಗಳನ್ನು ಬಂಡವಾಳ ಮಾಡಿಕೊಂಡು ತಮ್ಮ ಹೊಟ್ಟೆಪಾಡು ನೋಡಿಕೊಳ್ಳುವ ಬಾಬಾ – ಜೋತಿಷಿಗಳ ಬಗೆಗೂ ಎಚ್ಚರಿಕೆಯ ಸಂದೇಶವೊಂದು ಇಲ್ಲಿದೆ. ನ್ಯಾಯಕ್ಕಾಗಿ ನಡೆಯುವ ಹೋರಾಟಗಳನ್ನು ಹತ್ತಿಕ್ಕುವ ಇಂದಿನ ಸಂದರ್ಭಗಳಲ್ಲಿ ಇಲ್ಲಿನ ಕಥೆಗಳು ಕಣ್ತೆರೆಸುವ ಕೆಲಸ ಮಾಡುತ್ತಿವೆ. ದಿನ ದಿನವೂ –ಕ್ಷಣ ಕ್ಷಣವೂ ನಡೆಯುತ್ತಲೇ ಇರುವ ವ್ಯಥೆಗಳೆಲ್ಲ ಕಥೆಗಳಾಗಿ ರೂಪುಗೊಂಡಿವೆ.*

– **ಇಂದಿರಾ ಕುಮಾರಿ,** *ಯಶವಂತಪುರ, ಬೆಂಗಳೂರು – ೫೬೦ ೦೨೨*

### ಬುದ್ಧನ ನಿಜವಾದ ವೈರಾಗ್ಯ

*ಎಚ್. ಎಸ್. ಬೇನಾಳ*

**ಪುಟ : ೧೨೮** **ಬೆಲೆ : ರೂ. ೧೨೦**

**ಸಹನಾ ಪ್ರಕಾಶನ,** ಕಲಬುರಗಿ.

*ಪ್ರಗತಿಪರ ಚಿಂತಕರಾದ ಶ್ರೀ ಎಚ್. ಎಸ್. ಬೇನಾಳರ ಹದಿನಾಲ್ಕನೇ ಕೃತಿ 'ಬುದ್ಧನ ನಿಜವಾದ ವೈರಾಗ್ಯ.' ಕ್ರಿ. ಪೂ. ೬ನೇ ಶತಮಾನದಲ್ಲಿ ಜನಿಸಿದ ಗೌತಮ ಬುದ್ಧರು ಬುದ್ಧಧಮ್ಮದ ಪ್ರವರ್ತಕರು. ಬುದ್ಧಧಮ್ಮ ಅನೇಕ ರಾಷ್ಟ್ರಗಳ ಉಜ್ವಲ ಇತಿಹಾಸಕ್ಕೆ ಕಾರಣೀಭೂತವಾಗಿ ವಿಶ್ವಧರ್ಮದ ಸ್ಥಾನಮಾನ ಹೊಂದಿದೆ. ಬಾಬಾ ಅಂಬೇಡ್ಕರರು ತಮ್ಮ ಕೃತಿ 'ಬುದ್ಧ ಮತ್ತು ಆತನ ಧಮ್ಮ'ದಲ್ಲಿ ಬುದ್ಧನ ವೈರಾಗ್ಯಕ್ಕೆ ಕಾರಣಗಳನ್ನು ಸಂಶೋಧಿಸಿ; ಅದಕ್ಕೆ ಅನ್ಯ ಕಾರಣಗಳನ್ನು ನೀಡಿ ದೈವೀಕರಣಗೊಳಿಸುತ್ತಿರುವ ಪ್ರಕ್ರಿಯೆಯನ್ನು ಆಧಾರ ಸಮೇತವಾಗಿ ಅಲ್ಲಗಳೆಯುತ್ತಾರೆ. ಇದನ್ನು ಆಧಾರವಾಗಿರಿಸಿಕೊಂಡು ಈ ಕೃತಿಯಲ್ಲಿ ಬುದ್ಧನ ವೈರಾಗ್ಯಕ್ಕೆ ನಿಜವಾದ ಕಾರಣಗಳನ್ನು ಚರ್ಚಿಸಿದ್ದಾರೆ. ಕೃತಿಯ ಮೊದಲ ಭಾಗದಲ್ಲಿ ಆಗ ಉತ್ತರ ಭಾರತದಲ್ಲಿದ್ದ ೧೬ ಸಣ್ಣ ಗಣರಾಜ್ಯಗಳ ಚಿತ್ರಣ ಅವುಗಳ ವಂಶಾಡಳಿತ ಹಾಗೂ ಪ್ರಜಾಪ್ರತಿನಿಧಿ ಆಡಳಿತದ ಗಣರಾಜ್ಯಗಳು, ಸಿದ್ಧಾರ್ಥನ ವಂಶಾವಳಿ, ಆಗಿನ ಸಾಮಾಜಿಕ ಧಾರ್ಮಿಕ ಪರಿಸರದ ಕುರಿತು ವಿವರವಾಗಿ ತಿಳಿಸಿಕೊಡುತ್ತಾರೆ. ನಂತರದ ಅಧ್ಯಾಯಗಳಲ್ಲಿ ಲುಂಬಿನಿ ವನದಲ್ಲಿ ಕ್ರಿ. ಪೂ. ೫೬೩ರಲ್ಲಿ ವೈಶಾಖ ಪೌರ್ಣಿಮೆಯಂದು ಸಿದ್ಧಾರ್ಥನ ಜನನ ಸಂದರ್ಭದ ಶುಭ ಚಿಹ್ನೆಗಳ ವರ್ಣನೆ, ಅಸಿತ ಮಹಾಮುನಿಯ ಭೇಟಿ, ಮಗುವಿನ ಉಜ್ವಲ ಭವಿಷ್ಯದ ಕುರಿತು ತಿಳಿಸುವುದು ಚಿತ್ರವತ್ತಾಗಿ ವರ್ಣಿತವಾಗಿದೆ. ನಂತರ ಶಾಕ್ಯರ ಕುಲಾಚರಣೆಗಳು ಆಡಳಿತದ ನಿಯಮ ನಿಬಂಧನೆಗಳು ನಿರ್ಣಯಗಳನ್ನು ವಿವರಿಸುತ್ತಾರೆ. ಕೊನೆಯ ಅಧ್ಯಾಯದಲ್ಲಿ ಸಿದ್ಧಾರ್ಥನ ಪರಿವ್ರಾಜಕ ಅರ್ಥಾತ್ ವೈರಾಗ್ಯಕ್ಕೆ ಕಾರಣವಾಗುವ ರೋಹಿಣಿ ನದಿ ಜಲವಿವಾದದ ವಿವರಗಳಿವೆ. ಇಲ್ಲೀ ತನಕ ತಿಳಿದಿದ್ದ ವೃದ್ಧ, ರೋಗಿ ಹಾಗೂ ಸತ್ತ ಹೆಣ ಕಂಡ ಸಿದ್ಧಾರ್ಥ ವೈರಾಗ್ಯದೆಡೆ ನಡೆದ ಎಂಬ ಕತೆಗಳನ್ನು ಬೇನಾಳರ ಈ ಕೃತಿ ಅಂಬೇಡ್ಕರರ ಬರಹಗಳ ಆಧಾರದ ಮೇಲೆ ತಿರಸ್ಕರಿಸುತ್ತದೆ. ಜೀವಪರ ಪ್ರಜಾಸತ್ತಾತ್ಮಕ ಮೌಲ್ಯಗಳಿಗಾಗಿ ಬುದ್ಧನು ವೈರಾಗ್ಯವನ್ನು ಅಪ್ಪಬೇಕಾದ ಸಂಗತಿಗಳು ಚಕಿತಗೊಳಿಸುತ್ತವೆ. ಕೃತಿಯ ಎರಡನೆ ಭಾಗದಲ್ಲಿ ಭಾರತದಲ್ಲಿನ ಬೌದ್ಧ ಸ್ಥಳಗಳನ್ನು ಕುರಿತಂತೆ ಮಾಹಿತಿ ನೀಡಲಾಗಿದೆ ಮತ್ತು ಕರ್ನಾಟಕದಲ್ಲಿ ಬೌದ್ಧ ಧರ್ಮ ಬೆಳವಣಿಗೆ ಕುರಿತಂತೆಯೂ ಸವಿವರವಾಗಿದ್ದು ಕೃತಿ ಸಂಗ್ರಹ ಯೋಗ್ಯವಾಗಿದೆ. ಬೌದ್ಧ ಧರ್ಮದ ಕುರಿತಂತೆ ಆಧಾರ ಪೂರ್ವಕವಾದ ಗ್ರಂಥವಾಗಿದೆ.*

– **ಟಿ. ಪಿ. ಉಮೇಶ್ ಚಿತ್ರದುರ್ಗ,** *ಸಹಶಿಕ್ಷಕರು, ಚಂದ್ರವಳ್ಳಿನಗರ, ಚಿತ್ರದುರ್ಗ – ೫೭೭ ೫೦೧*

# ಕುಡುಗೋಲಿಗೂ ಪ್ರಶ್ನಾರ್ಥಕ ಚಿಹ್ನೆಗೂ ಜಾಸ್ತಿ ವ್ಯತ್ಯಾಸವಿಲ್ಲ...



**ಮ. ಶ್ರೀ. ಮುರಳಿ ಕೃಷ್ಣ**

**ತೊ**ಂಬತ್ತನಾಲಕ್ಕು ವರ್ಷಗಳ ಕಾಲ ಜೀವಿಸಿದ್ದ ಕಲೈಙ್ಞರ್ ಕರುಣಾನಿಧಿ ಮೊದಲು ತಮಿಳು ಸಿನಿಮಾರಂಗಕ್ಕೆ ೧೯೪೦ರ ದಶಕದ ಕೊನೆಯಲ್ಲಿ ಪಾದಾರ್ಪಣೆ ಮಾಡಿದರು. ಕೊಯಂಬತ್ತೂರು ಮೂಲದ ಜ್ಯೂಪಿಟರ್ ಪಿಕ್ಚರ್ಸ್‌ನ, ಎ ಎಸ್ ಎ ಸ್ವಾಮಿ ನಿರ್ದೇಶನದ, ಎಂಜಿಆರ್ ನಟಿಸಿದ 'ರಾಜಕುಮಾರಿ' ಎಂಬ ತಮಿಳು ಚಲನಚಿತ್ರಕ್ಕೆ ಮೊದಲ ಬಾರಿ ಚಿತ್ರಕಥೆಯನ್ನು ಬರೆದರು. ಇದೇ ಕಂಪನಿಯ ಇನ್ನೆರಡು ಚಲನಚಿತ್ರಗಳಿಗೆ ಅವರು ಕೆಲಸ ಮಾಡಿದರು. ೧೯೪೯ರ ಕೊನೆಯಲ್ಲಿ ಸೇಲಂನಲ್ಲಿದ್ದ ಮಾರ್ಡನ್ ಥಿಯೇಟರ್ಸ್ ಸ್ಟುಡಿಯೊ ತಯಾರಿಸಿದ 'ಮಂತ್ರಿಕುಮಾರಿ' (ಎಂಜಿಆರ್ ನಾಯಕನಟನಾಗಿ ನಟಿಸಿದ್ದ) ಚಲನಚಿತ್ರಕ್ಕೆ ಚಿತ್ರಕಥೆಯನ್ನು ಬರೆದರು. ಆದರೆ ೧೯೫೨ರಲ್ಲಿ ತೆರೆಕಂಡ 'ಪರಾಸಕ್ತಿ' ತಮಿಳು ಚಲನಚಿತ್ರರಂಗದಲ್ಲಿ ಹೊಸ ಸಂಚಲನವನ್ನು ಉಂಟುಮಾಡಿತು; ಟ್ರೆಂಡ್‌ಸೆಟರ್ ಆಯಿತು. ಇದಕ್ಕೆ ಚಿತ್ರಕಥೆ ಬರೆದಿದ್ದ ಕರುಣಾನಿಧಿ, ದ್ರಾವಿಡ ರಾಜಕೀಯದ ವಿಚಾರಧಾರೆಯನ್ನು ಪರಿಣಾಮಕಾರಿಯಾಗಿ ಬಿಂಬಿಸಿದರು. ಈ ಚಲನಚಿತ್ರ ಬ್ರಾಹ್ಮಣ್ಯವನ್ನು ಖಂಡನೆಗೆ ಗುರಿಮಾಡಿತು. ಇದರಿಂದ ಕುಪಿತಗೊಂಡ ಉಚ್ಚಜಾತಿಯ ಹಿಂದೂಗಳು ಪ್ರತಿಭಟಿಸಿದರು. ಸೆನ್ಸಾರ್ ಬೋರ್ಡ್‌ನಿಂದ ತೊಂದರೆಗಳಿಗೆ ಒಳಗಾಯಿತು. ಕೊನೆಗೆ ನ್ಯಾಯಾಲಯದ ಮಧ್ಯಪ್ರವೇಶದಿಂದ ಚಲನಚಿತ್ರ ತೆರೆಕಂಡಿತು. ನಂತರ ಅದು ಬ್ಲಾಕ್‌ಬಸ್ಟರ್ ಚಲನಚಿತ್ರವಾಯಿತು. ಈ ಚಲನಚಿತ್ರದ ಮೂಲಕ ಶಿವಾಜಿ ಗಣೇಶನ್ ಮತ್ತು ಎಸ್. ಎಸ್. ರಾಜೇಂದ್ರನ್ ಎಂಬ ನಟರು ಪರಿಚಯಿಸಲ್ಪಟ್ಟರು. ಮುಂದೆ ಅವರೀರ್ವರು ಖ್ಯಾತನಟರಾದರು.

ಇದೇ ಕಾಲಘಟ್ಟದಲ್ಲಿ ಕರುಣಾನಿಧಿಯವರ ಲೇಖನಿಯ ಶಕ್ತಿಹೊಂದಿದ್ದ 'ಪಣಮ್'(೧೯೫೨), 'ಮನೋಹರ'(೧೯೫೪), 'ತಂಗರತ್ನಂ'(೧೯೬೦) ಚಲನಚಿತ್ರಗಳು ವೀಕ್ಷಕರ ಗಮನವನ್ನು ವಿಶೇಷವಾಗಿ ಸೆಳೆದವು. ಇವುಗಳಲ್ಲಿ ಸಾಮಾಜಿಕ ಪಿಡುಗುಗಳ ವಿರುದ್ಧ ಗಟ್ಟಿ ದನಿಗಳಿದ್ದವು. ಹಾಗೆಯೇ ಅಸ್ಪೃಶ್ಯತೆಯ ನಿವಾರಣೆ, ಸ್ವಗೌರವ ವಿವಾಹ, ಜಮೀನ್ದಾರಿ ಪದ್ಧತಿಯ ರದ್ದತಿ, ವಿಧವಾ ಪುನರ್ವಿವಾಹ, ಮತಧಾರ್ಮಿಕ ಡಾಂಭಿಕತನ ಮುಂತಾದ ವಿಷಯಗಳನ್ನು ದಾಟಿಸಲಾಗಿತ್ತು. ಸುಮಾರು ೭೦ಕ್ಕೂ ಹೆಚ್ಚಿನ ಚಲನಚಿತ್ರಗಳಿಗೆ ಅವರು ಚಿತ್ರಕಥೆ/ಸಂಭಾಷಣೆಗಳನ್ನು ಬರೆದರು. ೨೦೧೧ರಲ್ಲಿ ತೆರೆಕಂಡ 'ಪೊನ್ನಾರ್ ಶಂಕರ್' ಅವರು ಚಿತ್ರಕಥೆ ರಚಿಸಿದ ಕೊನೆಯ ಚಲನಚಿತ್ರವಾಗಿತ್ತು. ಸುಮಾರು ಮೂರು ವರ್ಷಗಳ ಹಿಂದೆ ಅವರು ರಾಮಾನುಜಾಚಾರ್ಯರ ಬಗೆಗೆ ಪ್ರಸಾರವಾದ, ೪೩೩ ಕಂತುಗಳಿದ್ದ ಟಿವಿ ಸೀರಿಯಲ್‌ಗೆ ತಮ್ಮ ಲೇಖನಿಯನ್ನು ಬಳಸಿದ್ದರು! ತಮಿಳುನಾಡಿನಲ್ಲಿ ರಾಜಕಾರಣಕ್ಕೂ ಚಲನಚಿತ್ರರಂಗಕ್ಕೂ ಹತ್ತಿರದ, ಭಾವನಾತ್ಮಕ ನಂಟು. ಇದು ಬೆಳೆದ ಪಥದಲ್ಲಿ ಕರುಣಾನಿಧಿ ಪ್ರಮುಖರಾಗಿದ್ದರು.

ಆ ಕಾಲದಲ್ಲಿ ತೆರೆಕಂಡ 'ನಾಮ್' ಎಂಬ ಚಲನಚಿತ್ರ ದುಡಿಯುವ ವರ್ಗದ ಆಶೋತ್ತರಗಳನ್ನು ಹೊಂದಿತ್ತು. ಅವರು ತಮ್ಮ ಒಂದು ಲೇಖನದಲ್ಲಿ ಆ ಚಲನಚಿತ್ರದಲ್ಲಿನ ತಮ್ಮ ಒಂದು ಸಂಭಾಷಣೆಯ ಬಗೆಗೆ ಪ್ರಸ್ತಾಪಿಸಿದ್ದಾರೆ. ಈ ಸಂಭಾಷಣೆ, ತಮ್ಮ ಯೌವನದಲ್ಲೇ ಕಮ್ಯುನಿಸ್ಟ್ ಚಳವಳಿಯ ಉನ್ನತ ಆದರ್ಶಗಳು ಹೇಗೆ ತಮ್ಮನ್ನು ಪ್ರಭಾವಿಸಿದವೆಂಬುದರ ದ್ಯೋತಕ ಎಂದು ದಾಖಲಿಸಿದ್ದಾರೆ. ಆ ಚಲನಚಿತ್ರದಲ್ಲಿ, ಎಂಜಿಆರ್, ದುಡಿಯುವ ಕಾರ್ಮಿಕರ ಪರವಾಗಿ ಜಮೀನುದಾರನ ಬಳಿ ವಾಗ್ವಾದವನ್ನು ನಡೆಸುತ್ತಾರೆ. ಇದರಿಂದ ಕುಪಿತನಾಗುವ ಜಮೀನುದಾರ ಎಂಜಿಆರ್‌ಗೆ, "ಎಷ್ಟು ಧೈರ್ಯ ನಿನಗೆ... ನನಗೇ (ಆಡುವ ಮಾತುಗಳಿಗೆ) ಆಶ್ಚರ್ಯ ಸೂಚಕ ಚಿಹ್ನೆ ಇರಿಸುತ್ತೀಯಾ?" ಎಂದು ದಬಾಯಿಸುತ್ತಾನೆ. ಇದಕ್ಕೆ ಪ್ರತಿಕ್ರಿಯಿಸಿ, "ಹೌದು ಸ್ವಾಮಿ... ಆಶ್ಚರ್ಯಸೂಚಕ ಚಿಹ್ನೆಯನ್ನು ಸ್ವಲ್ಪ ತಿರುಚಿದರೆ, ಅದು ಪ್ರಶ್ನಾರ್ಥಕ ಚಿಹ್ನೆಯಾಗುತ್ತೆ. ಕುಡುಗೋಲಿಗೂ ಪ್ರಶ್ನಾರ್ಥಕ ಚಿಹ್ನೆಗೂ ಜಾಸ್ತಿ ವ್ಯತ್ಯಾಸವಿಲ್ಲ



*ಕರುಣಾನಿಧಿ ಬರೆದಿರುವ ಚಿತ್ರಕಥೆಯ 'ಪರಾಸಕ್ತಿ' ಚಲನಚಿತ್ರದ ಒಂದು ದೃಶ್ಯ.*

ಎಂಬುದನ್ನು ನೀವು ಮನಗಾಣಬೇಕು...” ಎಂದು ಎಂಜಿಆರ್ ಅಂಜಿಕೆಯಿಲ್ಲದೆ ಉತ್ತರಿಸುತ್ತಾರೆ!

‘ತಾಯ್ ಇಲ್ಲ ಪಿಳ್ಳೈ’ ಎಂಬ ಚಲನಚಿತ್ರದ ಪತಂಜಲಿ ಶಾಸ್ತ್ರಿ ಪಾತ್ರದ ಮೂಲಕ ಅವರು ನಮ್ಮ ಸಮಾಜದಲ್ಲಿ ಆಳವಾಗಿ ಬೇರೂರಿರುವ ಜಾತೀಯ ಭಾವನೆಗಳು, ತುಕ್ಕುಹಿಡಿದ ಕಟ್ಟಳೆಗಳು–ಆಚರಣೆಗಳು, ಮೌಢ್ಯ ಸಂಪ್ರದಾಯಗಳು ಮಾನವನ ಮಾನಸಿಕ ವಲಯದಲ್ಲಿ ತಲೆತಲಾಂತರಗಳಿಂದ ಉಳಿದು ಕೊಂಡಿರುವುದನ್ನು ಗಮನೀಯ ರೀತಿಯಲ್ಲಿ ದಾಟಿಸುತ್ತಾರೆ.

ತಮಿಳು ಚಲನಚಿತ್ರರಂಗಕ್ಕೆ ಬರುವ ಮೊದಲು ಅವರು ರಂಗಭೂಮಿಯಲ್ಲಿ ತಮ್ಮ ಛಾಪನ್ನು ಮೂಡಿಸಿದ್ದರು. ಅವರ ನಾಟಕಗಳು ತೀಕ್ಷ್ಣ ಚತುರೋಕ್ತಿ, ಜಾಣ್ಮೆಯ ಕಥಾನಿರೂಪಣೆ, ಶಕ್ತಿಶಾಲಿ ರಾಜಕೀಯ ವಿಚಾರಧಾರೆಗಳ ಪ್ರತಿಪಾದನೆ ಹಾಗೂ ಗಟ್ಟಿ ಸಂಭಾಷಣೆಗಳಿಗೆ ಹೆಸರುವಾಸಿಯಾಗಿದ್ದವು. ಪೆರಿಯಾರ್‌ರ ದ್ರಾವಿಡ ಕಳಗಂ ಪಕ್ಷದಲ್ಲಿ ಸಕ್ರಿಯವಾಗಿದ್ದರೂ, ಅವರು ನಾಟಕಗಳನ್ನು ಬರೆಯುತ್ತಿದ್ದರು ಹಾಗೂ ಕೆಲವೊಂದು ಪಾತ್ರಗಳಲ್ಲಿ ನಟಿಸುತ್ತಿದ್ದರು. ಅವರು ‘ಪಳನಿಯಪ್ಪ’ ಎಂಬ ತಮ್ಮ ಪ್ರಥಮ ನಾಟಕವನ್ನು ೧೯೪೦ರಲ್ಲಿ ಬರೆದು ಅದನ್ನು ತಿರುವಾರೂರಿನಲ್ಲಿ ರಂಗಪ್ರಸ್ತುತಿಪಡಿಸಿದರು. ಇದನ್ನು ತಮಿಳುನಾಡು ತಮಿಳು ವಿದ್ಯಾರ್ಥಿ ಸಂಘದ ನಿಧಿಗಾಗಿ ಪ್ರದರ್ಶಿಸಿದರು. ಇದಕ್ಕೆ ತಗುಲಿದ ವೆಚ್ಚ ರೂ. ೨೦೦/–. ಆದರೆ ಜೋರಾದ ಮಳೆ ಬಂದಿದ್ದರಿಂದ, ಟಿಕೆಟ್‌ಗಳ ಮಾರಾಟದಿಂದ ಬರೀ ರೂ. ೮೦/– ಸಂಗ್ರಹಗೊಂಡಿತು ಎಂದು ಕರುಣಾನಿಧಿ ತಮ್ಮ ಒಂದು ಪ್ರಬಂಧದಲ್ಲಿ ತಿಳಿಸುತ್ತಾರೆ. ನಂತರ ನಾಗೈ ದ್ರಾವಿಡ ಕಲಾವಿದರ ಸಂಘ ಈ ನಾಟಕ ಪ್ರದರ್ಶನದ ಹಕ್ಕುಗಳನ್ನು ರೂ. ೧೦೦/–ಕ್ಕೆ ಖರೀದಿಸಿತು! ಈ ನಾಟಕವನ್ನು ‘ಶಾಂತಾ’ ಎಂದು ಪುನರ್ನಾಮಕರಣ ಮಾಡಿತು. ಮುಂದೆ ೧೯೮೦ರ ದಶಕದ ಕೊನೆಯ ವರ್ಷಗಳಲ್ಲಿ ‘ನಚ್ಚುಕೊಪ್ಪೈ’ (‘ವಿಷದ ಬಟ್ಟಲು’) ಎಂಬ ಹೆಸರಿನಲ್ಲಿ ಪ್ರದರ್ಶನಗೊಂಡಿತು.

‘ಮಂತ್ರಿ ಕುಮಾರಿ’ (೧೯೫೦) ಎಂಬ ಪ್ರಸಿದ್ಧ ತಮಿಳು ಚಲನಚಿತ್ರ ಕರುಣಾನಿಧಿಯವರ ಅದೇ ಹೆಸರಿನ ನಾಟಕವನ್ನು ಆಧರಿಸಿತ್ತು. ೧೯೪೦ರ ದಶಕದ ಮೊದಲ ವರ್ಷಗಳಲ್ಲಿ ಅದು ಪ್ರದರ್ಶನಗೊಂಡಿತ್ತು. ತಮಿಳಿನ ಪುರಾತನ ಮೇರು ಕೃತಿ ‘ಕುಂಡಲಕೇಸಿ’ಯ ಒಂದು ಘಟನೆಯನ್ನು ಆಧರಿಸಿ, ಕರುಣಾನಿಧಿ ಈ ನಾಟಕವನ್ನು ದೇವಿ ಥಿಯೇಟರ್ ಗ್ರೂಪ್‌ಗಾಗಿ ಬರೆದರು. ಮೊದಲು ಅದು ತಿರುವಾರೂರಿನಲ್ಲಿ ನಂತರ ಕುಡುನ್ತಾಯ್‌ನಲ್ಲಿ ಪ್ರದರ್ಶನಗೊಂಡಿತು. ಅವರು ತಮಿಳಿನ ರಂಗಭೂಮಿ ಮತ್ತು ಚಲನಚಿತ್ರರಂಗದ ಖ್ಯಾತ ನಟ ಎಂ ಆರ್ ರಾಧಾ ಅವರ ನಾಟಕ ತಂಡಕ್ಕೆ ‘ತೂಕು ಮೇಡೈ’ (‘ಗಲ್ಲು ವೇದಿಕೆ’) ಎಂಬ ವಿವಾದಾಸ್ಪದ ನಾಟಕವನ್ನು ಬರೆದರು. ಅದರಲ್ಲಿದ್ದ ‘ಪಾಂಡಿಯನ್’ ಎಂಬ ಪಾತ್ರವನ್ನು ಅವರೇ ನಿರ್ವಹಿಸಿದರು. ಅದರಲ್ಲಿ ಸಂಚಲನಗೊಳಿಸುವ ಸಂಭಾಷಣೆಗಳು ಹಾಗೂ ಬಲಶಾಲಿ ನಿರೂಪಣೆಗಳಿದ್ದವು. ಸಮಾಜದಲ್ಲಿನ ಅಸಮಾನತೆಗಳು ಅದರಲ್ಲಿ ಬಿಂಬಿಸಲ್ಪಟ್ಟಿದ್ದವು. ಆದರೆ ಅದನ್ನು ಸ್ವತಂತ್ರ ಭಾರತದ ಸರ್ಕಾರ ನಿರ್ಬಂಧಿಸಿತು.

**ಅಧಿವೇಶನಕ್ಕೆ ಹೋಗದ ಶಾಸಕರು**



**ಚಾಕಲೇಟ್ ಆಸೆ ತೋರಿಸಿ ಸ್ಕೂಲ್‌ಗೆ ನಿನ್ನ ಕಳಸಿದಂತೆ, ಇವರಿಗೂ ಏನಾದ್ರೂ ಆಮಿಷ ತೋರಿಸಿ ಅಧಿವೇಶನಕ್ಕೆ ಕಳಸೋಣ ಬಿಡು!**

ತಮಿಳು ಸಾಹಿತ್ಯಕ್ಕೆ ಅವರು ಅನುಪಮ ಕೊಡುಗೆಗಳನ್ನು ನೀಡಿದರು. ಕಾವ್ಯಗಳು, ಪತ್ರಗಳು, ಕಾದಂಬರಿಗಳು (ಐತಿಹಾಸಿಕವೂ ಸೇರಿದಂತೆ), ಜೀವನ ಚರಿತ್ರೆಗಳು, ನಾಟಕಗಳು ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಅವರು ತಮ್ಮ ಸೃಜನಶೀಲತೆಯನ್ನು ಅನಾವರಣಗೊಳಿಸಿದರು. ಗದ್ಯ / ಪದ್ಯ ಇವೆರಡರಲ್ಲೂ ಅವರ ಕೃತಿಗಳ ಸಂಖ್ಯೆ ನೂರನ್ನು ದಾಟುತ್ತದೆ! ಪೌರಾಣಿಕ / ಐತಿಹಾಸಿಕ ಚಲನಚಿತ್ರಗಳೇ ಹೆಚ್ಚಾಗಿ ತೆರೆಕಾಣುತ್ತಿದ್ದ ಕಾಲದಲ್ಲಿ, ಸಾಮಾಜಿಕ ಕಥಾವಸ್ತುಗಳುಳ್ಳ ಪರಂಪರೆಯನ್ನು ತಮಿಳು ಚಲನಚಿತ್ರರಂಗದಲ್ಲಿ ಒಂದರ್ಥದಲ್ಲಿ ನಾಂದಿ ಹಾಡಿದ್ದು ಕರುಣಾನಿಧಿ ಎನ್ನಬಹುದು.

ರಾಜಕಾರಣಿಗಳಲ್ಲಿ ಸಾಹಿತ್ಯ, ಸಂಸ್ಕೃತಿ, ಕಲೆಗಳಲ್ಲಿ ಆಸಕ್ತಿಯಿರುವವರ ಸಂಖ್ಯೆ ಕಡಿಮೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಆದರೆ ಕರುಣಾನಿಧಿ ಈ ಕ್ಷೇತ್ರಗಳಲ್ಲಿ ದಾಖಿಸಲ್ಪಡಬೇಕಾದ ಕೊಡುಗೆಗಳನ್ನು ನೀಡಿದ್ದಾರೆ. ತಮಿಳು ಚಲನಚಿತ್ರರಂಗದ ಖ್ಯಾತ ಖಳ/ಪೋಷಕ ನಟರಾಗಿದ್ದ ಎಂ ಆರ್ ರಾಧ ‘ಕಲೈಜ್ಞರ್’ (ಕಲೆಗಳ ವಿದ್ವಾಂಸ) ಎಂಬ ಬಿರುದನ್ನು ಅವರಿಗೆ ನೀಡಿದ್ದರು. ಅದಕ್ಕೆ ತಕ್ಕಂತಿದ್ದರು ಕರುಣಾನಿಧಿ. ಹೀಗೆ ಅವರು ಸಿನಿಮಾ ಮತ್ತು ಸಾಹಿತ್ಯ ನಿಧಿಯೂ ಆಗಿದ್ದರು.

*(ಆಧಾರ : ಹಲವು ಮೂಲಗಳು)*

**ಮ. ಶ್ರೀ. ಮುರಳಿ ಕೃಷ್ಣ**
ನಂ ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು – ೫೬೦ ೦೬೧

## ಓದುಗರಲ್ಲೊಂದು ವಿಶೇಷ ಮನವಿ

‘ಹೊಸತು’ ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ಪಾವತಿಸಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ ‘ಹೊಸತು’ ಪತ್ರಿಕೆಯನ್ನು ಉಚಿತವಾಗಿ ಕಳಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು ‘ಹೊಸತು’ ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

*– ಪ್ರಕಾಶಕ*

# ಹವ್ಯಾಸಿ ನಾಟಕರಂಗದ ಅಪೂರ್ವ ಕಲಾವಿದ

# ಬಿ. ಎಸ್. ನಾರಾಯಣರಾವ್



**ಈ**ಗ್ಗೆ ಸರಿಯಾಗಿ ಒಂದು ನೂರು ವರುಷಗಳ ಹಿಂದಿನ ಪ್ರಸಂಗವಿದು. ೧೯೧೮ ಸೆಪ್ಟೆಂಬರ್ ತಿಂಗಳ ಕೊನೆಯ ವಾರದಲ್ಲೊಂದು ದಿನ. ಬೆಂಗಳೂರಿನ ಬಿ. ವಿ. ಸುಬ್ಬರಾಯರ ಮನೆಯಲ್ಲಿ ಸಡಗರ, ಸಂಭ್ರಮ. ಅಂದು ವಿಶ್ವಕವಿಯೆಂದು ಖ್ಯಾತಿ ಪಡೆದ ರವೀಂದ್ರನಾಥ ಟಾಗೋರರು ಅವರ ಮನೆಗೆ ಬರುವವರಿದ್ದರು.

ಹಾಗೆ ನೋಡಿದರೆ, ಸುಬ್ಬರಾಯರ ಮನೆಗೆ ವಿಶೇಷ ಅತಿಥಿಗಳು ಬರುವುದೇನೂ ಅಪೂರ್ವದ ವಿಷಯವಲ್ಲ. ವೀಣೆ ಶೇಷಣ್ಣನವರಂಥ ವೈಣಿಕ ವಿದ್ವಾಂಸರಿರಲಿ, ಮಿರ್ಜಾ ಇಸ್ಮಾಯಿಲರಂಥ ದಿವಾನರಿರಲಿ, ಗೋದ್ರೆಜ್‌ರಂಥ ವ್ಯಾಪಾರೋದ್ಯಮಿ ಇರಲಿ, ಬೆಂಗಳೂರಿಗೆ ಬಂದಾಗಲೆಲ್ಲ ಸುಬ್ಬರಾಯರ ಮನೆಗೂ ಬಂದು ಹೋಗುವುದು ವಾಡಿಕೆ. ಇಂತಿಂಥ ದೊಡ್ಡವರೆಲ್ಲ ಸ್ನೇಹಸಂಪರ್ಕದಲ್ಲಿದ್ದಾರೆಂದ ಮೇಲೆ ಸುಬ್ಬರಾಯರೇನು ಸಾಮಾನ್ಯರೇ? ಗೋದ್ರೆಜ್ ಕಂಪೆನಿಯಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸಿದ್ದ ಸುಬ್ಬರಾಯರು ಮುಂದೆ ಬೆಂಗಳೂರಿನಲ್ಲಿ ಪ್ರಥಮವಾಗಿ ಇಂಡಿಯನ್ ಕೋ–ಆಪರೇಟಿವ್ ಸೊಸೈಟಿಯನ್ನು ಸ್ಥಾಪಿಸಿದ ಹಿರಿಮೆಗೆ ಪಾತ್ರರಾದವರು; ವಜ್ರ, ಪಚ್ಚೆ, ಕೆಂಪು ಮತ್ತಿತರ ಹರಳುಗಳ ವ್ಯಾಪಾರದಲ್ಲಿ ತೊಡಗಿಕೊಂಡು ಮೈಸೂರ್ ಸ್ಟೋನ್ ವೇರ್ ಸಂಸ್ಥೆಯ ನಿರ್ದೇಶಕರಾಗಿ ದೇಶವಿದೇಶ ಸುತ್ತಿದವರು.

ರವೀಂದ್ರನಾಥ ಟಾಗೋರರು ಸುಬ್ಬರಾಯರ ಮನೆಗೆ ಬರುವ ಹೊತ್ತಿಗೆ ಕುಟುಂಬದಲ್ಲಿ ಹೊಸ ಸದಸ್ಯರೊಬ್ಬರ ಆಗಮನವೂ ಆಗಿತ್ತು. ಸುಬ್ಬರಾವ್–ಗೌರಮ್ಮ ದಂಪತಿಗಳ ಮೂರನೆಯ ಗಂಡು ಮಗುವಿನ ಜನನವಾಗಿತ್ತು. ತಮ್ಮ ಬಳಿಗೆ ಕರೆದು ತರಲಾದ ಕೂಸನ್ನು ರವೀಂದ್ರರು ಆಶೀರ್ವದಿಸಿದರು. ವಿಶಾಲವಾದ ಕಣ್ಣುಗಳ ಚಂದದ ಮಗುವನ್ನೊಮ್ಮೆ ನಿಟ್ಟಿಸಿ ನೋಡಿದರು. "ಮಗುವಿಗೆ ನಾಮಕರಣ ವಾಗಿದೆಯೇ?" ಎಂದು ಪಕ್ಕದಲ್ಲಿದ್ದವರನ್ನು ಕೇಳಿದರು. "ಇನ್ನೂ ನಾಮಕರಣವಾಗಿರದಿದ್ದರೆ ನಾರಾಯಣ ಎಂಬ ಹೆಸರಿಡಿ. ಈ ಮಗು ಮುಂದೆ ಪ್ರಖ್ಯಾತ ಕಲಾವಿದನಾಗುತ್ತಾನೆ" ಎಂದು ಹರಸಿದರು. ಟಾಗೋರರ ಸೂಚನೆಯಂತೆಯೇ ಮಗುವಿಗೆ ನಾರಾಯಣ ಎಂಬ ಹೆಸರಿಡಲಾಯಿತು. ರಾವ್ ಎಂಬ ಕುಟುಂಬದ ನಾಮಪ್ರತ್ಯಯವೂ ಸೇರಿಕೊಂಡು ನಾರಾಯಣರಾವ್ ಎಂಬ ಹೆಸರು ಪಡೆದ ಬಾಲಕ ಮುಂದೆ ಕನ್ನಡನಾಡಿನ ಹೆಸರಾಂತ ನಾಟಕ ಕಲಾವಿದರಲ್ಲೊಬ್ಬನೆನಿಸಿ ಕವಿ ರವೀಂದ್ರರ ಆಶಯವನ್ನು ಸತ್ಯವಾಗಿಸಿದ.

ಟಾಗೋರರು ಮಗುವಿನ ಭವಿಷ್ಯ ನುಡಿದುದರಲ್ಲಿ ಯಾವುದೇ ಅಚ್ಚರಿ ಹುಟ್ಟಿಸುವ ಅಂಶವಾಗಲಿ ಜ್ಯೋತಿಷದ ಪರಿಣತಿಯಾಗಲಿ ಇರಲಿಲ್ಲ. ಏಕೆಂದರೆ, ಸುಬ್ಬರಾಯರ ಕುಟುಂಬವಿಡೀ ಕಲಾರಾಧಕರಿಂದಲೇ ಕೂಡಿತ್ತು. ಸ್ವತಃ ಸುಬ್ಬರಾಯರೇ ತಮ್ಮ ಬಿಡುವಿಲ್ಲದ ವ್ಯಾಪಾರವಹಿವಾಟುಗಳ ನಡುವೆಯೇ ನಾಟಕಗಳಲ್ಲಿ ಅಭಿನಯಿಸಿ ಹೆಸರುಪಡೆದಿದ್ದರು. ಷೇಕ್ಸ್‌ಪಿಯರ್ ಬರೆದ ದುರಂತ ನಾಟಕಗಳಲ್ಲಿ ಖಳನಾಯಕನಾಗಿ ಅಭಿನಯಿಸಿದ್ದ ಅವರ ನಟನೆ ಜನಮೆಚ್ಚುಗೆಗೆ ಪಾತ್ರವಾಗಿತ್ತು. ಸುಬ್ಬರಾಯರ ಮಕ್ಕಳಾಗಿ ನಾರಾಯಣನಿಗಿಂತ ಮೊದಲು ಜನಿಸಿದ ರಾಮರಾವ್ ಹಾಗೂ ವೆಂಕಟರಾಮ್ ಅವರೂ ಮುಂದೆ ಒಳ್ಳೆಯ ನಾಟಕ ಕಲಾವಿದರಾಗಿ ಖ್ಯಾತರಾದರು.

ನಾರಾಯಣರಾವ್ ಹುಟ್ಟಿದ್ದು ೧೯೧೮ರ ಸೆಪ್ಟೆಂಬರ್ ೨೫ರಂದು. ಆರ್ಯ ವಿದ್ಯಾಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮಾಡುತ್ತಿದ್ದ ಹುಡುಗನನ್ನು ತಂದೆ ನಡುವೆ ಎರಡು ವರ್ಷಗಳ ಕಾಲ ತಮಿಳುನಾಡಿನ ತಿರುನೆಲ್ವೇಲಿಗೆ ಕಳುಹಿಸಿ ತಮಿಳು ಭಾಷೆಯಲ್ಲಿ ಶಿಕ್ಷಣ ಕೊಡಿಸಿದರು. ಮರಳಿ ಬೆಂಗಳೂರಿಗೆ ಬಂದ ನಾರಾಯಣ ಆರ್ಯ ವಿದ್ಯಾಶಾಲೆಯಲ್ಲೂ ದೇಶೀಯ ವಿದ್ಯಾಶಾಲೆಯಲ್ಲೂ ಶಿಕ್ಷಣ ಮುಂದುವರಿಸಿದ. ಹತ್ತನೇ ವಯಸ್ಸಿನಲ್ಲೇ ನಾರಾಯಣನಿಗೆ ನಾಟಕದ ವೇದಿಕೆಯೇರುವ

**ಟಿ. ಎಸ್. ಗೋಪಾಲ್**

ನಾರಾಯಣರಾವ್ ಪಡೆದುಕೊಂಡ ಮೊದಲ ಮಹತ್ವದ ಅವಕಾಶವೆಂದರೆ, ಕರ್ಣನನ್ನು ಕುರಿತ ಕೈಲಾಸಂ ಅವರ ಇಂಗ್ಲಿಷ್ ನಾಟಕದಲ್ಲಿ ಕರ್ಣನಾಗಿ ಅಭಿನಯಿಸಿದ್ದು. ಹಿರಿಯಣ್ಣ ರಾಮರಾಯರೇ ಈ ಅವಕಾಶವನ್ನು ಕಲ್ಪಿಸಿ ಪ್ರೋತ್ಸಾಹಿಸಿದವರು. ಅಣ್ಣನೂ ಇತರರೂ ತನ್ನ ಅಭಿನಯ ಕೌಶಲವನ್ನು ಮೆಚ್ಚಿ ಆಡಿದ ಮಾತುಗಳು ನಾರಾಯಣರಾಯರಿಗೆ ತೃಪ್ತಿ ತರಲಿಲ್ಲ. ಅದೇ ಪಾತ್ರವನ್ನು ಪದೇ ಪದೇ ಅಭಿನಯಿಸಿ ತಮ್ಮ ಕೊರತೆಯೇನೆಂಬುದನ್ನು ಸ್ವತಃ ಕಂಡುಕೊಂಡು ತಿದ್ದಿಕೊಳ್ಳುವ ಅಭ್ಯಾಸವನ್ನು ನಾರಾಯಣರಾವ್ ಬೆಳೆಸಿಕೊಂಡಿದ್ದರು. ಹೀಗಾಗಿ ಹಲವು ಬಾರಿ ಕರ್ಣನಾಗಿ ರಂಗದ ಮೇಲೆ ಕಾಣಿಸಿಕೊಂಡು ಅರೆಕೊರೆಗಳನ್ನು ತಿದ್ದಿಕೊಂಡು ಅಭಿನಯಿಸಿದ ನಂತರವೇ ಅವರು ತಮ್ಮ ನಟನೆಯ ಬಗೆಗೆ ಸಮಾಧಾನ ಹೊಂದುವಂತಾಗಿದ್ದು.

ಅವಕಾಶ ಲಭಿಸಿತು. ದೇಶೀಯ ವಿದ್ಯಾಶಾಲೆಯಲ್ಲಿ ಶಿಕ್ಷಕರಾಗಿದ್ದ ನಾರಾಯಣನ ಅಣ್ಣ ರಾಮರಾಯರು ಕೈಲಾಸಂ ನಾಟಕಗಳನ್ನು ರಂಗಭೂಮಿಗೆ ಪರಿಚಯಿಸಿದವರಲ್ಲಿ ಮುಖ್ಯರು. ರಾಮರಾಯರ ಮಾರ್ಗದರ್ಶನದಲ್ಲಿ ನಾರಾಯಣನಿಗೂ ಒಂದೆರಡು ನಾಟಕಗಳಲ್ಲಿ ಅಭಿನಯಿಸುವ ಅವಕಾಶ ಲಭಿಸಿತು.

ಬಿ. ಎಸ್. ರಾಮರಾವ್ ಕೈಲಾಸಂರವರ ಆಪ್ತ ಸ್ನೇಹಿತರು. ಕೈಲಾಸಂ ಹೇಳಿದ ಅನೇಕ ನಾಟಕಗಳನ್ನು ಬರೆದಿಡುವ ಮಹತ್ಕಾರ್ಯ ಮಾಡಿದವರು ರಾಮರಾವ್. ಕೈಲಾಸಂರವರ ಪ್ರತಿಭೆಯಿಂದ ಆಕರ್ಷಿತರಾಗಿ ಅನೇಕ ಸ್ನೇಹಿತರು ಅವರ ಜೊತೆಗಾರರಾಗಿದ್ದರು. ಕೆ. ವಿ. ಅಯ್ಯರ್, ರಾ. ಶಿ. ಎಂಬ ಕಾವ್ಯನಾಮದಿಂದ ಖ್ಯಾತರಾದ ಡಾ॥ ಶಿವರಾಮ್, ಬಿ. ಎಸ್. ರಾಮರಾವ್, ಬಿ. ಎಸ್. ವೆಂಕಟರಾಮ್, ಖ್ಯಾತ ಸಾಹಿತಿಗಳಾದ ತಿ. ತಾ. ಶರ್ಮ, ಜಿ. ಪಿ. ರಾಜರತ್ನಂ, ಆನಂದ – ಇವರೇ ಮೊದಲಾದವರು ಕೈಲಾಸಂ ಅವರ ಆಪ್ತಮಿತ್ರರ ಬಳಗಕ್ಕೆ ಸೇರಿದವರಾಗಿದ್ದರು. ಮನೆಯವರಿಂದ ದೂರವಾಗಿದ್ದ ಕೈಲಾಸಂಗೆ ಈ ಸ್ನೇಹಿತರೇ ಬಂಧುಗಳು. ಮನೆಯ ಹಿಂಬದಿಯ ಒಂಟಿ ಕೊಠಡಿಯಲ್ಲೋ, ಕೆ. ವಿ. ಅಯ್ಯರ್‌ರವರ ವ್ಯಾಯಾಮಶಾಲೆಯ ಬದಿಯ ಮುರುಕಲು ಕೋಣೆಯಲ್ಲೋ ಕೈಲಾಸಂ ವಾಸ. ಅವರ ಸುಪ್ರಸಿದ್ಧ ನಾಟಕ ಕೃತಿಗಳೆಲ್ಲ ರೂಪುಗೊಂಡಿದ್ದು ಈ ಕೋಣೆಗಳಲ್ಲೇ. ರಾತ್ರಿಯ ನಿಶ್ಶಬ್ದದಲ್ಲಿ ಹಾಸಿಗೆಯ ಮೇಲೆ ಒರಗಿದ ಕೈಲಾಸಂ ಸಂಭಾಷಣೆಗಳನ್ನು ಒಂದಾದ ಮೇಲೊಂದರಂತೆ ಹೇಳುತ್ತ ಹೋಗುವುದು, ಅವರ ಗೆಳೆಯರಲ್ಲೊಬ್ಬರು ಬರೆದುಕೊಳ್ಳುತ್ತಿದ್ದುದು, ಕೆಲವೊಮ್ಮೆ ಒಂದೇ ನಾಟಕವನ್ನು ಏಕಕಾಲದಲ್ಲಿ ಇಬ್ಬರು ಮೂವರು ಬೇರೆಬೇರೆಯಾಗಿ ಬರೆದುಕೊಂಡಿದ್ದೂ ಉಂಟು. ಕೈಲಾಸಂ ಮಾತಿನ ವೇಗಕ್ಕೆ ಬರಹ ಸರಿಗಟ್ಟಲಾರದವರು ಆಮೇಲೆ ಪರಸ್ಪರ ಬರೆದುಕೊಂಡದ್ದನ್ನು ನೋಡಿ ತಾಳೆ ಮಾಡಿ ತಿದ್ದಿಕೊಳ್ಳುತ್ತಿದ್ದರು. ಬೆಳಗಿನ ಜಾವದವರೆಗೆ ಈ ಕೆಲಸ ಸಾಗುತ್ತಿತ್ತು. 'ಬೆಳಗಾಯಿತು, ಇನ್ನು ಮಲಗಿಕೋ ಹೋಗು, ಮಗು' ಎಂದು ಕೈಲಾಸಂ ಅಪ್ಪಣೆ ಕೊಡಿಸಿದ ಮೇಲೆ ಗೆಳೆಯರು ಅಲ್ಲಿಂದ ಹೊರಡುವರು.

ಹೀಗೆ ತಾವೂ ತಮ್ಮ ಗೆಳೆಯರೂ ಬರೆದಿಟ್ಟ ಕೈಲಾಸಂ ನಾಟಕಗಳನ್ನು ರಂಗಭೂಮಿಗೆ ಪರಿಚಯಿಸುವುದರಲ್ಲೂ ರಾಮರಾವ್ ಹಾಗೂ ವೆಂಕಟರಾಮ್ ಸೋದರರು ಸಾಕಷ್ಟು ಶ್ರಮಿಸಿದರು. ಶಾಲಾಧ್ಯಾಪಕರಾಗಿದ್ದ ಅಣ್ಣ ರಾಮರಾಯರ ಭೇಟಿಗೆ ದಿನವೂ ಬರುತ್ತಿದ್ದ ಕೈಲಾಸಂ ಅವರನ್ನು ಕಾಣುವ ಮಾತನಾಡಿಸುವ ಅವಕಾಶ ನಾರಾಯಣನಿಗೂ ಸುಲಭ ಲಭ್ಯವಾಗಿತ್ತು. ಸಣ್ಣ ಪುಟ್ಟ ಪಾತ್ರಗಳ ಅಭಿನಯದ ನೆಪದಲ್ಲಿ ತೊಡಗಿದ ರಂಗಪ್ರವೇಶ ಜೀವಮಾನವಿಡೀ ಮುಂದುವರಿಯಿತು.

ನಾರಾಯಣರಾವ್ ಪಡೆದುಕೊಂಡ ಮೊದಲ ಮಹತ್ವದ ಅವಕಾಶವೆಂದರೆ, ಕರ್ಣನನ್ನು ಕುರಿತ ಕೈಲಾಸಂ ಅವರ ಇಂಗ್ಲಿಷ್ ನಾಟಕದಲ್ಲಿ ಕರ್ಣನಾಗಿ ಅಭಿನಯಿಸಿದ್ದು. ಹಿರಿಯಣ್ಣ ರಾಮರಾಯರೇ ಈ ಅವಕಾಶವನ್ನು ಕಲ್ಪಿಸಿ ಪ್ರೋತ್ಸಾಹಿಸಿದವರು. ಅಣ್ಣನೂ ಇತರರೂ ತನ್ನ ಅಭಿನಯ ಕೌಶಲವನ್ನು ಮೆಚ್ಚಿ ಆಡಿದ ಮಾತುಗಳು ನಾರಾಯಣರಾಯರಿಗೆ ತೃಪ್ತಿ ತರಲಿಲ್ಲ. ಅದೇ ಪಾತ್ರವನ್ನು ಪದೇ ಪದೇ ಅಭಿನಯಿಸಿ ತಮ್ಮ ಕೊರತೆಯೇನೆಂಬುದನ್ನು ಸ್ವತಃ ಕಂಡುಕೊಂಡು ತಿದ್ದಿಕೊಳ್ಳುವ ಅಭ್ಯಾಸವನ್ನು ನಾರಾಯಣರಾವ್ ಬೆಳೆಸಿಕೊಂಡಿದ್ದರು. ಹೀಗಾಗಿ ಹಲವು ಬಾರಿ ಕರ್ಣನಾಗಿ ರಂಗದ ಮೇಲೆ ಕಾಣಿಸಿಕೊಂಡು ಅರೆಕೊರೆಗಳನ್ನು ತಿದ್ದಿಕೊಂಡು ಅಭಿನಯಿಸಿದ ನಂತರವೇ ಅವರು ತಮ್ಮ ನಟನೆಯ ಬಗೆಗೆ ಸಮಾಧಾನ ಹೊಂದುವಂತಾಗಿದ್ದು.

ತಾವು ಓದಿ ಕಲಿತ ದೇಶೀಯ ವಿದ್ಯಾಶಾಲೆಯಲ್ಲೇ ನಾರಾಯಣರಾಯರು ಎರಡು ಬೇರೆ ಬೇರೆ ಅವಧಿಗಳಲ್ಲಿ ಒಟ್ಟು ಇಪ್ಪತ್ತೆಂಟು ವರ್ಷಗಳಿಗೂ ಹೆಚ್ಚು ಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಮೊದಲಿಗೆ, ೧೯೩೭ರಿಂದ ೧೯೪೭ರವರೆಗೂ ಮುಂದೆ ಹತ್ತು ವರ್ಷಗಳ ನಂತರ ೧೯೫೧ರಿಂದ ೧೯೭೫ರವರೆಗೂ ನಾಟಕ ಕಲೆಯ ಶಿಕ್ಷಕರಾಗಿ ದುಡಿದರು. ನಡುವಣ ಹತ್ತು ವರುಷಗಳ ಅವಧಿಯಲ್ಲಿ ವಿಮಾನ ಕಂಪೆನಿಯಲ್ಲಿ ಒಂದೆರಡು ವರ್ಷ, ಮತ್ತೆಲ್ಲೋ ಮಾರಾಟ ಪ್ರತಿನಿಧಿಯಾಗಿ ಸ್ವಲ್ಪಕಾಲ ದುಡಿಮೆ ಸಾಗಿತು. ಭಾರತಕ್ಕೆ ಸ್ವಾತಂತ್ರ್ಯ ದೊರಕುವ ಕಾಲಕ್ಕೆ ದೇಶಬಂಧು ಪತ್ರಿಕೆಯಲ್ಲಿ ಪ್ರಕಟಣೆಯ ಮೇಲ್ವಿಚಾರಕರಾಗಿ ಸೇವೆ ಸಲ್ಲಿಸುತ್ತಿದ್ದ ರಾಯರು ಕೆಲಕಾಲ ಸ್ವಂತ ಮುದ್ರಣಾಲಯವೊಂದನ್ನು ನಡೆಸಿದ್ದೂ ಉಂಟು.

ಹೀಗೆ, ಶಿಕ್ಷಕ, ಮುದ್ರಕ, ಪತ್ರಿಕೋದ್ಯಮಿ – ಮುಂತಾದ ವಿಭಿನ್ನ ಹುದ್ದೆಗಳಲ್ಲಿ ಅವಿರತವಾಗಿ ತೊಡಗಿಕೊಂಡಿದ್ದ ನಾರಾಯಣರಾಯರು ತಮ್ಮ ಹವ್ಯಾಸಗಳಲ್ಲಿ ಮೊದಲ ಆಯ್ಕೆಯಾಗಿ ಗುರುತಿಸಿಕೊಂಡಿದ್ದು ರಂಗಭೂಮಿಯನ್ನು.

ನಾರಾಯಣರಾಯರ ಅಭಿನಯವನ್ನು ಮೆಚ್ಚಿಕೊಂಡ ಕೈಲಾಸಂ ಅವರೇ ತಮ್ಮ ಕೆಲವು ನಾಟಕಗಳಲ್ಲಿ ಪಾತ್ರವಹಿಸುವಂತೆ ನಾರಾಯಣರಾಯರಿಗೆ ಆಹ್ವಾನ ಕೊಟ್ಟರೆಂದ ಮೇಲೆ ಹೇಳುವುದೇನು? ಕೈಲಾಸಂ ಈ ತರುಣನಿಗೆ ನಟನೆಯ ಅಂಶಗಳನ್ನು ಕಲಿಸುವುದರ ಜೊತೆಗೆ ನಾಟಕ ತರಬೇತಿಯ

## ಸುದ್ದಿಚಿತ್ರ




ನವಕರ್ನಾಟಕ ಪ್ರಕಾಶನದ ಸಹಯೋಗದೊಂದಿಗೆ ಇಜ್ಞಾನ ಟ್ರಸ್ಟ್ ಪ್ರಸ್ತುತಪಡಿಸಿದ ಕಾರ್ಯಕ್ರಮವೊಂದು ನಗರದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದಿನಾಂಕ ೨೯-೦೭-೨೦೧೮ರಂದು ನೆರವೇರಿತು. 'ಕನ್ನಡ ನೆಲ – ಜಲ : ನಾಳಿನ ಅರಿವು' ಕುರಿತು ಪರಿಣತರಿಂದ ವಿಚಾರ ಮಂಡನೆ, 'ಕಲಿಕೆಗೆ ಕೊಡುಗೆ' ಯೋಜನೆಯಡಿ ಶಾಲೆಗಳಿಗೆ ಪುಸ್ತಕ ವಿತರಣೆ ಹಾಗೂ 'ಜ್ಞಾನಪೀಠಕೆ ಮೆರುಗು ಕನ್ನಡದ ಬೆಡಗು' ಮತ್ತಿತರ ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮ ಇದಾಗಿತ್ತು.

ವೇದಿಕೆಯಲ್ಲಿ ನವಕರ್ನಾಟಕ ಪ್ರಕಾಶನದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎ. ರಮೇಶ ಉಡುಪ, ಡಾ॥ ಹೆಚ್. ಆರ್. ಅಪ್ಪಣ್ಣಯ್ಯ, ಡಾ॥ ಪದ್ಮಾ ಶೇಖರ್ ಮತ್ತು 'ನವಕರ್ನಾಟಕ ಕನ್ನಡ ಕಲಿಕೆ' ಮಾಲಿಕೆಯ ಲೇಖಕರಾದ ಶ್ರೀ ಟಿ. ಎಸ್. ಗೋಪಾಲ್ ಉಪಸ್ಥಿತರಿದ್ದರು.

ಮೇಲ್ವಿಚಾರಣೆ ನಡೆಸುವುದು ಹೇಗೆಂಬುದನ್ನೂ ಕಲಿಸಿದರಂತೆ. ಸದೃಢವಾದ ಮೈಕಟ್ಟಿನ ನಾರಾಯಣರಾವ್ ದೇಹದಾರ್ಢ್ಯವನ್ನು ಗಳಿಸುವುದರ ಕಡೆಗೂ ಗಮನಹರಿಸುವಂತೆ ಕೈಲಾಸಂ ಸಲಹೆ ನೀಡಿದ್ದರಂತೆ. ಅದಕ್ಕನುಗುಣವಾಗಿ ನಾರಾಯಣರಾಯರು ವ್ಯಾಯಾಮ ಕ್ರೀಡೆಗಳಲ್ಲಿ ನಿಯತವಾಗಿ ಭಾಗವಹಿಸುತ್ತಿದ್ದುದರಿಂದ ಮೈಕಟ್ಟನ್ನು ಬೆಳೆಸಿಕೊಳ್ಳಲೂ ಆರೋಗ್ಯವನ್ನು ಕಾಪಾಡಿ ಕೊಳ್ಳುವುದಕ್ಕೂ ಅವಕಾಶವಾಯಿತು. ಕೈಲಾಸಂ ಶಿಷ್ಯರಲ್ಲಿ ಒಬ್ಬರಾದ ಕೆ. ವಿ. ಅಯ್ಯರ್, ಅವರದ್ದೇ ವ್ಯಾಯಾಮಶಾಲೆಯೂ ಇದ್ದುದರಿಂದ, ಇವರಿಗೆ ಇನ್ನಷ್ಟು ಸ್ಫೂರ್ತಿ ತುಂಬಲು ಅವಕಾಶವಾಯಿತು. ರಾಯರ ಹಲವು ನಾಟಕಗಳ ಪೂರ್ವಸಿದ್ಧತೆ, ತಾಲೀಮು ನಡೆದದ್ದೂ ಈ ವ್ಯಾಯಾಮ ಶಾಲೆಯಲ್ಲೇ.

ಆಗ ಜನಪ್ರಿಯವಾಗಿದ್ದ ಕಂಪೆನಿ ನಾಟಕಗಳಿಗೆ ಸಮಾನಾಂತರವಾಗಿ ಹವ್ಯಾಸಿ ರಂಗಭೂಮಿಯನ್ನು ಬೆಳೆಸುವ ಪ್ರಯತ್ನದಲ್ಲಿ ಹಲವರು ಸಾಹಸಶೀಲರು ತೊಡಗಿದ್ದರು. ಸ್ವತಃ ಕೈಲಾಸಂರವರೇ ವರದಾಚಾರ್ಯರ ರತ್ನಾವಳೀ ನಾಟಕ ಕಂಪೆನಿಯ ಸಾರಥ್ಯವನ್ನು ವಹಿಸಿ, ಸಾಮಾಜಿಕ ನಾಟಕಗಳ ಪ್ರದರ್ಶನದ ಮೂಲಕ ಜನಮನವನ್ನು ತಲುಪಲು ಶ್ರಮ ವಹಿಸಿದ್ದರು. ತಮ್ಮ ಪ್ರಯತ್ನದಲ್ಲಿ ಕೈಲಾಸಂ ಯಶಸ್ವಿಯಾಗದಿದ್ದರೂ ಹವ್ಯಾಸಿ ರಂಗ ಪ್ರಯೋಗಾಸಕ್ತರಿಗೆ ಆಶಾಭಂಗವೇನೂ ಆಗಲಿಲ್ಲ. ೧೯೩೩ರಲ್ಲಿ ಕರ್ನಾಟಕ ಅಮೆಚೂರ್ಸ್ ಸಂಘ ಹುಟ್ಟಿಕೊಂಡಿತು. ತಮ್ಮ ಸೋದರ ವೆಂಕಟರಾಮ್ ಅವರೊಂದಿಗೆ ಈ ಸಂಘದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ನಾರಾಯಣರಾಯರು ಕೈಲಾಸಂ ಅವರ ನಾಟಕಗಳನ್ನೇ ಅಲ್ಲದೆ, ಅನಕೃ, ಎ. ಎನ್. ಮೂರ್ತಿರಾವ್ ಮೊದಲಾದವರ ನಾಟಕಗಳನ್ನೂ ರಂಗದ ಮೇಲೆ ಪ್ರದರ್ಶಿಸುವಲ್ಲಿ ಯಶಸ್ಸು ಕಂಡರು. ಇದೇ ಸಂಘವೇ ೧೯೪೨ರಲ್ಲಿ ಛಾಯಾ ಕಲಾವಿದರ ಸಂಘ ಎಂಬ ಹೆಸರು ತಳೆದು ಮತ್ತಷ್ಟು ಕಾರ್ಯಶೀಲವಾಯಿತು.

ಛಾಯಾಕಲಾವಿದರ ಸಂಘವು ಬೆಂಗಳೂರಿನಲ್ಲಿ ಮಾತ್ರವಲ್ಲದೆ ಇತರೆಡೆಗಳಲ್ಲೂ ನಾಟಕ ಪ್ರದರ್ಶನಗಳನ್ನು ಹಮ್ಮಿಕೊಂಡು ಜನಮೆಚ್ಚುಗೆ ಗಳಿಸಿತು. ನಾರಾಯಣರಾಯರ ಅಭಿನಯದ ಕೌಶಲ ಅವರಿಗೆ ಉತ್ತಮ ನಟರೆಂಬ ಮಾನ್ಯತೆ ತಂದುಕೊಟ್ಟಿತು. ಪ್ರತಿವಾರವೂ ನಿರ್ದಿಷ್ಟ ದಿನಗಳಂದು ನಾಟಕವನ್ನು ಅಭಿನಯಿಸುವ ವೇಳಾಪಟ್ಟಿಯನ್ನು ಜಾರಿಗೆ ತಂದುದರಿಂದ ಪ್ರೇಕ್ಷಕವರ್ಗಕ್ಕೆ ಅನುಕೂಲ ವಾಗುವುದರ ಜೊತೆಗೆ ಪ್ರೋತ್ಸಾಹದ ಮೆಚ್ಚುಗೆಯೂ ಸಂದಿತು. ಈ ಯೋಜನೆಯಲ್ಲಿ ಪರ್ವತವಾಣಿಯವರ ಹಲವು ನಾಟಕಗಳು ಪ್ರದರ್ಶಿತವಾಗಿ ಯಶ ಕಂಡವು. ಪರ್ವತವಾಣಿಯವರ "*ಬಹದ್ದೂರ್ ಗಂಡ*" ನಾಟಕವು ನಿರಂತರವಾಗಿ ೧೬೫ ಪ್ರದರ್ಶನಗಳನ್ನು ಕಂಡು ದಾಖಲೆ ಸ್ಥಾಪಿಸಿತು. ನಾರಾಯಣರಾಯರನ್ನು ಕುರಿತ ತಮ್ಮ ಒಂದು ಲೇಖನದಲ್ಲಿ "*ಬಹದ್ದೂರ್ ಗಂಡ* ನಾಟಕದಲ್ಲಿ ನಾಯಕ ಪಾತ್ರ ಹಾಗೂ ಸ್ತ್ರೀ ಪಾತ್ರಗಳನ್ನು ವಹಿಸುತ್ತಿದ್ದ ನಾರಾಯಣರಾಯರು ಅಂದಿನ ವಿಲಾಸಿ ರಂಗಭೂಮಿಯ ಅತ್ಯಂತ ಜನಪ್ರಿಯ ನಟರೆನಿಸಿದ್ದರು" ಎಂದು ವಿವರಿಸುವ ವೈ. ಪ್ರತಿಮಾ ಮೋಹನ್ ಅವರು "ಪರ್ವತವಾಣಿಯವರೇ ಬರೆದ *ವಿಪರ್ಯಾಸ, ಮೀನಾ ಮದುವೆ, ಇಷ್ಟಾರ್ಥ* ಮುಂತಾದ ನಾಟಕಗಳನ್ನು ಯಶಸ್ವಿಯಾಗಿ ನಿರ್ವಹಿಸಿದ ಹಿರಿಮೆ ಇವರಿಗೆ ಸಲ್ಲತಕ್ಕದ್ದು. ಅಲ್ಲದೆ, ಪ್ರಥಮ ಬಾರಿಗೆ ಪರ್ವತವಾಣಿಯವರ *ಬಹದ್ದೂರ್ ಗಂಡ, ಉಂಡಾಡಿ ಗುಂಡ, ಮೀನಾ ಮದುವೆ, ವಿಪರ್ಯಾಸ, ರಣಹದ್ದು, ಸುಂದ್ರೋಪಸುಂದ್ರು* ಮೊದಲಾದ ನಾಟಕಗಳನ್ನು ಮುದ್ರಿಸಿ ಪ್ರಕಟಿಸಿದವರೂ ನಾರಾಯಣರಾಯರೇ" ಎಂದು ಸ್ಮರಿಸಿಕೊಂಡಿದ್ದಾರೆ. (ಜನವರಿ ೨೯, ೧೯೮೪ರ ಕನ್ನಡಪ್ರಭದ ವಾಙ್ಮಯ ವಿಹಾರದಲ್ಲಿ ಪ್ರಕಟವಾದ ಲೇಖನ)

ಕೈಬೆರಳೆಣಿಕೆಯಷ್ಟು ಹವ್ಯಾಸಿ ನಾಟಕ ತಂಡಗಳು ಸಕ್ರಿಯವಾಗಿದ್ದ ಕಾಲದಲ್ಲಿ ಮಲ್ಲೇಶ್ವರ ಬಡಾವಣೆಯಲ್ಲಿ ಕನ್ನಡ ಅಮೆಚೂರ್ ಅಸೋಸಿಯೇಷನ್ ತಂಡವನ್ನು ಕಟ್ಟಿ ಬೆಳೆಸಿದವರಲ್ಲಿ ನಾರಾಯಣರಾಯರೂ ಒಬ್ಬರು. ಈ ಸಂಘದ ಚಟುವಟಿಕೆಗಳನ್ನು ಕನ್ನಡದ ಆಚಾರ್ಯಪುರುಷ ಬಿ. ಎಂ. ಶ್ರೀಕಂಠಯ್ಯನವರೂ ಹರಸಿ ಪ್ರೋತ್ಸಾಹಿಸಿದ್ದರು. ನಾರಾಯಣರಾಯರು ಕೇವಲ ಕೈಲಾಸಂ ನಾಟಕಗಳನ್ನಾಡಲಿಕ್ಕೇ ಲಾಯಕ್ಕು ಎಂಬ ಒಡಕುಮಾತು ಹುಟ್ಟಿದ್ದ ಕಾಲಕ್ಕೆ ರಾಯರು ತಮ್ಮ ನಿರ್ದೇಶನದಲ್ಲೇ ಅಭಿನಯಿಸಿ ಪ್ರದರ್ಶಿಸಿದ ಕೆಲವು ನಾಟಕಗಳು ರಂಗಭೂಮಿಯಲ್ಲಿ ಹೊಸ ಸಂಚಲನ ಮೂಡಿಸಿದವು. ಕೆ. ವಿ. ಅಯ್ಯರ್ ಕಥೆ ಆಧಾರಿತ 'ಚೇಳು ಅಜ್ಜಾ ಚೇಳು' ಹಾಗೂ ಪು.ಲ. ದೇಶಪಾಂಡೆಯವರ ಮರಾಠಿ ನಾಟಕದ ಅನುವಾದ 'ತನುವು ನಿನ್ನದು ಮನವು ನಿನ್ನದು' ಕೃತಿ ಗಳನ್ನು ರಾಯರು ನಿರ್ದೇಶಿಸಿದುದಲ್ಲದೆ ತಾವೇ ಪ್ರಧಾನಪಾತ್ರದಲ್ಲೂ ಅಭಿನಯಿಸಿದರು.

"ದನಿಯ ಮೇಲಿನ ಹಿಡಿತದಿಂದಾಗಿ ಪಾತ್ರಗಳನ್ನು ರಸಪೂರ್ಣವಾಗಿಸಲು ಯತ್ನಿಸುವ ಕೆಲವೇ ನಟರ ಸಾಲಿಗೆ ಸೇರಿದ ರಾಯರು ತಮ್ಮ ಪಾತ್ರಕ್ಕೆ ಖಚಿತ ನಿರೂಪಣೆ ನೀಡುವುದರಲ್ಲೂ ಸಮರ್ಥರಾಗಿದ್ದರು. ಸಾಮಾಜಿಕ, ಐತಿಹಾಸಿಕ, ಸಾಹಿತ್ಯಕ ಪ್ರಧಾನವಾದ ಎಲ್ಲಾ ನಾಟಕಗಳಲ್ಲೂ ಮುಖ್ಯಪಾತ್ರ ವಹಿಸಿ ಖ್ಯಾತಿ ಪಡೆದ ಅವರು 'ಕಾಕನಕೋಟೆ'ಯ ಕಾಕನ ಪಾತ್ರದಿಂದ ಮತ್ತಷ್ಟು ಪ್ರಸಿದ್ಧರಾದರು... ಕನ್ನಡದ ಹವ್ಯಾಸಿ ರಂಗಕ್ಕೆ ಉತ್ತಮ ಬುನಾದಿ ಹಾಕಿಕೊಟ್ಟ ಈ ನಟ ಚಾರಿತ್ರಿಕ ಪಾತ್ರಗಳಿಗೂ ಹೊಸ ಆಯಾಮ ಕೊಟ್ಟರು" ಎಂದು ನಾರಾಯಣರಾಯರ ಯಶಸ್ಸಿನ ಪಥವನ್ನು ಪತ್ರಕರ್ತ ಎನ್. ಜಗನ್ನಾಥ ಪ್ರಕಾಶ್ ಗುರುತಿಸಿದ್ದಾರೆ.

ನಾರಾಯಣರಾಯರ ಶರೀರ ಹಾಗೂ ಅಭಿನಯದಂತೆಯೇ ಆಕರ್ಷಕವಾದದ್ದು ಅವರ ಶಾರೀರ! ಬಹುತೇಕ ಪ್ರೇಕ್ಷಕರು ಅವರ ಸಂಭಾಷಣೆಯ ವೈಖರಿಯನ್ನು ಆಲಿಸಲೆಂದೇ ನಾಟಕಶಾಲೆಗೆ ಬರುತ್ತಿದ್ದುದೂ ಉಂಟು. ಹೀಗಾಗಿ ಆಕಾಶವಾಣಿ ನಾಟಕಪ್ರಸಾರಗಳಲ್ಲೂ ನಾರಾಯಣರಾಯರನ್ನು ಪ್ರಥಮದರ್ಜೆ ಕಲಾವಿದರೆಂದು ಪರಿಗಣಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಆಕಾಶವಾಣಿಯಲ್ಲಿ ನಾರಾಯಣರಾಯರು ಭಾಗವಹಿಸಿ ನಿರೂಪಿಸಿದ ನಾಟಕ ಕಾರ್ಯ ಕ್ರಮಗಳೆಲ್ಲವೂ ಅಪಾರ ಯಶಸ್ಸು ಪಡೆದವು. ಆಗಿನ ಪ್ರಸಿದ್ಧ ಲೇಖಕರನೇಕರು ಅವರ ಅಭಿನಯದ ನಾಟಕಗಳನ್ನು ಕೇಳಿ ಸಂತೋಷಪಟ್ಟು ರಾಯರಿಗೆ ಆಗಿಂದಾಗ್ಗೆ ಅಭಿನಂದನಾ ಪತ್ರಗಳನ್ನು ಬರೆಯುತ್ತಿದ್ದರು.

೧೯೪೪ರಿಂದೀಚೆಗೆ ರವಿ ಆರ್ಟಿಸ್ಟ್ ತಂಡದ ನಾಟಕಗಳ ನಿರ್ದೇಶನದ ಹೊಣೆ ಹೊತ್ತ ನಾರಾಯಣರಾಯರು ಸರ್ಕಾರದ ಪಂಚವಾರ್ಷಿಕ ಯೋಜನೆಗಳ ಹಾಗೂ ಕುಟುಂಬ ಯೋಜನೆಯ ಸ್ವರೂಪ – ಪ್ರಯೋಜನಗಳನ್ನು ಪರಿಚಯಿಸುವ ಪ್ರಚಾರನಾಟಕಗಳನ್ನು ದೇಶಾದ್ಯಂತ ಪ್ರದರ್ಶಿಸಿದರು. ದೆಹಲಿಯ ರಾಷ್ಟ್ರೀಯ ನಾಟಕೋತ್ಸವಗಳಲ್ಲಿ ಎರಡು ಬಾರಿ ನಮ್ಮ ರಾಜ್ಯವನ್ನು ಪ್ರತಿನಿಧಿಸಿ ನಾಟಕಗಳನ್ನು ಪ್ರದರ್ಶಿಸಿ ಯಶಸ್ಸು ಪಡೆದರು. ನಾರಾಯಣರಾಯರ ನಾಟಕವೊಂದನ್ನು ಆಗಿನ ರಾಷ್ಟ್ರಪತಿ ಡಾ॥ ಸರ್ವಪಲ್ಲಿ ರಾಧಾಕೃಷ್ಣನ್‌ರವರೂ ನೋಡಿ ಪ್ರಶಂಸಿಸಿದ್ದರು.

ನಾಟಕಾಭಿನಯದಲ್ಲಿ ಹೇಗೋ ಹಾಗೆ ನಾಟಕ ನಿರ್ದೇಶನದಲ್ಲೂ ನಾರಾಯಣರಾಯರು ಹೆಸರು ಪಡೆದಿದ್ದರು. ಉತ್ತಮ ನಿರ್ದೇಶಕರೆನ್ನಿಸಿ ಕೊಳ್ಳಬೇಕಾದರೆ ರಂಗಕೌಶಲದ ಸಕಲ ಅಂಶ ಗಳನ್ನೂ ಬಲ್ಲವನಾಗಿರಬೇಕು ಎಂಬುದನ್ನು ಅರಿತಿದ್ದರು. ಸಮಗ್ರ ನಾಟಕ ಹೇಗಿರಬೇಕು ಎನ್ನುವುದನ್ನು ಕಲ್ಪಿಸಿಕೊಳ್ಳುವುದು ಅವರ ಮೊದಲ ಕೆಲಸ. ಇದಕ್ಕಾಗಿ ನಾಟಕದ ಕಲಾವಿದರೆಲ್ಲರನ್ನೂ ಕರೆಯಿಸಿ ಅವರೆದುರು ರಾಯರು ನಾಟಕದ

## ಕೊಲೆಗಾರ ಯಾರು?

ಕೆರೆಗಳನ್ನು ಸೈಟುಗಳನ್ನಾಗಿ ಪರಿವರ್ತಿಸಿದಿರಿ
ಬೋರು ಹಾಕಿಸಿ ನೀರೆತ್ತಿ ಬರಿದಾಗಿಸಿದಿರಿ ಅಂತರ್ಜಲ!
ಮೆಚ್ಚಲೇಬೇಕು ನಿಮ್ಮ ನೀರಿನ ಕುರಿತಾದ ನಿಜಕಾಳಜಿ
ಬರೆಸಿದಿರಿ "ಕುಡಿಯಿರಿ ಶುದ್ಧಜಲ, ಕೊಲ್ಲದಿರಿ ಅಂತರ್ಜಲ!"

ಶ್ರೀನಿವಾಸ ಕುಂಡಂತಾಯ
ಬೆಂಗಳೂರು – ೫೬೦ ೦೯೪

ಪೂರ್ಣ ಸಂಭಾಷಣೆಯನ್ನು ಓದಿ ಅಭಿನಯಿಸಿ ತೋರಿಸುತ್ತಿದ್ದರು. ಈ ಮೂಲಕ ನಟರಿಗೆ ತಮ್ಮ ಅಭಿನಯ ಹಾಗೂ ಸಂಭಾಷಣಾ ಕೌಶಲ ಹೇಗಿರಬೇಕು ಎಂಬುದು ಮನದಟ್ಟಾಗುವುದು. ನಾಟಕದ ರಿಹರ್ಸಲ್ ಶುರುವಾಗುವುದಕ್ಕೆ ಮುನ್ನವೇ ಎಲ್ಲ ನಟರೂ ತಂತಮ್ಮ ಸಂಭಾಷಣೆಗಳನ್ನು ಕಂಠಪಾಠ ಮಾಡಿರಬೇಕಾಗಿತ್ತು! ನಾರಾಯಣರಾಯರಿಗಿದ್ದ ಗುರಿ ಒಂದೇ – ಪರಿಪೂರ್ಣತೆ!

ಹೆಸರಾಂತ ಮರಾಠಿ ನಾಟಕಕಾರ ಪು.ಲ. ದೇಶಪಾಂಡೆಯವರು ತಮ್ಮದೊಂದು ನಾಟಕವನ್ನು ನಾರಾಯಣರಾಯರು ನಿರ್ದೇಶಿಸಿ ಪ್ರದರ್ಶಿಸಿದ ಸಂದರ್ಭದಲ್ಲಿ ಹಾಜರಿದ್ದರು. ನಾಟಕ ಮುಗಿದ ಮೇಲೆ ಅವರು "ನನ್ನ ನಾಟಕವನ್ನು ಹೇಗೆ ಅಭಿನಯಿಸಬೇಕಿತ್ತೋ ಹಾಗೆಯೇ ಅಭಿನಯಿಸಿ, ನಾಟಕದ ಕ್ಲೈಮ್ಯಾಕ್ಸ್‌ಅನ್ನು ನಾನು ಕಲ್ಪಿಸಿಕೊಂಡ ರೀತಿಯಲ್ಲೇ ಪ್ರದರ್ಶಿಸಿದುದನ್ನು ಇದೇ ಮೊದಲ ಬಾರಿಗೆ ಕಾಣುತ್ತಿದ್ದೇನೆ!" ಎಂದು ಉದ್ಗರಿಸಿದರು!

ನಾರಾಯಣರಾಯರು ನ್ಯಾಷನಲ್ ಹೈಸ್ಕೂಲಿನಲ್ಲಿ ನಾಟಕಕಲೆಯ ಶಿಕ್ಷಕರಾಗಿದ್ದ ಅವಧಿಯಲ್ಲಿ ಅವರಿಂದ ಅಭಿನಯ ಶಿಕ್ಷಣವನ್ನು ಪಡೆದ ಅನೇಕರು ಮುಂದೆ ನಾಟಕರಂಗದಲ್ಲೂ ಸಿನಿಮಾರಂಗದಲ್ಲೂ ಖ್ಯಾತಿ ಗಳಿಸಿದ್ದಾರೆ. ಈ ಶಿಷ್ಯವರ್ಗದವರಲ್ಲಿ ಸಿ. ಆರ್. ಸಿಂಹ, ಲೋಕನಾಥ್, ಸೀತಾರಾಮ್, ಶ್ರೀನಾಥ್ ಮೊದಲಾದವರನ್ನು ಹೆಸರಿಸಬಹುದು.

"ನನ್ನ ಈಗಿನ ಎಲ್ಲಾ ಬೆಳವಣಿಗೆಗೆ ನಾರಾಯಣರಾಯರೇ ಕಾರಣ" ಎಂದು ನೆನಪಿಸಿಕೊಳ್ಳುವ ಹಿರಿಯ ನಟ ಲೋಕನಾಥ್ ಅವರಿಗೆ ಪೂರ್ವದಲ್ಲಿ ಕೆ. ವಿ. ಅಯ್ಯರ್ ಅವರ ವ್ಯಾಯಾಮ ಶಾಲೆಯ ಮೂಲಕವೇ ನಾರಾಯಣರಾಯರ ಪರಿಚಯವಾದದ್ದು. "ನಾರಾಯಣ್ ಅವರು 'ರವಿ ಕಲಾವಿದರು' ಗರಡಿಯಲ್ಲಿ ನನಗೆ ನಟನೆಯ ಪಟ್ಟುಗಳನ್ನು ಹೇಳಿಕೊಟ್ಟು ಕಲಾವಿದನನ್ನಾಗಿ ರೂಪಿಸಿದರು. ಸತತ ಇಪ್ಪತ್ತೈದು ವರ್ಷಗಳ ಕಾಲ ಇವರ ನಾಟಕಗಳಲ್ಲಿ ನಟಿಸುತ್ತಿದ್ದೆ" ಎಂದು ನೆನಪಿಸಿಕೊಂಡಿದ್ದಾರೆ. ನಾಟಕಾಭ್ಯಾಸಕ್ಕೆ ಸಂಬಂಧಿಸಿದಂತೆ ಗುರುಗಳೊಂದಿಗೆ ಆಗಾಗ್ಗೆ ವಾದವಿವಾದದಲ್ಲಿ ತೊಡಗಿರುತ್ತಿದ್ದ ಖ್ಯಾತ ಕಲಾವಿದ ಸಿ. ಆರ್. ಸಿಂಹ ತಮ್ಮ ವರ್ತನೆಗೆ ಪರಿತಾಪಪಟ್ಟು ನಾರಾಯಣರಾಯರಿಗೆ ಬರೆದ ಆತ್ಮೀಯ ಪತ್ರವೊಂದರಲ್ಲಿ "ನಿಮ್ಮ ಬಗ್ಗೆ ತುಂಬ ಆದರ ಗೌರವವನ್ನು ಹೊಂದಿದ್ದ ಕಾಲವನ್ನೂ ಜ್ಞಾಪಿಸುತ್ತಿದ್ದೇನೆ. ಈ ಮಧ್ಯೆ ಉಂಟಾದ ಮನಸ್ತಾಪವನ್ನು ಒಂದು ಗ್ರಹಣಕಾಲವೆಂದು ಭಾವಿಸಬೇಕು. ಈಗ ಕಪ್ಪು ನೆರಳು ಸರಿದಿದೆ. ಹಿರಿಯ ಮೇಷ್ಟರಾದ ನೀವು ದಯವಿಟ್ಟು ಹಿಂದಿನದೆಲ್ಲ ಮರೆತು ನನ್ನನ್ನು ಸದಾ ಆಶೀರ್ವದಿಸಬೇಕು" ಎಂದು ಕೇಳಿಕೊಂಡಿದ್ದೂ ಉಂಟು.

ರಂಗಭೂಮಿಯ ಮೇಲೆ ಬಂದು ನಿಲ್ಲುವ




ದಿನಗಳುರುಳಿದಂತೆ
ಮನವು ಮಾಗಬೇಕು;
ನೆಮ್ಮದಿಯ ಬಿಮ್ಮಲಿ
ದಿನಗಳು ಸಾಗಬೇಕು:
ಕಾಲನು ಬಂದರೂ
ಕಾಲ ಎದುರಿಗಿದ್ದರೂ
ನಗುವಿನಲಿ ಅವನ
ಸ್ವಾ–ಗತಿಸಬೇಕು!

ಗೋಪಿ
ಹಿರೇಬೆಟ್ಟು

ನಟನೋರ್ವನಿಂದ ಪ್ರೇಕ್ಷಕರು ಅಪೇಕ್ಷಿಸುವ ಹಾಗೂ ನಿರೀಕ್ಷಿಸುವ ಎಲ್ಲ ಮಹತ್ವದ ಗುಣಾಂಶಗಳನ್ನೂ ನಾರಾಯಣರಾಯರು ಹೊಂದಿದ್ದರು ಎಂದು ಅವರ ಹಿರಿಯ ಮಗ ಬಿ. ಎನ್. ಪ್ರಕಾಶ್ ಸ್ಮರಿಸುತ್ತಾರೆ. ಉತ್ತಮ ದೇಹದಾರ್ಢ್ಯ, ಮೋಹಕ ಕಂಠ, ನಾಟಕದ ಭಾಷಾಭಿವ್ಯಕ್ತಿಯ ಮೇಲಿನ ಪ್ರಭುತ್ವ ಅವರನ್ನು ಶ್ರೇಷ್ಠ ಕಲಾಕಾರನನ್ನಾಗಿಸಿತ್ತು. ಸಂಸ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕೈಲಾಸಂ, ಪರ್ವತವಾಣಿ, ಕುವೆಂಪು – ಹೀಗೆ ವಿಭಿನ್ನ ಶೈಲಿಯ, ಬೇರೆ ಬೇರೆ ಭಾಷಾರೂಪಗಳನ್ನು ಬಳಸುವ ನಾಟಕಕಾರರ ಕೃತಿಗಳನ್ನು ಅಷ್ಟೇ ಸಮರ್ಥವಾಗಿ ರಂಗದ ಮೇಲೆ ಪ್ರದರ್ಶಿಸುವ ಕೌಶಲ ನಾರಾಯಣರಿಗಿತ್ತು. ರಂಗದ ಮೇಲೆ ನಿಲ್ಲುವ ನಟ ತಾನು ಅಭಿನಯಿಸುವ ಪಾತ್ರದ ಅಂತರಂಗಕ್ಕಿಳಿಯಬೇಕು; ಅವನ ನಟನೆ ಅಪ್ಪಟಮಟ್ಟಿಗೆ ಸಹಜವಾಗಿರಬೇಕು, ಎಲ್ಲೂ ಬಿಗುವು, ಕೃತಕತೆ ಕಾಣಿಸಿ ಕೊಳ್ಳತಕ್ಕದ್ದಲ್ಲ – ಎಂಬುದು ನಾರಾಯಣರಾಯರ ನಟನೆಯ ಯಶಸ್ಸಿನ ಸೂತ್ರ. ವೇದಿಕೆಯ ಮೇಲಿನ ರಂಗಸಜ್ಜಿಕೆ, ವಿನ್ಯಾಸ, ಉಡುಪುಗಳ ವೈಭವಕ್ಕಿಂತ ಅಭಿನಯಕ್ಕೇ ಹೆಚ್ಚಿನ ಪ್ರಾಶಸ್ತ್ಯವಿರತಕ್ಕದ್ದು ಎನ್ನುತ್ತಿದ್ದರು. ಕರ್ಣನ ಜೀವನವ್ಯಕ್ತಿತ್ವಗಳನ್ನು ಕುರಿತು ಕೈಲಾಸಂ ರಚಿಸಿದ ಪರ್ಪಸ್ ನಾಟಕದಲ್ಲಿನ ರಾಯರ ಅಭಿನಯವನ್ನು ಸ್ವತಃ ಕೈಲಾಸಂ ಅವರೇ ಮೆಚ್ಚಿ ಕೊಂಡಾಡಿದ್ದು ನಾರಾಯಣರಾಯರ ನಟನಾ ಕೌಶಲಕ್ಕೆ ದೊರೆತ ಮಹತ್ವದ ಪ್ರಶಸ್ತಿ. ಇಷ್ಟೆಲ್ಲ ಅಭಿನಯ ಕೌಶಲ ಹಾಗೂ ಚಿತ್ರನಟನಿಗೆ ಅರ್ಹವಾದ ಸ್ಫುರದ್ರೂಪ ಇದ್ದರೂ ನಾರಾಯಣರಾವ್ ಚಿತ್ರರಂಗದತ್ತ ಒಲಿಯದಿದ್ದುದು ಆಶ್ಚರ್ಯವೇ. ರಂಗಭೂಮಿ ಅವರ ಆಸಕ್ತಿ, ಪ್ರೀತಿಗಳೆಲ್ಲವನ್ನೂ ಹಿಡಿದಿಟ್ಟುದೇ ಇದಕ್ಕೆ ಕಾರಣವಿರಬೇಕು.

ಕನ್ನಡ ಚಿತ್ರರಂಗ ನಾರಾಯಣರಾಯರ ಸೇವೆಯನ್ನು ಬಳಸಿಕೊಳ್ಳಲು ಮುಂದಾದುದೂ ತಡವಾಗಿಯೇ. ತಮ್ಮ ಐವತ್ತನೇ ವಯಸ್ಸಿನಲ್ಲಿ ಚಿತ್ರರಂಗದ ಕರೆಯನ್ನು ಮನ್ನಿಸಿದ ರಾಯರು ಪುಟ್ಟಣ್ಣ ಕಣಗಾಲರ ಗೆಜ್ಜೆಪೂಜೆ, ಅನಿರೀಕ್ಷಿತ, ಕಸ್ತೂರಿ ವಿಜಯ, ಬಿಡುಗಡೆ, ಬಯಲುದಾರಿ, ತಾಯಿಗಿಂತ ದೇವರಿಲ್ಲ ಮೊದಲಾದ ಹದಿನೈದು ಚಿತ್ರಗಳಲ್ಲಿ ನಟಿಸಿದರು. ಗಿರೀಶ ಕಾರ್ನಾಡರು ನಿರ್ದೇಶಿಸಿದ ಕನಕ–ಪುರಂದರ ಸಾಕ್ಷ್ಯಚಿತ್ರದಲ್ಲಿ ಕನಕದಾಸರ ಗುರುಗಳ ಪಾತ್ರದಲ್ಲಿ ಅಭಿನಯಿಸಿದರು.

ಆಡಳಿತಾತ್ಮಕವಾಗಿಯೂ ಕನ್ನಡ ರಂಗಭೂಮಿಗೆ ನಾರಾಯಣರಾಯರ ಸೇವೆ ಸ್ಮರಣಾರ್ಹವಾದುದು. ರಾಜ್ಯ ಸರಕಾರವು ಶಿಕ್ಷಕರಿಗಾಗಿ ಏರ್ಪಡಿಸುವ ನಾಟಕಕಲೆಯ ತರಬೇತಿ ಕೇಂದ್ರಗಳಲ್ಲಿ ಮುಖ್ಯ ತರಬೇತುದಾರರಾಗಿಯೂ ನಾಟಕ ಕಲೆಯ ಪರೀಕ್ಷೆಗಳಲ್ಲಿ ಪ್ರಧಾನ ಪರೀಕ್ಷಕರಾಗಿಯೂ ನಾರಾಯಣರಾಯರನ್ನು ನೇಮಿಸಿ ಅವರ ಸೇವೆಯನ್ನು ಬಳಸಿಕೊಂಡಿತ್ತು. ನಾಟಕ ಅಕಾಡೆಮಿಯ ರಿಜಿಸ್ಟ್ರಾರ್ ಆಗಿಯೂ ರಾಯರು ಸೇವೆ ಸಲ್ಲಿಸಿದರು. ಶ್ರೀಯುತರ ಸೇವೆಯನ್ನು ಗುರುತಿಸಿ ರಾಜ್ಯ ಸಂಗೀತ ನಾಟಕ ಅಕಾಡೆಮಿಯು ೧೯೬೮ರಲ್ಲಿ ಅವರಿಗೆ ಅಕಾಡೆಮಿಯ ಗೌರವ ಪುರಸ್ಕಾರ ನೀಡಿ ಸನ್ಮಾನಿಸಿತು.

ನಾರಾಯಣರಾಯರು ನಿಧನರಾದುದು ಮಾರ್ಚ್ ೧೯೯೯ರಲ್ಲಿ. ಆ ಹೊತ್ತಿಗೆ ಕನ್ನಡ ನಾಟಕರಂಗ ಸಾಕಷ್ಟು ಬೆಳವಣಿಗೆ ಕಂಡಿತ್ತು. ಏನೇ ಇರಲಿ, ರಂಗಭೂಮಿ ಜೀವಂತವಾಗಿರಬೇಕಾದರೆ, ಹೆಚ್ಚು ಹೆಚ್ಚು ಹವ್ಯಾಸಿ ನಾಟಕ ತಂಡಗಳು ಸಕ್ರಿಯವಾಗಿರಬೇಕು ಎಂದು ನಾರಾಯಣರಾಯರು ಆಶಿಸುತ್ತಿದ್ದರು. ಬೆಂಗಳೂರಿನ ಈಗಿನ ರಂಗಭೂಮಿಯ ಚಟುವಟಿಕೆಗಳು ತಕ್ಕಮಟ್ಟಿನ ಉತ್ಸಾಹ, ಲವಲವಿಕೆಯನ್ನೇನೋ ತುಂಬಿಕೊಂಡಿವೆ. ನಾರಾಯಣರಾಯರ ಜನ್ಮಶತಮಾನೋತ್ಸವದ ಈ ಸಂದರ್ಭದಲ್ಲಿ ಕನ್ನಡ ರಂಗಭೂಮಿಯ ಚೈತನ್ಯಕ್ಕೆ ಮತ್ತಷ್ಟು ಹುರುಪು ತುಂಬುವ, ನಾಡಿನ ವಿವಿಧ ಭಾಗಗಳಲ್ಲಿ ಪ್ರೇಕ್ಷಕವರ್ಗವನ್ನು ರಂಗಭೂಮಿಯತ್ತ ನಿರಂತರವಾಗಿ ಸೆಳೆಯಬಲ್ಲ ಮಹತ್ವದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅಗತ್ಯವಿದೆ.

**ಟಿ. ಎಸ್. ಗೋಪಾಲ್**
ನಂ.೦೦೯, "ಶ್ರವಂತಿ ಗೋಕುಲ್", ೩ನೇ ಅಡ್ಡರಸ್ತೆ
ದ್ವಾರಕನಗರ ಪಿ.ಇ.ಎಸ್.ಐ.ಟಿ. ಹತ್ತಿರ
ಹೊಸಕೆರೆಹಳ್ಳಿ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

'ಹೊಸತು' ಪ್ರಾರಂಭದಿಂದಲೂ ಕೆಲವು ಶಿಸ್ತು ಮತ್ತು ಮೌಲ್ಯಗಳನ್ನು ಅನುಸರಿಸುತ್ತ ಬಂದಿದೆ. ಪ್ರಗತಿಪರ ವಿಚಾರಗಳಿಗೆ ವೇದಿಕೆಯಾಗಿರುವುದರ ಜೊತೆಗೆ, ಮೂಢನಂಬಿಕೆಗಳನ್ನು ಬಿತ್ತುವ, ಯಾವುದೇ ರೀತಿಯ ರೋಚಕ ಹಾಗೂ ಮಾದಕ ಸಾಮಗ್ರಿಗಳನ್ನು ಹಂಚುವ ಕೈಂಕರ್ಯದಿಂದ ಸಾಕಷ್ಟು ಅಂತರ ಕಾಯ್ದುಕೊಂಡಿದೆ. ಸಮಾಜಕಂಟಕ ಶಕ್ತಿಗಳ ಬಗ್ಗೆ ಎಚ್ಚರಿಸುತ್ತ, ಓದುಗರ ತಿಳಿವಳಿಕೆಯ ಪರಿಧಿಯನ್ನು ವಿಸ್ತರಿಸುವ ಕಾಯಕದಲ್ಲಿ ತೊಡಗಿಕೊಂಡಿದೆ.

ವಿಜ್ಞಾನದ ಬೇರೆಬೇರೆ ಕ್ಷೇತ್ರಗಳಲ್ಲಿ ಕಾರ್ಯಪ್ರವೃತ್ತರಾಗಿರುವ ವಿಜ್ಞಾನಿಗಳನ್ನು ಹೊಸತು ಓದುಗರಿಗೆ ಪರಿಚಯ ಮಾಡಿಕೊಡುವುದನ್ನು ಅದು ಮುಂದುವರಿಸಿದೆ.

ಹೊಸತು ಸಂಚಿಕೆಗಳಿಗಾಗಿ ಸಂದರ್ಶಿಸಿದ ಹಲವು ಗಣ್ಯರ ಫೋಟೋ ಕ್ಲಿಕ್ಕಿಸುವ ಅವಕಾಶ ಆಗಾಗ ಒದಗಿಬರುತ್ತಿತ್ತು. ಸಂದರ್ಶಕರು ಗಣ್ಯರೊಂದಿಗೆ ಮಾತುಕತೆಯಾಡುವಾಗ, ನಾನು ಒಂದುಕಡೆ ತೆಪ್ಪಗೆ ಕುಳಿತಿರುತ್ತಿದ್ದೆ. ಅವರ ಮಾತುಗಳ ಮಧ್ಯೆ ಬಾಯಿ ಹಾಕುವ ಅವಕಾಶವಿರುತ್ತಿರಲಿಲ್ಲ. ನಾನು 'ನಾನ್‌ಸೈನ್ಸ್' ವ್ಯಕ್ತಿ ಎಂಬುದನ್ನು ಮರೆಯುವಂತಿರಲಿಲ್ಲ. ಆದರೆ ಆ ಗಣ್ಯ ವ್ಯಕ್ತಿಗಳ ಮಾತುಗಳನ್ನು ಕೇಳಿಸಿಕೊಳ್ಳುವುದೇ ಒಂದು ರೋಚಕ ಅನುಭವವಾಗಿರುತ್ತಿತ್ತು.




# ಸಂಶೋಧನಾಲಯವೇ ಇವರ ದೇಗುಲ!

ಅಂಥ ಇಬ್ಬರು ಮಹಾನುಭಾವರನ್ನು ಇಲ್ಲಿ ನೆನಪಿಸಿಕೊಂಡಿದ್ದೇನೆ.

**ಭಾರತರತ್ನ ಡಾ॥ ಸಿ. ಎನ್. ಆರ್. ರಾವ್**

ಬೆಂಗಳೂರಿನಲ್ಲಿರುವ ಜವಹರಲಾಲ್ ನೆಹರು ಉನ್ನತ ವೈಜ್ಞಾನಿಕ ಸಂಶೋಧನಾಲಯದ ಸ್ಥಾಪಕ ನಿರ್ದೇಶಕ ಹಾಗೂ ಅದರ ಗೌರವಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದವರು.

ಈ ಸಂಶೋಧನಾಲಯ ಸುಮಾರು ನಲವತ್ತು ವಿಜ್ಞಾನಿಗಳು ಸೀಮಿತ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸಲು ಅವಕಾಶ ಒದಗಿಸುತ್ತಿದೆ. ವರ್ಷಕ್ಕೆ ಮೂವತ್ತರಷ್ಟು ಚರ್ಚಾಕೂಟಗಳನ್ನೇರ್ಪಡಿಸುತ್ತದೆ. ಬೇಸಿಗೆ ಕಾಲದಲ್ಲಿ ಭಾರತದಿಂದ ಮತ್ತು ಹಲವು ಅಭಿವೃದ್ಧಿಶೀಲ ರಾಷ್ಟ್ರಗಳಿಂದ ವಿಜ್ಞಾನಿಗಳನ್ನು ಆಹ್ವಾನಿಸಿ ಸಂಶೋಧನೆ ನಡೆಸಲು ಅವಕಾಶ ಕಲ್ಪಿಸುತ್ತದೆ. ಅಲ್ಲದೆ ವಿಜ್ಞಾನ ಪ್ರಸಾರ ಕಾರ್ಯದಲ್ಲೂ ತೊಡಗಿಕೊಂಡಿದೆ.



*ಡಾ॥ ಸಿ. ಎನ್. ಆರ್. ರಾವ್*

ಡಾ॥ ಸಿ. ಎನ್. ಆರ್. ರಾವ್ ಅಂತರರಾಷ್ಟ್ರೀಯ ಖ್ಯಾತಿ ಮತ್ತು ಮನ್ನಣೆ ಪಡೆದ ರಸಾಯನ ಶಾಸ್ತ್ರದ ವಿಜ್ಞಾನಿ. ಟ್ರೆಯಸ್ಟಿಯಲ್ಲಿರುವ ತೃತೀಯ ವಿಶ್ವದ ವಿಜ್ಞಾನ ಅಕಾಡೆಮಿಯ ಸ್ಥಾಪಕರು ಮತ್ತು ಅಧ್ಯಕ್ಷರು. ಭಾರತೀಯ ವಿಜ್ಞಾನ ಮಂದಿರದ ಅಧ್ಯಕ್ಷರಾಗಿ ಹತ್ತು ವರ್ಷ ಸೇವೆ ಸಲ್ಲಿಸಿದವರು. ವಿಶ್ವದ ಸುಮಾರು ಇಪ್ಪತ್ತು ದೇಶಗಳ ಅಕಾಡೆಮಿಯ ಅಧ್ಯಕ್ಷರಾಗಿ ಚುನಾಯಿತರಾಗಿದ್ದವರು. ಸುಮಾರು ಒಂದು ಸಾವಿರ ಸಂಶೋಧನ ಪ್ರಬಂಧಗಳನ್ನು, ನಲವತ್ತೈದರಷ್ಟು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಲಂಡನ್ನಿನ ರಾಯಲ್ ಸೊಸೈಟಿಯ ಫೆಲೋ ಆಗಿರುತ್ತಾರೆ. ಭಾರತ ಸರಕಾರದ ವಿಜ್ಞಾನ ಸಲಹಾ ಮಂಡಳಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ವಿಜ್ಞಾನವನ್ನು ಜನಪ್ರಿಯಗೊಳಿಸುತ್ತಿರುವ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿಗೆ ಮತ್ತು ಭಾರತ ಜ್ಞಾನ – ವಿಜ್ಞಾನ ಸಮಿತಿಗೆ ನೆರವು ನೀಡಿರುವ ಪ್ರಭಾವಂತ ಕನ್ನಡಿಗರು. ಕರ್ನಾಟಕ ಸರಕಾರ ಇವರಿಗೆ ಕರ್ನಾಟಕ ರತ್ನ ಪ್ರಶಸ್ತಿ ನೀಡಿ ಗೌರವಿಸಿದೆ.

ಸಂಶೋಧನಾಲಯದ ಆವರಣದೊಳಕ್ಕೆ ಕಾಲಿರಿಸಿದಾಗ, 'I too have worshipped at the shrine of science'- ಎಂದು, ಕಲ್ಲಿನಮೇಲೆ ಕೆತ್ತಿಸಿರುವ ಫಲಕವೊಂದು ನಮ್ಮನ್ನು ಸ್ವಾಗತಿಸಿತು. ವಿಜ್ಞಾನಿಗಳ ಪಾಲಿಗೆ ಸಂಶೋಧನಾಲಯವೇ ದೇವರ ಗುಡಿಯಲ್ಲವೆ!

ಡಾ॥ ಸಿ. ಎನ್. ಆರ್. ರಾವ್ ಅವರನ್ನು ಸಂದರ್ಶಿಸಿದವರು ಹೊಸತು ಸಂಪಾದಕ ಡಾ॥ ಜಿ. ರಾಮಕೃಷ್ಣ ಮತ್ತು ನಿವೃತ್ತ ಪ್ರಾಧ್ಯಾಪಕ ಎಂ. ಎ. ಸೇತುರಾವ್. ನಾನು ಅವರ ಹಿಂದೆ ಆಯಕಟ್ಟಿನ ಸ್ಥಳದಲ್ಲಿ ಕುಳಿತು ಆಗಾಗ ಫೋಟೋ ಕ್ಲಿಕ್ಕಿಸುತ್ತಿದ್ದೆ. ಅವರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದೆ.

ಮೂಲ ವಿಜ್ಞಾನಗಳನ್ನು ಕಲಿಯಲು ವಿದ್ಯಾರ್ಥಿಗಳು ಮುಂದೆ ಬರುತ್ತಿಲ್ಲ. ಇದೇ ಪರಿಸ್ಥಿತಿ ಮುಂದುವರಿದರೆ, ಮುಂದಿನ ಕೆಲವು ವರ್ಷಗಳಲ್ಲಿ ಮೂಲ ವಿಜ್ಞಾನಗಳನ್ನು ಬೋಧಿಸುವವರೇ ಇಲ್ಲವಾಗಬಹುದು ಎಂಬ ಕಳವಳ ಡಾ॥ ಸಿ. ಎನ್. ಆರ್. ರಾವ್ ಅವರ ಮಾತುಗಳಲ್ಲಿ ವ್ಯಕ್ತವಾಯಿತು.

**ಪರಂಜ್ಯೋತಿ**

ಸರಕಾರದಲ್ಲಿರುವ ಪ್ರಭೃತಿಗಳಂತೂ ವಿಜ್ಞಾನಿಗಳ ಅಭಿಪ್ರಾಯಕ್ಕೆ ಕಿವಿಗೊಡುತ್ತಿಲ್ಲ. ಅವರು ಗ್ರಹಿಸಿದ್ದೇ ವಿಜ್ಞಾನ ಎಂಬ ಕುರುಡು ಹಟ ಅವರದು ಎಂದೂ ಅವರು ಹೇಳಿದರು. ಮಾತಿನ ಮಧ್ಯೆ, ಮತ್ತೊಂದು ವಿಷಯವನ್ನೂ ಪ್ರಸ್ತಾಪಿಸಿದರು.

ಆಗಿನ ಮಾನವ ಸಂಪನ್ಮೂಲ ಮಂತ್ರಿಗಳು ಯಾವುದೇ ಗಹನವಾದ ವಿಷಯ ಚರ್ಚಿಸಲು ನಾಡಿನ ನಲವತ್ತೈವತ್ತು ಮಂದಿ ಖ್ಯಾತ ವಿಜ್ಞಾನಿಗಳ ಸಭೆ ಕರೆದರಂತೆ. ವೈಜ್ಞಾನಿಕ ಮನೋಭಾವವನ್ನು ವೃದ್ಧಿಸುವ ಬಗ್ಗೆ, ಶಿಕ್ಷಣದಲ್ಲಿ ವಿಜ್ಞಾನ ವಿಷಯಗಳಿಗೆ ಹೆಚ್ಚು ಒತ್ತು ನೀಡಬೇಕಾದ ಅಗತ್ಯದ ಬಗ್ಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಸೂಚಿಸಲು ವಿಜ್ಞಾನಿಗಳು ಉತ್ಸುಕರಾಗಿದ್ದರು.

ಆದರೆ ಮಂತ್ರಿ ಮಹೋದಯರು ಅದಕ್ಕೆಲ್ಲ ಅವಕಾಶ ನೀಡಲಿಲ್ಲ. ಅವರಿಗೂ ವಿಜ್ಞಾನದ ಪರಿಚಯವಿತ್ತು. ಅವರಿಗೆ ಪರಿಚಯವಿದ್ದ ವಿಜ್ಞಾನ ಬೇರೆಯೇ ಆಗಿತ್ತು. ಅವರ ವಿದ್ವತ್ ಭಾಷಣ ನೆರೆದಿದ್ದ ವಿಜ್ಞಾನಿಗಳನ್ನು ಅಣಕಿಸುವಂತಿತ್ತು. ನೀವು ಈಗ ವಿಜ್ಞಾನ ಎಂದು ಮೆರೆದಾಡುತ್ತೀರಲ್ಲ ಅದು ನಮಗೇನೂ ಹೊಸತಲ್ಲ. ವೇದ ಉಪನಿಷತ್ತು ಕಾಲದಿಂದಲೇ ನಮಗೆ ಅದರ ಪರಿಚಯವಿತ್ತು. ವೈಮಾನಿಕ ಶಾಸ್ತ್ರದ ಪರಿಚಯವಿತ್ತು. ನಮ್ಮ ಪುರಾತನರಿಗೆ ಅಂತರಿಕ್ಷ ವಿಜ್ಞಾನದ ಪರಿಚಯವಿತ್ತು. ಶಸ್ತ್ರಚಿಕಿತ್ಸೆಯಲ್ಲಿ ನಾವು ಜಗತ್ತಿಗೆ ಮೊದಲಿಗರಾಗಿದ್ದೆವು – ಮುಂತಾಗಿ, ನೆರೆದಿದ್ದ ವಿಜ್ಞಾನಿಗಳನ್ನು ದಿಗ್ಭ್ರಮೆಗೊಳಿಸಿದರು! ನಿದರ್ಶನವಾಗಿ ರಾಮಾಯಣ, ಮಹಾಭಾರತದ ಪ್ರಕರಣಗಳನ್ನು ಉದ್ಧರಿಸಿದರು. ಅವರ ವಾಗ್ಝರಿಯಲ್ಲಿ ತೇಲಿಹೋದವರಂತೆ, ನೆರೆದಿದ್ದ ವಿಜ್ಞಾನಿಗಳು ಮೌನಿಬಾಬಾಗಳಾದರು. ಯಾರೂ ಮಾತಾಡುವ ಧೈರ್ಯ ತೋರಿಸಲಿಲ್ಲ.

## ಪದ್ಮವಿಭೂಷಣ ಡಾ॥ ರೊದ್ದಂ ನರಸಿಂಹ

ನಾಲ್ಕು ವರ್ಷಗಳ ನಂತರ ನಾವು ಮತ್ತೊಮ್ಮೆ ಜವಹರಲಾಲ್ ನೆಹರೂ ಉನ್ನತ ವೈಜ್ಞಾನಿಕ ಸಂಶೋಧನಾಲಯಕ್ಕೆ ಹೋಗುವ ಅವಕಾಶ ಒದಗಿ ಬಂದಿತು. ವಿಶೇಷ ಸಂಚಿಕೆಗಾಗಿ ಡಾ॥ ರೊದ್ದಂ ನರಸಿಂಹ ಅವರನ್ನು ಸಂದರ್ಶಿಸಲು ಹೊಸತು ಸಂಪಾದಕ ಡಾ॥ ಜಿ. ರಾಮಕೃಷ್ಣ ಮತ್ತು ಮಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಗಣಿತಶಾಸ್ತ್ರ ಪ್ರಾಧ್ಯಾಪಕ ಡಾ॥ ಕೆ. ಎಸ್. ಸಂಪತ್‌ಕುಮಾರ್ ಇವರ ಜೊತೆಗೆ ನಾನಿದ್ದೆ.

ಸಂದರ್ಶನ ನಡೆಸಿದ ಸಂದರ್ಭದಲ್ಲಿ (೨೦೦೫), ಅವರು ಸಂಶೋಧನ ಸಂಸ್ಥೆಯ ಎಂಜಿನಿಯರಿಂಗ್ ವಿಭಾಗವೊಂದರ ಮುಖ್ಯಸ್ಥರಾಗಿದ್ದರು.

ರೊದ್ದಂ ಅವರು ವೈಮಾನಿಕ ಶಾಸ್ತ್ರಕ್ಕೆ (ಏರೋಸ್ಪೇಸ್) ಸಂಬಂಧಿಸಿದ ತಂತ್ರಜ್ಞಾನ, ಅದಕ್ಕೆ ಪೂರಕವಾದ ದ್ರವಚಲನಶಾಸ್ತ್ರ (ಫ್ಲುಯಿಡ್ ಡೈನಮಿಕ್ಸ್) ಇವುಗಳಲ್ಲಿ ವಿಶ್ವಮಾನ್ಯತೆ ಪಡೆದವರು. ಭಾರತೀಯ ವಿಜ್ಞಾನ ಸಂಸ್ಥೆಯ ಏರೋಸ್ಪೇಸ್ ಎಂಜಿನಿಯರಿಂಗ್ ವಿಭಾಗದ ಪ್ರಾಧ್ಯಾಪಕ ಮತ್ತು ನ್ಯಾಷನಲ್ ಏರೋಸ್ಪೇಸ್ ಪ್ರಯೋಗಾಲಯದ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದವರು.

ಅವರು ಬೆಂಗಳೂರಿನ ಆಚಾರ್ಯ ಪಾಠಶಾಲೆಯ ವಿದ್ಯಾರ್ಥಿ. ನಂತರ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ, ಮುಂದೆ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಉನ್ನತ ವ್ಯಾಸಂಗ ಮಾಡಿದರು. ಬಳಿಕ ಅಮೆರಿಕದ ಖ್ಯಾತ ಕ್ಯಾಲಿಫೋರ್ನಿಯ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಸಂಸ್ಥೆಯಲ್ಲಿ ವ್ಯಾಸಂಗ ಮಾಡಿ ಪಿಎಚ್.ಡಿ. ಪದವಿ ಗಳಿಸಿದರು.

ಅಮೆರಿಕದಲ್ಲಿದ್ದಾಗ ಬೋಯಿಂಗ್ ಸಂಸ್ಥೆಯ ಉದ್ಯೋಗ ಅವರನ್ನು ಅರಸಿ ಬಂದಿತು. ಜೇಬು ತುಂಬಿಸುವಷ್ಟು ಉನ್ನತ ವೇತನ. ಆದರೆ ರೊದ್ದಂ ಅತ್ತ ಮನಸು ಮಾಡಲಿಲ್ಲ. ಅವರ ಒಲವು ಸಂಶೋಧನೆಯತ್ತ. ಭಾರತದಲ್ಲೇ ಸಂಶೋಧನೆ ಮಾಡಬೇಕೆಂಬ ಸಂಕಲ್ಪ. ಹಾಗೇ ಅವರು ಭಾರತಕ್ಕೆ ಹಿಂದಿರುಗಿದರು. ಬೆಂಗಳೂರೇ ಅವರ ಕಾರ್ಯಕ್ಷೇತ್ರವಾಯಿತು.

ಸಂದರ್ಶಕರು ಕೇಳಿದ ಪ್ರಶ್ನೆಗಳಿಗೆಲ್ಲ ಅವರು ಸಮರ್ಪಕ ಉತ್ತರ ನೀಡಿದರು. ಕೆಲವೊಮ್ಮೆ ಮತ್ತಷ್ಟು ಸರಳವಾಗಿ ವಿವರಿಸಿಯೂ ಹೇಳಿದರು.

ನಮ್ಮನ್ನು ಅವರ ಜೊತೆಯಲ್ಲಿ ಊಟಕ್ಕೆ ಕರೆದೊಯ್ದರು. ಆಗಲೂ ಅವರ ಕೆಲವು ವಿಷಯಗಳನ್ನೂ ವಿವರಿಸುತ್ತಲೇ ಇದ್ದರು. ಊಟದ ಹಾಲಿನಲ್ಲಿ ನೆರೆದಿದ್ದ ಮರಿ ಸಂಶೋಧಕರೆಲ್ಲ ನಮ್ಮತ್ತ ಬೆರಗಿನಿಂದ ನೋಡುವವರೆ!

ಊಟದ ನಂತರವೂ ಸಂದರ್ಶನ ಮುಂದುವರಿಯಿತು. ಮಾತಿನ ಮಧ್ಯೆ ಅವರು ತಮ್ಮ ಶಾಲಾ ದಿನಗಳನ್ನು, ಅಲ್ಲಿ ಬೋಧಿಸುತ್ತಿದ್ದ ಮೆಚ್ಚಿನ ಮೇಷ್ಟರುಗಳನ್ನು ನೆನಪು ಮಾಡಿಕೊಂಡರು.

ಅವರ ಮೊಬೈಲ್ ರಿಂಗಣಿಸಿತು. ಅವರು ಅದನ್ನು ಕಿವಿಗಿರಿಸಿಕೊಂಡು ಸ್ವಲ್ಪ ಹೊತ್ತು ಮಾತಾಡಿದರು.

ಮಾತು ಕೈಯಲ್ಲಿದ್ದ ಮೊಬೈಲ್ ಫೋನ್ ತಂತ್ರಜ್ಞಾನದ ಕಡೆಗೆ ಹೊರಳಿತು. ವಾತಾವರಣದಲ್ಲಿ ಮಿಲಿಯ – ಮಿಲಿಯಾಂತರ ರೇಡಿಯೋ ಅಲೆಗಳ ರೂಪದ ಅಂಕಿಗಳು ತಮ್ಮಷ್ಟಕ್ಕೆ ತೇಲಾಡುತ್ತಿರುತ್ತವೆ. ನಿಮ್ಮ ಮಿತ್ರನಿಗೆ ಕರೆಮಾಡಬೇಕಾಗಿದೆ. ಆತ ಸಮೀಪದ ಬಡಾವಣೆಯಲ್ಲಿರಬಹುದು ಅಥವಾ ದೂರದ ಊರಿನಲ್ಲಿರಬಹುದು. ಆತನ ಅಂಕೆಗಳನ್ನು ಒತ್ತಿದಕೂಡಲೇ ಒಂದೆರಡು ಕ್ಷಣಗಳಲ್ಲಿ ಆತನೊಂದಿಗೆ ಸಂಪರ್ಕ ಸಾಧ್ಯವಾಗುತ್ತದೆ! ಎಂಥಾ ವಿಸ್ಮಯ ಅಲ್ಲವೆ?

ಅವರು ಮೊಬೈಲ್ ತಂತ್ರಜ್ಞಾನವನ್ನು ವಿವರಿಸಿದ ರೀತಿಯೇ ಅದ್ಭುತವಾಗಿತ್ತು!

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧'ಬಿ' ಕ್ರಾಸ್
ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

**ಪದ್ಮವಿಭೂಷಣ ಡಾ॥ ರೊದ್ದಂ ನರಸಿಂಹ**

# ಚಿನ್ನ

ಮಣ್ಣಿನಲಿ
ಮಾನವ ಗೆಣಸು ಅಗೆದು
ತಿನ್ನುತ್ತಿದ್ದಾಗ
ಬಡತನ ಇರಲಿಲ್ಲ
ಮಣ್ಣಿನಲಿ
ಮಾನವ ಚಿನ್ನ ತೆಗೆದು
ಲಲ್ಲೆಗರೆದಾಗ
ಬಡತನ ಪುಟಿದದ್ದು

**ದ್ವಾರನಕುಂಟೆ ಪಾತಣ್ಣ**

# ‘ಚಮ್ಮಟಿಗೆ’ – ಕತ್ತಲ ಲೋಕದೊಳಗೊಂದು ಪಂಜಿನ ಮೆರವಣಿಗೆ




ಲೇಖಕರು : **ವಿಕಾಸ್ ಆರ್ ಮೌರ್ಯ**

ಬೆಲೆ : ರೂ. ೧೬೨/– ಪುಟ : ೧೯೪

ಪ್ರಕಾಶಕರು : **ಅಹರ್ನಿಶಿ ಪ್ರಕಾಶನ**

ಜ್ಞಾನವಿಹಾರ ಬಡಾವಣೆ, ಕಂಟ್ರಿಕ್ಲಬ್ ಎದುರು
ವಿದ್ಯಾನಗರ, ಶಿವಮೊಗ್ಗ

**ಜ**ನಪರ ಹೋರಾಟಗಳ ನಿರಂತರ ಒಡನಾಡಿ ಹಾಗೂ ದಲಿತ ಚಿಂತನೆಗಳ ಯುವ ಭರವಸೆ, ವಿಕಾಸ್ ಆರ್. ಮೌರ್ಯ ಅವರು ಬರೆದ ‘ಚಮ್ಮಟಿಗೆ’ ಕೃತಿ ಇತ್ತೀಚೆಗೆ ಬಿಡುಗಡೆಯಾಗಿದೆ. ಇದು ಅವರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳ ಗುಚ್ಛ. ಈ ಎಲ್ಲ ಬರಹಗಳನ್ನು ಒಂದೆಡೆ ಸೇರಿಸಿ ರೂಪಿತವಾದ ಪುಸ್ತಕ ಚಮ್ಮಟಿಗೆ. ಕೃತಿ ಬಿಡುಗಡೆ ಸಮಾರಂಭದಲ್ಲಿ ಬಿಡುಗಡೆ ಮಾಡಿ ಮಾತನಾಡಿದ ಕನ್ನಡದ ಖ್ಯಾತ ಚಿಂತಕ ಹಾಗೂ ಪ್ರಗತಿಪರ ಬರಹಗಾರ ನಟರಾಜ್ ಹುಳಿಯಾರ್ ಹೇಳಿದಂತೆ ‘ದಲಿತ ಸಮುದಾಯ ಇಂದಿಗೂ ಎದುರಿಸಬೇಕಾಗಿ ಬಂದಿರುವ ದೌರ್ಜನ್ಯ, ತಾರತಮ್ಯ, ಶೋಷಣೆ ಮತ್ತು ಅತ್ಯಂತ ಅಮಾನವೀಯವಾದ ಹಿಂಸಾಚಾರವನ್ನು ಕುರಿತ ಕಟು ಆಕ್ರೋಶ, ಸಂಕಟ, ನೋವು ಮತ್ತು ಯಾಕೆ ಹೀಗೆ ಎಂಬ ಪ್ರಶ್ನೆ ಈ ಎಲ್ಲ ಬರಹಗಳ ಸ್ಥಾಯೀಭಾವ’. ಒಂದು ವೇಳೆ ಯಾರೋ ಒಬ್ಬ ಓದುಗರು ಈ ನೊಂದ ಜಗತ್ತಿನ ಕುರಿತ ಯಾವುದೇ ಅವಗಾಹನೆಯಿಲ್ಲದೆ ಮೊದಲ ಬಾರಿಗೆ ಈ ಕುರಿತಾದ ಬರಹಗಳನ್ನು ‘ಚಮ್ಮಟಿಗೆ’ಯಲ್ಲಿ ಓದಿದರೂ, ಅದು ಅವರ ಅಂತರಾತ್ಮವನ್ನು ಕಲಕಿ ದಿಗ್ಭ್ರಾಂತರನ್ನಾಗಿಸುವಷ್ಟು ಈ ಕೃತಿ ಶಕ್ತಿಶಾಲಿಯಾಗಿದೆ. ಈ ಎಲ್ಲ ಬರಹಗಳಲ್ಲಿರುವ ಪ್ರಾಮಾಣಿಕ ಸಿಟ್ಟು ಮತ್ತು ಪರಿವರ್ತನೆಯ ತುಡಿತ ಓದುಗರನ್ನು ತಾಕದೆ ಇರದು. ಆದ್ದರಿಂದಲೇ ಈ ಕೃತಿಯನ್ನು ಪರಿಚಯಿಸುವ ಲೇಖನಕ್ಕೆ ‘ಚಮ್ಮಟಿಗೆ’–ಕತ್ತಲ ಲೋಕದೊಳಗೊಂದು ಪಂಜಿನ ಮೆರವಣಿಗೆ ಎಂಬ ಈ ಶೀರ್ಷಿಕೆಯೇ ಸೂಕ್ತವೆನಿಸಿತು.

‘ಚಮ್ಮಟಿಗೆ’ಯಲ್ಲಿ ‘ಅಂಬೇಡ್ಕರ್’, ‘ಅರಿವು’, ‘ಎಚ್ಚರ’ ಎಂಬ ಮೂರು ವಿಭಾಗಗಳ ಅಡಿಯಲ್ಲಿ ಒಟ್ಟು ೪೧ ಲೇಖನಗಳು ಹಾಗೂ ಇವಲ್ಲದೆ ೨ ಸಂದರ್ಶನಗಳಿವೆ. ಬಹುಪಾಲು ಎಲ್ಲಾ ಲೇಖನಗಳೂ ಬಹು ಮುಖ್ಯವಾದ ಐತಿಹಾಸಿಕ – ಸಾಮಾಜಿಕ – ರಾಜಕೀಯ ವಿಚಾರಗಳಿಗೆ ಬೆಳಕು ಚೆಲ್ಲುತ್ತವೆ. ಸಿಪಾಯಿ ದಂಗೆ ಎಂದು ಕರೆಯಲಾಗುವ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದಲಿತ ದಮನಿತ ಸಮುದಾಯಗಳ ವೀರಾಗ್ರಣಿಗಳ ಸಾಹಸ, ಹೋರಾಟ ಮತ್ತು ಬಲಿದಾನಗಳನ್ನು ದಾಖಲಿಸುವ ‘ಸಿಪಾಯಿ ದಂಗೆಯಲ್ಲಿ ದಲಿತರ ಪಾತ್ರ’ ಲೇಖನವಂತೂ ಬಹುಶಃ ಕನ್ನಡದ ಓದುಗರು ಊಹಿಸಿಲ್ಲದಿರಬಹುದಾದ ಹೊಸ ವಿಚಾರಗಳನ್ನು, ಚರಿತ್ರೆಯ ಪುಟಗಳಲ್ಲಿ ಹೂತುಹೋದ ದಲಿತ ದಮನಿತರ ಕೆಚ್ಚಿನ ಕಥೆಗಳನ್ನು ಬೆಳಕಿಗೆ ತಂದಿರುವ ಅಪರೂಪದ ಐತಿಹಾಸಿಕ ದಾಖಲೆ. ಇಂಗ್ಲಿಷ್ ಭಾಷೆಯ ಕೆಲವೇ ನಿಯತಕಾಲಿಕಗಳಲ್ಲಿ ಅಪರೂಪಕ್ಕೆ ಮಾತ್ರ ಸಿಗುತ್ತಿದ್ದ ಇಂತಹ ವಿಶಿಷ್ಟವಾದ ಮಾಹಿತಿಯನ್ನು ಜೋಡಿಸಿ, ಸವಿವರವಾಗಿ ಕನ್ನಡದ ಓದುಗರಿಗೆ ನೀಡಿರುವುದು ಮಾತ್ರವೇ ಈ ಲೇಖನದ ವೈಶಿಷ್ಟ್ಯವಲ್ಲ. ಹೀಗೆ ಇತಿಹಾಸದ ಪುಟಗಳಲ್ಲಿ ಕಳೆದುಹೋಗಿರಬಹುದಾದ ಶೋಷಿತ ಸಮುದಾಯಗಳಿಗೆ ಸಂಬಂಧಿಸಿದ ಇನ್ನೂ ಎಂತೆಂತಹ ಅಮೂಲ್ಯ ವಿಚಾರಗಳು ಇರಬಹುದಲ್ಲ ಎಂಬ ಬಗ್ಗೆ ವಿಷಾದವನ್ನು ಮೂಡಿಸುವ; ಅಂತಹವನ್ನೂ ಕಂಡುಕೊಳ್ಳುವ ಪ್ರಯತ್ನ ಮಾಡಬೇಕೆಂದು ಎಲ್ಲಾ ಪ್ರಜ್ಞಾವಂತರಿಗೆ ಕರೆ ನೀಡಿ ಉತ್ತೇಜಿಸುವ ಲೇಖನವಿದು.

ಅದೇ ರೀತಿ, ‘ಕೋರೆಗಾಂವ್: ಅಸ್ಪೃಶ್ಯರ ಮೊದಲ ಗೆಲುವು’, ‘ಗಾಂಧಿವಾದಿಗಳಿಗೆ ಅಂಬೇಡ್ಕರ್‌ವಾದಿಯೊಬ್ಬರ ಪತ್ರ’ ಮೊದಲಾದ ಲೇಖನಗಳು ಬಹುಶಃ ಈ ಆಯಾಮದಿಂದ ಆಯಾ ವಿಷಯಗಳ ಕುರಿತು ಚರ್ಚಿಸುವ ಮೊದಲ ಓದು ಆಗಿರಬಹುದಾದ ಸಾಧ್ಯತೆಯಿದೆ. ಮೊದಲನೇ ಅಧ್ಯಾಯವಾದ ‘ಅಂಬೇಡ್ಕರ್’ ಒಳಗೊಂಡಿರುವ ಲೇಖನಗಳ ಮೂಲಕ ವಿಕಾಸ್ ಅಂಬೇಡ್ಕರ್‌ರವರ ವಿಚಾರಧಾರೆಯನ್ನೂ, ಅವರ ಹೋರಾಟಗಳನ್ನೂ ವಿಸ್ತಾರವಾಗಿ ಪರಿಚಯಿಸುವುದಷ್ಟೇ ಮುಖ್ಯವಾದ ಇಂದಿನ ಸಂದರ್ಭಕ್ಕೆ ಅತ್ಯಗತ್ಯವಾದ ಮತ್ತೊಂದು ಹೊಣೆಗಾರಿಕೆಯನ್ನೂ ನಿಭಾಯಿಸಿದ್ದಾರೆ – ಅಂಬೇಡ್ಕರ್‌ರವರನ್ನೂ ಒಳಗೊಂಡು ಇಡೀ ಶೋಷಿತ ಸಮುದಾಯವನ್ನು ತಾವು ತೋಡಿರುವ ಖೆಡ್ಡಾಗೆ ಬೀಳಿಸಲು ಯತ್ನಿಸುತ್ತಿರುವ ಸಂಘಪರಿವಾರದ ಪ್ರಯತ್ನಗಳಿಗೆ ಸರಿಯಾದ ಎದಿರೇಟು ನೀಡುವುದರ ಮೂಲಕ. ‘ಅಂಬೇಡ್ಕರ್ ಎಂಬ ಬೆಂಕಿ ಕೆಂಡ ಸಂಘಿಗಳ ಸೆರಗಿನಲ್ಲಿ’ ಲೇಖನ ಪೂರ್ಣವಾಗಿ ಈ ವಿಚಾರವನ್ನೇ ಚರ್ಚಿಸಿದರೆ, ಇನ್ನುಳಿದ ಕೆಲವು ಬರಹಗಳಲ್ಲೂ ಸಹಾ ಈ ಕುರಿತ ಚಿಂತನೆಯನ್ನು ಮುಂದಿಡಲಾಗಿದೆ. ತಮ್ಮ ‘ಹಿಂದುತ್ವ ಮತ್ತು ದಲಿತರು’ ಕೃತಿಯಲ್ಲಿ ಆನಂದ್ ತೇಲ್ತುಂಬ್ಡೆಯವರು ಮಂಡಿಸುವ ಪ್ರಧಾನ ಧಾರೆಯಾದ ‘ಉಗ್ರ ಹಿಂದುತ್ವವು ದಲಿತರನ್ನು ತನ್ನ ಕಪಿಮುಷ್ಟಿಯಲ್ಲಿ ಬಂಧಿಸಿರುವ ವಿದ್ಯಮಾನವು ಗುಜರಾತಿನಲ್ಲಿ ಪೂರ್ಣ ಪ್ರಮಾಣದಲ್ಲಿ ಹೊರಗೆ ಬಿದ್ದಿದ್ದರೂ ಅದು ಈ ರಾಜ್ಯಕ್ಕಷ್ಟೇ ಸೀಮಿತವಾದ ವಿದ್ಯಮಾನವಾಗಿಲ್ಲ. ಈ ಶಕ್ತಿಗಳು ದಲಿತ ಸಮುದಾಯಗಳನ್ನು ಒಳಹೊಕ್ಕು ರಾಜಕೀಯವಾಗಿ ಮುನ್ನುಗ್ಗುತ್ತಿರುವ ಸಂಗತಿಗಳು ಇತರ ರಾಜ್ಯಗಳಿಂದಲೂ ವರದಿಯಾಗುತ್ತಿವೆ. ಈ ಸಮಸ್ಯೆಯು ದೇಶದ ಭವಿಷ್ಯದ ದೃಷ್ಟಿಯಿಂದ ಉಪೇಕ್ಷಿಸುವಂಥದ್ದಲ್ಲ.

## ಮಲ್ಲಿಗೆ

ಅರಿವು ಮತ್ತು ಎಚ್ಚರ ಅಧ್ಯಾಯಗಳಲ್ಲಿರುವ ಲೇಖನಗಳ ಮೂಲಕ ಲೇಖಕರು ಸಮಕಾಲೀನ ಸಂಗತಿಗಳಿಗೆ ಮುಖಾಮುಖಿಯಾಗುವ ಕೆಲಸ ಮಾಡಿದ್ದಾರೆ. ಅನೇಕ ದಲಿತರ ಮೇಲಿನ ದೌರ್ಜನ್ಯದ ಭಯಂಕರವಾದ ಪ್ರಕರಣಗಳು, ಆ ಕುರಿತ ನ್ಯಾಯಾಂಗದ ಆಷಾಢಭೂತಿತನ, ನಮ್ಮ ಸಮಾಜದಲ್ಲಿ ಇಷ್ಟೆಲ್ಲಾ ಕಾಲ ಕಳೆದ ಮೇಲೂ ತುಂಬಿಕೊಂಡಿರುವ ಜಾತಿ ದುರಹಂಕಾರ ಮತ್ತು ಅದರ ಪರಿಣಾಮವಾಗಿ ಇಂದಿಗೂ ಮುಂದುವರೆದಿರುವ ದಲಿತರು ಮಲ ಬಾಚುವಂತಹ ಶೋಚನೀಯವಾದ ಸ್ಥಿತಿ, ಆಳುವ ಸರ್ಕಾರಗಳನ್ನು ನಿರ್ಧರಿಸುವ ಜಾತಿ ಲೆಕ್ಕಾಚಾರ, ಅವರ ನೀತಿಗಳು–ಎಲ್ಲವನ್ನೂ ಕಟುವಾದ ಮತ್ತು ತಾರ್ಕಿಕವಾದ ಪ್ರಶ್ನೆಗಳನ್ನಿಟ್ಟು ವಿಕಾಸ್ ಜಾಲಾಡುತ್ತಾರೆ.

ಹಿಂದುತ್ವ ಶಕ್ತಿಗಳು ನಿಜವಾಗಿಯೂ ದಲಿತ ಸಮುದಾಯಗಳನ್ನು ನಿಯಂತ್ರಿಸುವಂತಾದರೆ ಈ ವಿದ್ಯಮಾನವನ್ನು ದಲಿತ ಮತ್ತಿತರ ಪ್ರಗತಿಪರ ಚಳವಳಿಗಳ ಸದ್ಯದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಗಮನಿಸುವುದಾದರೆ, ಈ ದೇಶದ ಭವಿಷ್ಯವು ನಿರ್ನಾಮವಾಗುವ ಆತಂಕಕಾರಿ ಸ್ಥಿತಿಯು ನಮ್ಮ ಮುಂದಿದೆ ಎಂದಾಗುತ್ತದೆ. ಮುಖ್ಯವಾಹಿನಿಯ ಬುದ್ಧಿಜೀವಿಗಳು ಒಪ್ಪಲು ಸಿದ್ಧರಿಲ್ಲದಿದ್ದರೂ ದೇಶದ ಪರಿವರ್ತನಾ ರಾಜಕಾರಣದಲ್ಲಿ ದಲಿತರದ್ದು ಅಪರಿಮಿತವಾದ ಶಕ್ತಿ. ದಲಿತರು ಈ ನೆಲದ ಸಾಮಾಜಿಕ ಬದುಕಿನಲ್ಲಿ ಸ್ವಾಭಾವಿಕವಾಗಿಯೇ ಕಾರ್ಮಿಕ ವರ್ಗವಾಗಿ ರೂಪುಗೊಂಡವರು. ಕ್ರಾಂತಿಕಾರಿ ಪರಿವರ್ತನೆಯ ದಿಕ್ಕಿನಲ್ಲಿ ದಲಿತ ಸಮುದಾಯವು ಅಗಾಧ ಸಾಮರ್ಥ್ಯವುಳ್ಳ ಜ್ವಾಲಾಮುಖಿಯಂತೆ. ಈ ಶಕ್ತಿಯು ವಿಘಟನೆಯಾಗಲು ಬಿಡಬಾರದು. ಮೇಲಾಗಿ ಇದನ್ನು ಸಮಾನತೆಯ ಶತ್ರುಗಳು ಅಪಹರಿಸುವಂತಾಗಬಾರದು' ಎಂಬ ಚಿಂತನೆಯ ಧಾರೆಯೇ ವಿಕಾಸ್ ಆರ್. ಮೌರ್ಯ ಅವರ ಚಿಂತನಾಧಾರೆಯೂ ಆಗಿದೆ.




ಅರಿವು ಮತ್ತು ಎಚ್ಚರ ಅಧ್ಯಾಯಗಳಲ್ಲಿರುವ ಲೇಖನಗಳ ಮೂಲಕ ಲೇಖಕರು ಸಮಕಾಲೀನ ಸಂಗತಿಗಳಿಗೆ ಮುಖಾಮುಖಿಯಾಗುವ ಕೆಲಸ ಮಾಡಿದ್ದಾರೆ. ಅನೇಕ ದಲಿತರ ಮೇಲಿನ ದೌರ್ಜನ್ಯದ ಭಯಂಕರವಾದ ಪ್ರಕರಣಗಳು, ಆ ಕುರಿತ ನ್ಯಾಯಾಂಗದ ಆಷಾಢಭೂತಿತನ, ನಮ್ಮ ಸಮಾಜದಲ್ಲಿ ಇಷ್ಟೆಲ್ಲಾ ಕಾಲ ಕಳೆದ ಮೇಲೂ ತುಂಬಿಕೊಂಡಿರುವ ಜಾತಿ ದುರಹಂಕಾರ ಮತ್ತು ಅದರ ಪರಿಣಾಮವಾಗಿ ಇಂದಿಗೂ ಮುಂದುವರೆದಿರುವ ದಲಿತರು ಮಲ ಬಾಚುವಂತಹ ಶೋಚನೀಯವಾದ ಸ್ಥಿತಿ, ಆಳುವ ಸರ್ಕಾರಗಳನ್ನು ನಿರ್ಧರಿಸುವ ಜಾತಿ ಲೆಕ್ಕಾಚಾರ, ಅವರ ನೀತಿಗಳು– ಎಲ್ಲವನ್ನೂ ಕಟುವಾದ ಮತ್ತು ತಾರ್ಕಿಕವಾದ ಪ್ರಶ್ನೆಗಳನ್ನಿಟ್ಟು ವಿಕಾಸ್ ಜಾಲಾಡುತ್ತಾರೆ. 'ದಲಿತರಿಗೆ ಈ ದೇಶ ತಮ್ಮದೆನಿಸುತ್ತಿಲ್ಲ'ದಂತಹ ಲೇಖನಗಳು ಶೀರ್ಷಿಕೆಯಿಂದಲೇ ಆರಂಭಿಸಿ ನಮ್ಮನ್ನು ಅಲುಗಾಡಿಸುತ್ತವೆ. ಸರ್ಕಾರದ ಕೆಲವು ಯೋಜನೆಗಳನ್ನೂ ವಿಶ್ಲೇಷಿಸುವ, ಅಂಕಿ ಅಂಶ ಸಹಿತವಾಗಿ ಬಹು ದೊಡ್ಡ ಶೋಷಿತ ದಲಿತ ಸಮುದಾಯದ ಪ್ರಸ್ತುತ ಪರಿಸ್ಥಿತಿಯನ್ನು ವಿವರಿಸುವ ಹಲವು ಲೇಖನಗಳು ಇದರಲ್ಲಿವೆ. ಉಳಿದ ಹಲವು ಬರಹಗಳು ಬೇರೆ ಬೇರೆ ಸಂದರ್ಭಗಳಲ್ಲಿ, ಮುಖ್ಯವಾಗಿ ದಲಿತರ ಮೇಲಿನ ದೌರ್ಜನ್ಯದ ಘಟನೆಗಳು ನಡೆದಾಗ, ಅವುಗಳ ಸುತ್ತಲಿನ ಅನೇಕ ಸೂಕ್ಷ್ಮ ವಿವರಗಳನ್ನೂ, ಆ ಕುರಿತ ವಿಶ್ಲೇಷಣೆಯನ್ನೂ ನೀಡುವಂತಹವು. ಜೊತೆಗೆ, ಭಾರತದಲ್ಲಿ ಜಾತಿ ವಿನಾಶ ಸಾಧ್ಯವಾಗುವ ಬಗೆ ಏನು ಎಂಬಂತಹ ಮೂಲಭೂತ ಪ್ರಶ್ನೆಗಳನ್ನೆತ್ತುವ ತಾತ್ವಿಕವಾದ ಬರಹಗಳೂ ಇಲ್ಲಿವೆ.

ಕೊನೆಯದಾಗಿ, ಸಂದರ್ಶನಗಳು. ಇಡೀ ಕರ್ನಾಟಕದ ಪ್ರಜ್ಞಾವಂತ ವಲಯವನ್ನೇ ನಡುಗಿಸಿದ್ದ ಕಂಬಾಲಪಲ್ಲಿಯಲ್ಲಿ ೨೦೦೦ನೇ ಇಸವಿಯಲ್ಲಿ ನಡೆದ ಬರ್ಬರವಾದ ದಲಿತರ ಸಾಮೂಹಿಕ ಹತ್ಯೆಯ ಘಟನೆಯು ನ್ಯಾಯಾಲಯದ ಎದೆಯೊಳಗೆ ಸಣ್ಣ ಮಾನವೀಯ ಕಂಪನವನ್ನು ಹುಟ್ಟುಹಾಕಲೆತ್ನಿಸಿ, ನ್ಯಾಯಾಂಗದ ಪಕ್ಷಪಾತಿತನ ಮತ್ತು ನಿರ್ಲಿಪ್ತತೆಯ ಎದುರು ಸೋತು, 'ಸಾಕ್ಷ್ಯಾಧಾರಗಳ ಕೊರತೆ'ಯಿಂದ ಬಿದ್ದುಹೋಯಿತು. ಆ ಪ್ರಕರಣದ ಪ್ರಮುಖ ಸಾಕ್ಷಿ ವೆಂಕಟರಾಯಪ್ಪ. ತನ್ನ ಕುಟುಂಬದ ನಾಲ್ವರು ಆ ಜಾತಿವಾದದ ಬೆಂಕಿಯಲ್ಲಿ ಉರಿದುಹೋದದ್ದನ್ನು ನೋಡಿದ್ದ ವೆಂಕಟರಾಯಪ್ಪನವರ ಒಂದು ಸಂದರ್ಶನ ಇದರಲ್ಲಿದೆ. ಹಾಗೆಯೇ ಆಂಧ್ರದ 'ಕುಲ ನಿರ್ಮೂಲನ ಪೋರಾಟ ಸಮಿತಿ'ಯ ಮುಖಂಡರಾದ ದುದ್ದು ಪ್ರಭಾಕರ್‌ರವರ ಮತ್ತೊಂದು ಸಂದರ್ಶನವಿದೆ. ಇವೆರಡೂ ತಮ್ಮದೇ ಆದ ರೀತಿಗಳಲ್ಲಿ ನಮ್ಮನ್ನು ಚಿಂತನೆಗೆ ಹಚ್ಚುವಂಥವು.

ಈ ಲೇಖನಗುಚ್ಛದ ವಿಶಿಷ್ಟತೆ ಇರುವುದು, ವರ್ತಮಾನಕ್ಕೆ ಲೇಖಕ ವಿಕಾಸ್ ಆರ್. ಮೌರ್ಯ ಅವರು ಸ್ಪಂದಿಸುವ ರೀತಿಯಲ್ಲಿ. ದೇಶದಲ್ಲಿ ನಡೆಯುವ, ದಲಿತರ ಬದುಕಿಗೆ ಸಂಬಂಧಿಸಿದ ಹೆಚ್ಚೂ ಕಡಿಮೆ ಮುಖ್ಯವಾದ ಎಲ್ಲಾ ಬೆಳವಣಿಗೆಗಳಿಗೂ ಅವರೊಳಗಿನ ಸೂಕ್ಷ್ಮ ಸಂವೇದನೆಯ ಮನುಷ್ಯ ಸ್ಪಂದಿಸಿದ್ದಾನೆನ್ನುವುದು ಬಹಳ ಮುಖ್ಯವಾದ ಸಂಗತಿ. ಈ ಸ್ಪಂದನೆ, ಹಲವು ಬಾರಿ ಆಗುವಂತೆ ಒಣ ತತ್ವಗಳ ವಿಶ್ಲೇಷಣೆಯೋ, ನಿರ್ಜೀವ ಅಂಕಿ ಅಂಶಗಳ ದಾಖಲೆಯೋ ಆಗದೆ, ಅತ್ಯಂತ ಜೀವಂತವಾದ ಭಾವನಾತ್ಮಕವಾದ ತುಡಿತವಾಗಿ ಈ ಬರಹಗಳಲ್ಲಿ ಹೊರಹೊಮ್ಮಿದೆ. ಜೊತೆಗೆ, ಮುನ್ನುಡಿಯಲ್ಲಿ ಕರ್ನಾಟಕದ ಈ ಕಾಲದ ಬಹುಮುಖ್ಯ ಜನಪರ ಚಿಂತಕರಾದ ಡಾ॥ ರಹಮತ್ ತರೀಕೆರೆಯವರು ಹೇಳಿರುವಂತೆ **"ತಲ್ಲಣ ಮತ್ತು ಭಾವನಾತ್ಮಕತೆ ಪ್ರಧಾನವಾಗಿರುವ ಇಲ್ಲಿನ ಚಿಂತನೆ, ಅಧ್ಯಯನಶೀಲತೆ ಮತ್ತು ಅಂಕಿ ಅಂಶಗಳ ಬಲವನ್ನೂ ಪಡೆದುಕೊಂಡಿದೆ. ಕೆಲವು ದಲಿತ ಚಿಂತಕರನ್ನು ಆವರಿಸಿಕೊಂಡಿರುವ ಸೈದ್ಧಾಂತಿಕ ಜಡತೆ, ಪಾಂಥಿಕ ಸಂಕುಚಿತತೆ ಮತ್ತು ನಿರಾಳತೆಗಳು ಇಲ್ಲಿಲ್ಲ... ಸಂಗಾತಿ ಚಿಂತನೆಗಳ ಅಥವಾ ಚಳವಳಿಗಳ ಮುಂದೆ ತಾತ್ವಿಕ ಭಿನ್ನಮತವನ್ನು ಪ್ರಶ್ನೆ ರೂಪದಲ್ಲಿ ಮುಂದಿಟ್ಟು ಸಂವಾದ ಬಯಸುವ ಧಾಟಿಯಿದೆ... ದಲಿತರು, ಬಡವರು, ಮಹಿಳೆಯರು, ಕಾರ್ಮಿಕರು ಹಾಗೂ ಮುಸ್ಲಿಮರನ್ನು ಒಳಗೊಂಡಂತೆ ಸಮಸ್ತ ದಮನಿತರನ್ನು ತನ್ನವರೆಂದು ಭಾವಿಸುವ ಇಡಿತನದ ವಿಶಾಲ ಗ್ರಹಿಕೆ ಈ ಕೃತಿಯಲ್ಲಿದೆ"** ಎಂಬುದು ಅಕ್ಷರಶಃ ಸತ್ಯ. ರಹಮತ್ ತರೀಕೆರೆಯವರೇ ಗುರುತಿಸಿರುವಂತೆ, ನವ ಉದಾರವಾದದ ಸಂದರ್ಭದಲ್ಲಿ ಈ ಎಲ್ಲವನ್ನೂ ವಿಶ್ಲೇಷಿಸುವ ತಾತ್ವಿಕ ಚಿಂತನೆಯ ಆಯಾಮ ಕಡಿಮೆಯಿರುವುದು, ಕೆಲವೊಮ್ಮೆ ಕೆಲವು ಲೇಖನಗಳ ವಾದಸರಣಿ ಮರುಕಳಿಸುವುದು, ಪರಿಹಾರದೆಡೆಗೆ ಸಣ್ಣ ಒಳನೋಟವೊಂದನ್ನು ಕಟ್ಟಿಕೊಡಬಹುದಾದ ಕೆಲವು ಲೇಖನಗಳ ಕೊರತೆ ಈ ಸಂಕಲನದಲ್ಲಿ ಕಾಣುತ್ತಿರುವುದು ಮೊದಲಾದ ಸಣ್ಣ ಸಂಗತಿಗಳನ್ನು ಹೊರತುಪಡಿಸಿದರೆ, 'ಚಮ್ಮಟಿಗೆ' ಎಲ್ಲರೂ ಓದಲೇಬೇಕಾದ ಹಾಗೂ ಓದಿ ಚರ್ಚಿಸಿ ಹಂಚಬೇಕಾದ ಸಂಗ್ರಹಯೋಗ್ಯ ಕೃತಿ. ಯುವ ದಲಿತ ಚಿಂತಕ ಹಾಗೂ ಬರಹಗಾರ ವಿಕಾಸ್ ಮೌರ್ಯರವರ ಈ ಕೃತಿಯನ್ನೂ ಒಳಗೊಂಡಂತೆ ಹಲವು ದಮನಿತ ದನಿಗಳು ಅದ್ಭುತವಾದ ಸೃಜನಶೀಲತೆಯೊಂದಿಗೆ ಲೋಕದೆದುರು ತಮ್ಮನ್ನು ತಾವು ಗಟ್ಟಿಯಾಗಿ ಪ್ರಸ್ತುತ ಪಡಿಸಿಕೊಳ್ಳುತ್ತಿರುವ ಪರಿ, ಭವಿಷ್ಯದ ಬಗೆಗೆ ಆಶಾವಾದವನ್ನೂ ಮೂಡಿಸುವಂತಿರುವುದು ವಾಸ್ತವ.

'ಚಮ್ಮಟಿಗೆ' ಎಂದರೆ ಚಾಟಿ ಅಥವಾ ಚಾವಟಿ ಎಂದರ್ಥ ಎಂದು ಕೃತಿ ಬಿಡುಗಡೆಯ ವೇಳೆ ವಿಕಾಸ್ ಮೌರ್ಯ ಹೇಳಿದರು. ಕೃತಿ ಓದಿದ ಮೇಲೆ ಆ ಚಮ್ಮಟಿಗೆಯ ಬೀಸಿನ ಏಟಿನಷ್ಟು ತೀಕ್ಷ್ಣವಾದ, ಹಿಂದೆಲ್ಲೋ ಓದಿದ್ದ ಈ ಕವಿತೆಯೇ ಪದೇ ಪದೇ ನೆನಪಾಯಿತು.

*'ನನಗೆ ಪ್ರತಿಭೆಯಿಲ್ಲವೆಂದಲ್ಲವೇ ನಿಮ್ಮ ಆರೋಪ*
*ನನ್ನ ಭೂಮಿಯನ್ನು ಕದ್ದ ಮೇಲೆ*
*ನನ್ನ ಕಲೆಗಳನ್ನು ತುಳಿದಿಕ್ಕಿದ ಮೇಲೆ*
*ನನ್ನ ಸುತ್ತಲೂ ನಿಷೇಧದ ಗೋಡೆಗಳನ್ನು ನಿಲ್ಲಿಸಿದ ಮೇಲೆ*
*ನನಗೆ ಪ್ರತಿಭೆಯೆಲ್ಲಿಯದು?*
*ಮಣ್ಣು ನನ್ನ ಪ್ರತಿಭೆ*
*ಮಣ್ಣಿನಿಂದ ಹುಟ್ಟಿದ ಮಿಂಚಿನ ಸಾರ ನನ್ನ ಪ್ರತಿಭೆ*
*ಮಣ್ಣ ಮೂಳೆ ತಳೆದ ಮನುಷ್ಯ ನನ್ನ ಪ್ರತಿಭೆ'*

● ಎಂಡ್ಲೂರಿ ಸುಧಾಕರ್*(ಕೃಪೆ: ದಲಿತ ರಾಜಕೀಯ –ರಾಮ್ ಪುನ್ಯಾನಿ)*

ಭರವಸೆಯ ಬರಹಗಾರರೂ, ತಮ್ಮ ಸಾಮಾಜಿಕ ಕ್ರಿಯಾಶೀಲತೆಯ ಕಾರಣಕ್ಕೆ ಹೋರಾಟಗಾರರೂ ಆಗಿ ನಮ್ಮೊಂದಿಗಿರುವ ವಿಕಾಸ್, ಅವರ ಕೃತಿಯನ್ನು ಬಹಳ ಪ್ರೀತಿ ಮತ್ತು ತಮ್ಮ ಎಂದಿನ ಅಚ್ಚುಕಟ್ಟುತನದೊಂದಿಗೆ ಪ್ರಕಟಿಸಿರುವ ಅಹರ್ನಿಶಿ ಪ್ರಕಾಶನದ ಅಕ್ಷತಾ ಹುಂಚದಕಟ್ಟೆ, ಈ ಕೃತಿಯ ಓದಿಗೆ ವಿಶಿಷ್ಟವಾದ ವಿಸ್ತಾರವನ್ನು ಒದಗಿಸುವಂಥ ಮುನ್ನುಡಿ ಬರೆದಿರುವ ರಹಮತ್ ಸರ್ ಮೊದಲಾಗಿ ಈ ಕೃತಿಗೆ ಕಾರಣರಾದ ಎಲ್ಲರೂ ಅಭಿನಂದನಾರ್ಹರು.

ಮಲ್ಲಿಗೆ
ಕರ್ನಾಟಕ ಜನಶಕ್ತಿ, ಮಂಡ್ಯ

## ವೆಂಕಟೇಶ್ ಬಿ. ಎಂ.

ನಾವು ಡಿಗ್ರಿ ಓದುತ್ತಿದ್ದ ದಿನಗಳು. ಒಂದು ದಿನ ನಮಗೆ ಗಣಿತ ಪಾಠ ಮಾಡಲು ಮೇಡಮ್ಮೊಬ್ಬರು ತರಗತಿ ಪ್ರವೇಶಿಸಿದರು. ಹಿಂದಿನ ಸೆಮಿಸ್ಟರಿನಲ್ಲಿ ಬೇರೆ ಪ್ರಾಧ್ಯಾಪಕರು ನಮಗೆ ಗಣಿತ ಪಾಠ ಮಾಡುತ್ತಿದ್ದರು. ಹೀಗಾಗಿ ಈ ಮೇಡಮ್ ನಮಗೆ ಹೊಸಬರು. ವ್ಯಾನಿಟಿ ಬ್ಯಾಗ್ ತಗಲಾಕಿಕೊಂಡೇ ತರಗತಿಗೆ ಬಂದಿದ್ದ ಈ ಮೇಡಮ್ ನಮ್ಮೆಲ್ಲರನ್ನೂ ನೋಡಿ ಒಮ್ಮೆ ಮುಗುಳ್ನಕ್ಕರು. ಸ್ಟಾಫ್ ರೂಮಿನಲ್ಲೇ ವ್ಯಾನಿಟಿ ಬ್ಯಾಗ್ ಇಟ್ಟು ಬರುವುದು ಬಿಟ್ಟು, ಅದನ್ನು ತರಗತಿಗೆ ತಗಲಾಕಿಕೊಂಡು ಬಂದಿದ್ದು ನಮಗೆ ವಿಚಿತ್ರವೆನಿಸಿತು. ಕೆಲವು ಹುಡುಗರು ಪಿಸಿಪಿಸಿ ಮಾತನಾಡತೊಡಗಿದರು. ಸ್ಟಾಫ್ ರೂಮಿನಲ್ಲಿ ವ್ಯಾನಿಟಿ ಬ್ಯಾಗಿಗೆ ಭದ್ರತೆಯಿಲ್ಲ; ಹೀಗಾಗಿ ಮುನ್ನೆಚ್ಚರಿಕೆ ವಹಿಸಿ ಅದನ್ನು ತರಗತಿಗೆ ತಂದಿದ್ದಾರೆ ಎಂದು ತೀರ್ಮಾನವಾಯಿತು. ಸ್ಟಾಫ್ ರೂಮಿಗೆ ವಿದ್ಯಾರ್ಥಿಗಳಂತೂ ಹೋಗಲು ಅವಕಾಶವಿರಲಿಲ್ಲ. ಹಾಗಾದರೆ, ಮೇಡಮ್ಮಿಗೆ ತಮ್ಮ ಸಹೋದ್ಯೋಗಿಗಳಲ್ಲಿ ಯಾರ ಮೇಲಾದರೂ ಅನುಮಾನ ಬಂದು, ತರಗತಿಗೆ ವ್ಯಾನಿಟಿ ಬ್ಯಾಗನ್ನು ತಗಲಾಕಿಕೊಂಡು ಬಂದಿದ್ದಾರೆ ಎಂದು ಒಂದಿಬ್ಬರು ಹೇಳಿದರು. ನಮ್ಮ ಗಣಿತ ಪ್ರಾಧ್ಯಾಪಕರಲ್ಲಿ ಯಾರಿಗೆ ಕದಿಯುವ ಚಾಳಿ ಇರಬಹುದು ಎಂದು ನಾನು ಯೋಚಿಸತೊಡಗಿದೆ! ಪಾಠ ಹೇಳಿಕೊಡೋ ಗುರುಗಳ ಮೇಲೆಯೇ ಕಳ್ಳತನದ ಆರೋಪ ಹೊರಿಸುವುದು ಸರಿಯಲ್ಲವೆಂದು, ನನ್ನ ಲಂಗುಲಗಾಮಿಲ್ಲದ ಕಲ್ಪನೆಗಳಿಗೆ ಬ್ರೇಕ್ ಹಾಕಿದೆ.

"ನಿಮ್ಮ ಮಾತು ಮುಗಿದಿಲ್ಲ ಎಂದು ನನಗೆ ಗೊತ್ತು, ಅದು ಮುಗಿಯುವುದೂ ಇಲ್ಲ. ಆದರೆ ನೀವು ಮೌನವನ್ನೂ ಕಲಿಯಬೇಕು" ಎಂದು ಮೇಡಮ್ ಹೇಳಿದರು.

ಸರಿ ಇನ್ನೇನು ಪಾಠ ಶುರು ಮಾಡುತ್ತಾರೆ ಎಂದು ಎಲ್ಲರೂ ಅಲರ್ಟ್ ಆದೆವು. ಮೊದಲು ಮೇಡಮ್ ತಮ್ಮ ಪರಿಚಯವನ್ನು ಸಂಕ್ಷಿಪ್ತವಾಗಿ ಮಾಡಿಕೊಂಡರು. ನಂತರ, "ನೋಡಿ, ಒಮ್ಮೆ ಆಕಾಶದ ಬಗ್ಗೆ ಯೋಚಿಸಿ. ವಿಶಾಲವಾದ ಆಕಾಶ! ಅದರಾಚೆಗಿನ ಗ್ರಹಗಳು, ನಕ್ಷತ್ರಗಳು, ಕೊನೆಯೇ ಇಲ್ಲದ ಬ್ರಹ್ಮಾಂಡ. ಇವುಗಳನ್ನೆಲ್ಲಾ ನೋಡಿದಾಗ ನಾವು ಎಷ್ಟು ಸಣ್ಣವರು ಎಂದು ಅರಿವಾಗುತ್ತದೆ. ಈ ಅಗಾಧತೆಯಲ್ಲಿ ನಾವೆಲ್ಲಾ ಪುಟ್ಟ ಚುಕ್ಕಿಗಳು ಅಷ್ಟೇ!" ಎಂದರು.

ಹೌದಲ್ಲವೇ? ಈ ಅನಂತ ವಿಶ್ವದಲ್ಲಿ ನಮ್ಮ ಸ್ಥಾನ ಎಷ್ಟು ಪುಟ್ಟದು! ಆದರೂ ದಾಂಧಲೆ ಮಾತ್ರ ದೊಡ್ಡದು. ನಮಗೆ ನಾವೇ ಆರೋಪಿಸಿಕೊಂಡ ಹಲವು ಸರಳುಗಳಲ್ಲಿ ನಾವು ಬಂಧಿತರಾಗಿದ್ದೇವೆ. ಹೀಗಾಗಿ ಕುವೆಂಪು ಪ್ರತಿಯೊಬ್ಬರ ಚೇತನ ಅನಿಕೇತನವಾಗಬೇಕಾದ ಆಶಯ ವ್ಯಕ್ತಪಡಿಸಿದ್ದು. ಮೇಡಮ್ಮಿನ ನುಡಿಗಳಿಂದ ನಮ್ಮಲ್ಲಿ ಕೆಲವರಿಗಾದರೂ ಹೊಸ ದರ್ಶನ ಪ್ರಾಪ್ತವಾಗಿತ್ತು.

ಶಿಕ್ಷಕರ ಪ್ರತಿ ಮಾತು ಕೂಡ ಮಕ್ಕಳ ಮನಸ್ಸನ್ನು ಆಕ್ರಮಿಸುತ್ತದೆ. ಶಿಕ್ಷಕರ ಕೆಲವು ಮಾತು, ಪ್ರಸಂಗಗಳು ಜೀವನಪರ್ಯಂತ ನಮ್ಮನ್ನು ಕಾಡುತ್ತವೆ. ಈ ಕಾಡುವಿಕೆ ಮೇಲಿನ ಪ್ರಸಂಗದಂತೆ ಧನಾತ್ಮಕವಾಗಿದ್ದರೆ ಬಹಳ ಒಳ್ಳೆಯದು. ಆದರೆ ಕೆಲವು ಬಾರಿ ಅದು ಜೀವನವಿಡೀ ಮಾಯದ ನೋವಾಗಿ ಸುಡುವ ಕೆಂಡವಾಗಬಹುದು. ನಮ್ಮ ಶಾಲೆಯಲ್ಲಿ ಒಂದು ದಿನ ಭೌತಶಾಸ್ತ್ರ ಪಾಠ ನಡೆಯುತ್ತಿತ್ತು. ನಾವೆಲ್ಲಾ ಗಪ್‌ಚುಪ್ಪಾಗಿ ಪಾಠ ಕೇಳುತ್ತಿದ್ದೆವು. ಸ್ವಲ್ಪ ಹೊತ್ತಿನ ನಂತರ, ಕೆಲವು ದಿನಗಳಲ್ಲೇ ನಿವೃತ್ತಿ ಹೊಂದಲಿದ್ದ ಹಿರಿಯ ಇಂಗ್ಲಿಷ್ ಶಿಕ್ಷಕರೊಬ್ಬರು ತರಗತಿ ಪ್ರವೇಶಿಸಿದರು. ಪಾಠ ಮಾಡುತ್ತಿದ್ದವರು ಯುವ ಶಿಕ್ಷಕ. ಹೀಗಾಗಿ ಹಿರಿಯ ಇಂಗ್ಲಿಷ್ ಶಿಕ್ಷಕರು ತರಗತಿಗೆ ಪ್ರವೇಶಿಸಿದ ಕೂಡಲೇ, ಅಪಾರವಾದ ಗೌರವಾದರಗಳಿಂದ ಅವರನ್ನು ಸ್ವಾಗತಿಸಿ ಅವರಿಗೆ ಮಾತನಾಡಲು ಅನುವು ಮಾಡಿಕೊಟ್ಟರು. ಹಿರಿಯ ಶಿಕ್ಷಕರು ತಾವು ನಿವೃತ್ತಿಯಾಗುತ್ತಿರುವ ವಿಚಾರ ತಿಳಿಸಿ, ಎಲ್ಲರಿಗೂ ಧನ್ಯವಾದ ಹೇಳತೊಡಗಿದರು. ಇಬ್ಬರು ಶಿಕ್ಷಕರೂ ಮೊದಲನೇ ಬೆಂಚಿನಿಂದ ಸ್ವಲ್ಪ ಮುಂದೆ, ತರಗತಿಯ ನಡುಭಾಗದಲ್ಲಿ ನಿಂತುಕೊಂಡಿದ್ದ ಕಾರಣ ಮೊದಲನೇ ಬೆಂಚಿನ ಹುಡುಗರಿಗೆ ಮಂಗಾಟ ಮಾಡಲು ಅವಕಾಶ ದೊರೆಯಿತು. ಒಬ್ಬ ಹುಡುಗ, ತನ್ನ ಕೆನ್ನೆಯ ಬಳಿ ಸೊಳ್ಳೆ ಸುಳಿದಾಡುತ್ತಿರುವ ಹಾಗೆ ನಟಿಸುತ್ತಾ, ಅದನ್ನು ಹೊಡೆಯುವವನಂತೆ ತನ್ನ ಕೆನ್ನೆಗೆ ಹೊಡೆದುಕೊಳ್ಳುತ್ತಿದ್ದ. ಅವನ ಹಾವಭಾವಗಳು ನಗು ಉಕ್ಕಿಸುವಂತೆ ಇದ್ದವು. ಎದುರಲ್ಲೇ ಇಬ್ಬರು ಶಿಕ್ಷಕರು ನಿಂತುಕೊಂಡಿದ್ದ ಕಾರಣ ಕೊನೆಯ ಬೆಂಚುಗಳಲ್ಲಿ ಕುಳಿತುಕೊಂಡಿದ್ದ ನಾವು ಉಕ್ಕಿ ಬರುತ್ತಿದ್ದ ನಗುವನ್ನು ಹರಸಾಹಸದಿಂದ ತಡೆದುಕೊಂಡಿದ್ದೆವು. ಆದರೆ, ಮೊದಲ ಬೆಂಚಿನ ಹುಡುಗನ ಮಂಗಾಟ ಜಾಸ್ತಿ ಆದ ಹಾಗೂ ನಮ್ಮ ಅಗ್ನಿಪರೀಕ್ಷೆಯಾಗುತ್ತಿತ್ತು. ಕೊನೆಗೂ ನಮ್ಮ ಪಕ್ಕದ ಬೆಂಚಿನ ಹುಡುಗ ಸೋತುಹೋದ. ಮೊದಲ ಬೆಂಚಿನವನ ಮಂಗಾಟವನ್ನು ಹಲ್ಲು ಕಿರಿಯುತ್ತಾ ನೋಡತೊಡಗಿದ. ಹಿರಿಯ ಶಿಕ್ಷಕರು ಇದನ್ನು ಗಮನಿಸಿಬಿಟ್ಟರು! ಅದೆಲ್ಲಿತ್ತೋ ಕೋಪ; ಒಮ್ಮೆಲೇ ಸ್ಫೋಟಗೊಂಡಿತು. ನಗುತ್ತಿದ್ದ ಹುಡುಗನನ್ನು ನಿಂತುಕೊಳ್ಳುವಂತೆ ಹೇಳಿದರು. ಕೋರ್ಟ್ ಮಾರ್ಷಲ್ ಶುರುವಾಯಿತು. ಅದೇನು ಸದ್ಯದಲ್ಲೇ ನಿವೃತ್ತಿಯಾಗಲಿದ್ದ ತಮ್ಮನ್ನು ಗೇಲಿ ಮಾಡುತ್ತಿದ್ದಾನೆ ಎಂದು ತಿಳಿದರೋ ಏನೋ! ಅಂದು ಅವರು ಬಳಸಿದ ಭಾಷೆ, ಹುಡುಗನಿಗೆ ಮಾತನಾಡಲೂ ಅವಕಾಶ ಕೊಡದೆ ಕೂಗಾಡಿ ವರ್ತಿಸಿದ ರೀತಿ ಇಂದಿಗೂ ನನ್ನನ್ನು ಕಾಡುತ್ತದೆ. ಪಕ್ಕದಲ್ಲೇ ನಿಂತಿದ್ದ ಯುವ ಶಿಕ್ಷಕರು ಕೂಡ ಹಿರಿಯರನ್ನು ಮೆಚ್ಚಿಸಲೋ ಏನೋ, ಬೈಗುಳದ ತುಪ್ಪಕ್ಕೆ ಬೆಂಕಿ ಸುರಿಯತೊಡಗಿದರು. ಆಗ ನನಗೆ ಇದೆಲ್ಲಾ ಹೊಳೆದಿರಲಿಲ್ಲ. ಸ್ನೇಹಿತನ ಮೇಲೆ ಅನುಕಂಪ ಮೂಡಿತ್ತು ಅಷ್ಟೇ. ಈ ಘಟನೆಯಾಗಿ ಬಹಳ ದಿನಗಳ ನಂತರವೂ, ಬಲಿಪಶುವಾಗಿದ್ದ ಸ್ನೇಹಿತ ಮೌನಿಯಾಗಿದ್ದ.

ಇದೊಂದು ಸರಳ ಸನ್ನಿವೇಶ. ಸುಮಾರು ಅರ್ಧ ಘಂಟೆಯ ಭೌತಶಾಸ್ತ್ರ ಪಾಠದ ನಂತರ ಮಕ್ಕಳೆಲ್ಲರಿಗೂ ತಲೆ ಚಿಟ್ಟು ಹಿಡಿದಿತ್ತು. ಅದುಮಿಟ್ಟಿದ್ದ ಅವರ ಚೈತನ್ಯ

## ಮಕ್ಕಳ ಪ್ರೀತಿಗೆ ಬೆಲೆ ಕಟ್ಟಲು ಸಾಧ್ಯವಿಲ್ಲ

ಸ್ವಲ್ಪ ಚೆನ್ನಾಗಿ, ಮಕ್ಕಳಿಗೆ ಅರ್ಥವಾಗುವ ಹಾಗೆ ಸರಳವಾದ ರೀತಿಯಲ್ಲಿ ಪಾಠ ಮಾಡಿಬಿಟ್ಟರೆ ಸಾಕು! ಮಕ್ಕಳು ಆ ಶಿಕ್ಷಕನನ್ನು ಮಹಾ ಮೇಧಾವಿಯಂತೆ ಪರಿಗಣಿಸತೊಡಗುತ್ತಾರೆ. ಹಲವು ಸಲ ಅವರ ಯೋಗ್ಯತೆಗೂ ಮೀರಿದ ಪ್ರೀತಿ, ಅಭಿಮಾನಗಳನ್ನು ನೀಡುತ್ತಾರೆ. ಸ್ವತಃ ಶಿಕ್ಷಕನಾಗಿ ಈ ಮಾತುಗಳನ್ನು ಹೇಳುತ್ತಿದ್ದೇನೆ. ಮಕ್ಕಳ ಮುಗ್ಧ ಪ್ರೀತಿಗೆ ಬೆಲೆ ಕಟ್ಟಲು ಸಾಧ್ಯವೇ ಇಲ್ಲ! ಜೀವನದ ಯಾವುದೋ ಒಂದು ಹಂತದಲ್ಲಿ ಕೊಂಚ ದಾರಿ ತಪ್ಪಿ, ನಂತರ ಶಿಕ್ಷಕ ವೃತ್ತಿಗೆ ಹೋಗಿ ಸಂಪೂರ್ಣ ಬದಲಾದವರನ್ನು ಕಂಡಿದ್ದೇನೆ. ಅವರನ್ನು ಬದಲಾಯಿಸಿದ್ದು ಶಿಕ್ಷಕ ವೃತ್ತಿ ಎನ್ನುತ್ತಾರೆ. ಅಲ್ಲ! ಅವರಲ್ಲಿ ಬದಲಾವಣೆ ತಂದಿದ್ದು, ಜೀವನ್ಮುಖಿಗಳನ್ನಾಗಿ ಮಾಡಿದ್ದು ಶಿಕ್ಷಣದ ಕೇಂದ್ರಬಿಂದುಗಳಾದ ಮಕ್ಕಳ ನಿಷ್ಕಲ್ಮಶ ಹಾಗೂ ಅದಮ್ಯ ಪ್ರೀತಿ. ಇಂತಹ ಪ್ರೀತಿಗೆ ಬದಲಾಗಿ, ಪ್ರೀತಿಯನ್ನು ನೀಡಬೇಕೇ ಹೊರತು ಚುಚ್ಚುಮಾತುಗಳ ಮೊನೆಯಿಂದ ಮಕ್ಕಳ ಮನಸ್ಸನ್ನು ತಿವಿಯುವುದು ಶಿಕ್ಷಕರಿಗೆ ಶೋಭೆ ತರುವುದಿಲ್ಲ.

ಹೊರಹೊಮ್ಮಲು ಮಾಧ್ಯಮವೊಂದು ಬೇಕಾಗಿತ್ತು. ಆ ಮಾಧ್ಯಮ, ತರಗತಿಗೆ ಹಿರಿಯ ಶಿಕ್ಷಕರ ಪ್ರವೇಶದ ರೂಪದಲ್ಲಿ ಬಂದಿತ್ತು ಅಷ್ಟೇ. ಈ ನಿಟ್ಟಿನಲ್ಲಿಯೂ ಶಿಕ್ಷಕರು ಯೋಚಿಸಬಹುದಿತ್ತು ಅಲ್ಲವೇ? ತರಗತಿಯ ಮಧ್ಯದಲ್ಲಿ ಹಾಗೆಲ್ಲಾ ನಗುವುದು ತಪ್ಪು ಎಂದು ಗದರಿಸಿ ಆ ವಿಷಯವನ್ನು ಅಲ್ಲಿಗೇ ಕೊನೆಗೊಳಿಸಬಹುದಿತ್ತು. ಬಹುಶಃ ಅವರ ಅಹಂ ಇದಕ್ಕೆ ಅವಕಾಶ ಮಾಡಿಕೊಡಲಿಲ್ಲ ಅನ್ನಿಸುತ್ತದೆ.

ಮತ್ತೊಂದು ಪ್ರಸಂಗ ನೆನಪಿಗೆ ಬರುತ್ತಿದೆ. ಒಬ್ಬ ಹುಡುಗ ಬಿ.ಎಡ್. ಓದುತ್ತಿದ್ದ. ಬಿ.ಎಡ್. ಓದುವ ವಿದ್ಯಾರ್ಥಿಗಳು, ತಮ್ಮ ಕೋರ್ಸಿನ ಕೊನೆಯಲ್ಲಿ ಯಾವುದಾದರೂ ಶಾಲೆಯಲ್ಲಿ ಪಾಠ ಮಾಡಬೇಕು. ಅವರು ಪಾಠ ಮಾಡುವ ರೀತಿ, ಮಕ್ಕಳನ್ನು ನಿಭಾಯಿಸುವ ಚಾಕಚಾಕ್ಯತೆ ಹೀಗೇ ಪ್ರತಿಯೊಂದಕ್ಕೂ ಅಂಕಗಳು ಇರುತ್ತವೆ. ಪಾಠ ಮಾಡುತ್ತಿದ್ದ ಬಿ.ಎಡ್. ವಿದ್ಯಾರ್ಥಿ ಸ್ವಲ್ಪ ಒತ್ತಡಕ್ಕೊಳಗಾಗಿದ್ದ. ಮಾಮೂಲಿಯಾಗಿ ದಿನನಿತ್ಯ ಪಾಠ ಮಾಡುವುದು ಬೇರೆ; ಪ್ರಾಧ್ಯಾಪಕರು ಹಿಂದೆ ಕುಳಿತು ಅಂಕ ನೀಡಲು ಗಮನಿಸುತ್ತಿದ್ದಾಗ ಪಾಠ ಮಾಡುವುದು ಬೇರೆ. ಜೊತೆಗೆ ಮಕ್ಕಳ ತರಲೆ! ಇವೆಲ್ಲವೂ ಸೇರಿ ಹುಡುಗ ಸ್ವಲ್ಪ ಗೊಂದಲಗೊಂಡಿದ್ದರೂ ಕೂಡ, ಮಕ್ಕಳಿಗೆ ಅರ್ಥವಾಗುವ ಹಾಗೇ ಪಾಠ ಮಾಡುತ್ತಿದ್ದ. ಆದರೆ, ತಾನು ಪಾಠ ಮಾಡಲು ತಯಾರಿಸಿ ತಂದಿದ್ದ ಸಂಶೋಧಕರ ಪಟಗಳನ್ನು ಬೋರ್ಡಿಗೆ ಅಂಟಿಸಿ, ಅವುಗಳ ಬಗ್ಗೆ ಮಕ್ಕಳಿಗೆ ವಿವರಿಸಿ, ನಂತರ ಮರಳಿ ಅದನ್ನು ತೆಗೆಯುವಾಗ ಒಂದು ಸಣ್ಣ ಎಡವಟ್ಟು ಮಾಡುತ್ತಿದ್ದ! ಸಂಶೋಧಕರ ಪಟವನ್ನೇನೋ ತೆಗೆದು ಮರಳಿ ಟೇಬಲ್ಲಿನ ಮೇಲೆ ಇಡುತ್ತಿದ್ದ. ಆದರೆ ಪಾಠ ಮಾಡುವ ಭರದಲ್ಲಿ, ಪಟವನ್ನು ಬೋರ್ಡಿಗೆ ಅಂಟಿಸಲು ಬಳಸುತ್ತಿದ್ದ ವಿಶಿಷ್ಟ ಬಗೆಯ ಟೇಪುಗಳನ್ನು ಸುತ್ತಮುತ್ತ ಬಿಸಾಡುತ್ತಿದ್ದ. ಅಂದಿನ ಪಾಠಗಳು ಮುಗಿದ ನಂತರ ಪ್ರಾಧ್ಯಾಪಕರು ಪ್ರತಿಯೊಂದು ತರಗತಿಯನ್ನೂ ವಿಶ್ಲೇಷಿಸತೊಡಗಿದರು. ಹುಡುಗ ಬೋರ್ಡಿನ ಸುತ್ತಮುತ್ತ ಟೇಪುಗಳನ್ನು ಬಿಸಾಡಿದ್ದನ್ನು ಪ್ರಸ್ತಾಪಿಸಿ, ಇದನ್ನು ಗಮನಿಸಿದರೆ ನಿನ್ನ ಹಿನ್ನೆಲೆ ಗೊತ್ತಾಗುತ್ತದೆ ಎಂದು ಇಂಗ್ಲಿಷಿನಲ್ಲಿ ಹೇಳಿದರು. ಹಿನ್ನೆಲೆ ಎಂದರೆ ಏನು! ಸಾಮಾಜಿಕ ಹಿನ್ನೆಲೆಯೇ? ಆರ್ಥಿಕ ಹಿನ್ನೆಲೆಯೇ? ಕೌಟುಂಬಿಕ ಹಿನ್ನೆಲೆಯೇ? ಹುಡುಗ ಕುಗ್ಗಿಹೋದ. ಹಾಗೆಲ್ಲಾ ಪಾಠದ ಮಧ್ಯೆ ಯದ್ವಾತದ್ವ ಟೇಪುಗಳನ್ನು ಬಿಸಾಡುವುದು ಶೈಕ್ಷಣಿಕ ಮನಃಶಾಸ್ತ್ರದ ದೃಷ್ಟಿಯಿಂದ ತಪ್ಪು ನಡೆ. ನಿಜ. ಆದರೆ ಇದನ್ನು ವಿದ್ಯಾರ್ಥಿಗೆ ಮನದಟ್ಟು ಮಾಡಿಸಲು ಬೇರೆ ವಿಧಾನವಿತ್ತು ಅಲ್ಲವೇ? ಪ್ರಾಧ್ಯಾಪಕರ ಈ ಮಾತು ಹುಡುಗನಿಗೆ ಸಂಕಟ ತಂದಿತು. ಸಾಮಾನ್ಯವಾಗಿ ಬಿ.ಎಡ್.ನಂತಹ ಕೋರ್ಸ್‌ಗಳಲ್ಲಿ ವಿದ್ಯಾರ್ಥಿಗಳು ಪ್ರಾಧ್ಯಾಪಕರಿಗೆ ನೇರಾನೇರ ದಬಾಯಿಸುತ್ತಾರೆ. ಆದರೆ ಮೃದು ಸ್ವಭಾವದ ಹುಡುಗ ತನಗಾದ ಅವಮಾನವನ್ನು ನುಂಗಿಕೊಂಡು ಒಳಗೊಳಗೇ ಬೇಯತೊಡಗಿದ.

ಯಾವುದೇ ವಯೋಮಾನದ ವಿದ್ಯಾರ್ಥಿಗಿರಲಿ, ಇಂತಹ ಕಹಿ ಘಟನೆಗಳು ಜೀವಮಾನವಿಡೀ ಚುಚ್ಚುವ ಮುಳ್ಳಾಗುತ್ತವೆ. ಕೆಲವೊಮ್ಮೆ ಅವರನ್ನು ಖಿನ್ನತೆಗೂ ದೂಡಬಹುದು. ಪ್ರೀತಿಯಿಂದ ಶಿಕ್ಷಕ ವೃತ್ತಿ ಮಾಡುವವರಿಗೆ ಒಂದು ಸೂಕ್ಷ್ಮ ಚೆನ್ನಾಗಿ ಅರಿವಿಗೆ ಬಂದಿರುತ್ತದೆ. ಸ್ವಲ್ಪ ಚೆನ್ನಾಗಿ, ಮಕ್ಕಳಿಗೆ ಅರ್ಥವಾಗುವ ಹಾಗೆ ಸರಳವಾದ ರೀತಿಯಲ್ಲಿ ಪಾಠ ಮಾಡಿಬಿಟ್ಟರೆ ಸಾಕು! ಮಕ್ಕಳು ಆ ಶಿಕ್ಷಕನನ್ನು ಮಹಾ ಮೇಧಾವಿಯಂತೆ ಪರಿಗಣಿಸತೊಡಗುತ್ತಾರೆ. ಹಲವು ಸಲ ಅವರ ಯೋಗ್ಯತೆಗೂ ಮೀರಿದ ಪ್ರೀತಿ, ಅಭಿಮಾನಗಳನ್ನು ನೀಡುತ್ತಾರೆ. ಸ್ವತಃ ಶಿಕ್ಷಕನಾಗಿ ಈ ಮಾತುಗಳನ್ನು ಹೇಳುತ್ತಿದ್ದೇನೆ. ಮಕ್ಕಳ ಮುಗ್ಧ ಪ್ರೀತಿಗೆ ಬೆಲೆ ಕಟ್ಟಲು ಸಾಧ್ಯವೇ ಇಲ್ಲ! ಜೀವನದ ಯಾವುದೋ ಒಂದು ಹಂತದಲ್ಲಿ ಕೊಂಚ ದಾರಿ ತಪ್ಪಿ, ನಂತರ ಶಿಕ್ಷಕ ವೃತ್ತಿಗೆ ಹೋಗಿ ಸಂಪೂರ್ಣ ಬದಲಾದವರನ್ನು ಕಂಡಿದ್ದೇನೆ. ಅವರನ್ನು ಬದಲಾಯಿಸಿದ್ದು ಶಿಕ್ಷಕ ವೃತ್ತಿ ಎನ್ನುತ್ತಾರೆ. ಅಲ್ಲ! ಅವರಲ್ಲಿ ಬದಲಾವಣೆ ತಂದಿದ್ದು, ಜೀವನ್ಮುಖಿಗಳನ್ನಾಗಿ ಮಾಡಿದ್ದು ಶಿಕ್ಷಣದ ಕೇಂದ್ರಬಿಂದುಗಳಾದ ಮಕ್ಕಳ ನಿಷ್ಕಲ್ಮಶ ಹಾಗೂ ಅದಮ್ಯ ಪ್ರೀತಿ. ಇಂತಹ ಪ್ರೀತಿಗೆ ಬದಲಾಗಿ, ಪ್ರೀತಿಯನ್ನು ನೀಡಬೇಕೇ ಹೊರತು ಚುಚ್ಚುಮಾತುಗಳ ಮೊನೆಯಿಂದ ಮಕ್ಕಳ ಮನಸ್ಸನ್ನು ತಿವಿಯುವುದು ಶಿಕ್ಷಕರಿಗೆ ಶೋಭೆ ತರುವುದಿಲ್ಲ.


**ವೆಂಕಟೇಶ್ ಬಿ. ಎಂ.**

ನಂ. ೨೫/೧, ೨೩ನೇ ಮುಖ್ಯರಸ್ತೆ, ೩ನೇ ಮಹಡಿ, ಮಾರೇನಹಳ್ಳಿ
ಜೆ. ಪಿ. ನಗರ, ೨ನೇ ಫೇಸ್, ಬೆಂಗಳೂರು – ೫೬೦ ೦೭೮


# ನಾ ನಿನಗೆ ಋಣಿಯಾಗಿದ್ದೇನೆ !




**ಕೊ**ಲ್ಲುವ ನಿನ್ನ ಉಸ್ತುವಾರಿತನಕೆ ನಕ್ಷತ್ರಗಳ ಒಡಲು ಹುಳಿಯಾಯಿತೇನೋ ?
ಕಣ್ಬಿಟ್ಟ ಕಡೆಗೆಲ್ಲ ಕಲ್ಲ ಮೇಲೆ ಹೆಸರಿನೊಂದಿಗೆ ದಿನಾಂಕವೂ ನಮೂದಿಸಲಾಗಿದೆ
ಹಾದಿಗಂಟಿದ ಅವಸರವನು ನನ್ನ ಎದೆಗೆ ತಾಕಿಸಿದಕೆ, ಹೆಜ್ಜೆಗಳು ಓಡಾಡದ ಹಾಗೆ
ಮಾಡಿದಕೆ ನಾ ನಿನಗೆ ಋಣಿಯಾಗಿದ್ದೇನೆ !

ಬಂಧಿಯಾದ ಬಾಯಿಯ ಬರಹಗಳು
ಬೀದಿಗಿಳಿದು ಧಿಕ್ಕಾರ ಕೂಗುವಾಗ,
ನನ್ನ ಗಂಟಲಿಗೆ ನೀ ಹಾಕಿದ ಬೀಗ ಮಜಬೂತಾಗಿದೆ.
ರೆಪ್ಪೆಗಳನ್ನು ಹೊಲಿದು ನನ್ನ ಕಂಬನಿಗಳು ನೆಲಕ್ಕೆ ಬೀಳದ ಹಾಗೆ ಮಾಡಿದಕ್ಕೆ,
ನಾ ನಿನಗೆ ಋಣಿಯಾಗಿದ್ದೇನೆ !

ನನ್ನ ಉಸಿರಿನ ಸದ್ದು ಕೇಳಲು ಅದೆಷ್ಟು ಮೌನಾಚರಣೆಗಳ ನಡೆಸುತ್ತೀಯಾ ನೀನು ?
ಮೌನದ ಮುಟ್ಟಿಗೆ ಮಾತಿನ ಕಫನ್ ತೊಡಿಸುವ ನಿನ್ನ ಕರ್ತವ್ಯ ಪ್ರಜ್ಞೆಗೆ
ಮೆಚ್ಚಲೇ ಬೇಕು !
ನೀನು ಸುಲಿದು ತಿಂದ ಚಂದ್ರನ ರಕ್ತ ರಸ್ತೆಯ ಮೈಬಟ್ಟೆಗೆ ಸಣ್ಣ ಕಲೆಯಾಗಿದೆ.
ಇದರ ಗುರುತು ಸಿಗದಂತೆ, ಹಗಲಿಗೆ ಅಮಾವಾಸ್ಯೆ ಚೆಲ್ಲಿದಕೆ ನಾ ನಿನಗೆ
ಋಣಿಯಾಗಿದ್ದೇನೆ !

ಬಿದ್ದ ಹೂಗಳ ಎದೆಯ ಮೇಲೆ ನಿನ್ನ ಪಾದಗಳ ಅಳತೆಯ ಬರೆದ ಶಾಸನಗಲ್ಲು,
ಈಗಲೂ ಚಡಪಡಿಸುತಿದೆ ಚರ್ಮ ಸುಲಿಯಲು.
ಗಂಧವನ್ನೆಲ್ಲ ಗಾಳಿಯ ತುಟಿಗೆ ಬಳಿದು,
ನಾಲಿಗೆ ಗೋರಿಯಲ್ಲಿ ಮಣ್ಣು ಮಾಡಿದಕ್ಕೆ,
ಮಣ್ಣೊಳಗೆ ಹುಳವಾಗಿ ನೆಲದಲ್ಲೇ ನಿಲ್ಲುವಾಗ,
ನಿಂತ ಮೂರ್ತಿಗಳ ಕೆಡವಿದಕ್ಕೆ ನಾ ನಿನಗೆ ಋಣಿಯಾಗಿದ್ದೇನೆ !


**ಚಾಂದ್ ಪಾಷ ಎನ್. ಎಸ್.**

ನಂ. ೧೯, ೧೫ನೇ ಮುಖ್ಯರಸ್ತೆ, ೧೯ನೇ ಅಡ್ಡರಸ್ತೆ
ಜೆ. ಸಿ. ನಗರ, ಕುರುಬರಹಳ್ಳಿ, ಬೆಂಗಳೂರು – ೫೬೦ ೦೮೬




ಮೂಲ ಲೇಖಕರು : **ಆನಂದ ಜೋಶಿ**
ಅನುವಾದಕರು : **ಆನಂದ ಝುಂಜರವಾಡ**
ಬೆಲೆ : ರೂ. ೯೫/–  ಪುಟ : ೯೬
ಪ್ರಕಾಶಕರು : **ಅಂಕಿತ ಪುಸ್ತಕ**
ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ
ಬೆಂಗಳೂರು – ೫೬೦ ೦೦೪




# ಆನಂದ ಜೋಶಿಯವರ ಓದುವುದೆಂದರೆ... ಓದು ಯಾನದ ಸಂಕಥನ

"ಪ್ರತಿಯೊಬ್ಬ ಮನುಷ್ಯನಲ್ಲೂ ಆತ ಬರೆಯದೆ ಉಳಿದ ಒಂದು ಕತೆಯೋ, ಕಾದಂಬರಿಯೋ ಅಡಗಿ ಕುಳಿತೇ ಇರುತ್ತದೆ. ಪ್ರತಿಯೊಂದು ಬಂಡೆಯಲ್ಲೂ ಒಂದು ಅದೃಶ್ಯ–ಶಿಲ್ಪವು ಅಡಗಿರುವಂತೆ ಪ್ರತಿಯೊಬ್ಬ ಸಂಸಾರಿಯಲ್ಲೂ ಒಬ್ಬ ಲೇಖಕ ಅಥವಾ ಓದುಗ ಅಡಗಿರುತ್ತಾನೆ" – ಇದು ಮಿದುಳು ತಜ್ಞ ವೈದ್ಯರೂ, ಕಲೆ–ತತ್ವಶಾಸ್ತ್ರಗಳ ಜಿಜ್ಞಾಸುಗಳೂ ಆದ ಡಾ॥ ಆನಂದ ಜೋಶಿಯವರ 'ಆಶಯ' (೨೦೧೫) ಎಂಬ ಮರಾಠಿ ಪತ್ರಿಕೆಯಲ್ಲಿ ಪ್ರಕಟವಾದ "ವಾಚನಾಚೇನೀ ಆಧಾರೇ" ("ವಾಚನಾನುಭವವನ್ನು ಆಧರಿಸಿ") ಶೀರ್ಷಿಕೆಯ ದೀರ್ಘ ಲೇಖನವೊಂದರ ಸಾಲುಗಳು. "ಓದುವುದೆಂದರೆ: ಓದು ಯಾನದ ಸಂಕಥನ" ಎಂಬ ಹೆಸರಿನಲ್ಲಿ ಈ ಲೇಖನವನ್ನು ಕನ್ನಡದ ಖ್ಯಾತ ಕವಿ, ಚಿಂತಕ ಆನಂದ ಝುಂಜರವಾಡರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇಂತಹ ಒಂದು ಅಪರೂಪದ ಕೃತಿಯನ್ನು ಕನ್ನಡಕ್ಕೆ ತರುವ ಅವರ ಸಾಹಸದಲ್ಲೇ ಸಾಹಿತ್ಯ, ಭಾಷೆ, ಕಾವ್ಯಗಳ ಕುರಿತಾದ ಅವರ ಆಸಕ್ತಿಗಳೂ ಪರಿಚಯವಾಗುತ್ತವೆ.

ಭಾಷಾ ಶಾಸ್ತ್ರ, ಕಾವ್ಯ ಮೀಮಾಂಸೆ ಕುರಿತಾದ ಕೃತಿಗಳೆಂದರೆ ಅವು ಕಬ್ಬಿಣದ ಕಡಲೆಯೇ ಸರಿ. ಆದರೆ ಆನಂದ ಜೋಶಿಯವರು ಒಬ್ಬ ಮಿದುಳು ತಜ್ಞರಾದುದರಿಂದಲೋ ಏನೋ ಮಿದುಳಿನ ಚಟುವಟಿಕೆಗಳ ಕೇಂದ್ರದಿಂದಲೇ ಭಾಷೆಯ ಉಗಮ, ವಿಕಾಸ, ಓದಿನ ಮಹತ್ವದ ಕುರಿತು ಚರ್ಚಿಸುತ್ತಾರೆ. ಮನಸ್ಸು ಮತ್ತು ಮಿದುಳು ಎನ್ನುವುದು ಬೇರೆಯಲ್ಲ. ನಮ್ಮ ಎಲ್ಲಾ ಸೃಜನಶೀಲ ಚಟುವಟಿಕೆಗಳಿಗೂ ಮಿದುಳಿನ ಕ್ರಿಯೆಗಳಿಗೂ ಬಹಳ ಹತ್ತಿರದ ಸಂಬಂಧವಿದೆ ಎನ್ನುತ್ತಾರೆ. ಮಾನವ ಇತಿಹಾಸದಲ್ಲಿ, ಕಲೆಯ ಕ್ಷೇತ್ರದಲ್ಲಾಗಲೀ, ವಿಜ್ಞಾನ ಕ್ಷೇತ್ರದಲ್ಲಾಗಲೀ ಆದ ಉತ್ಕ್ರಾಂತಿಗೆ ಮಿದುಳಿನಲ್ಲಾದ ಮೂಲ ಉತ್ಕ್ರಾಂತಿಯೇ ಕಾರಣ ಎನ್ನುತ್ತಾರೆ.

ಆದಿ ಮಾನವನ ಗುಹೆಗಳಲ್ಲಿನ ಚಿತ್ರಲಿಪಿಯಿಂದ ಹಿಡಿದು ಇಂದಿನ ಕಂಪ್ಯೂಟರ್ ವ್ಯವಸ್ಥೆಯ 'ಸ್ಮೈಲಿ', 'ಇಮೋಜಿ' ಸಂಕೇತಗಳವರೆಗೆ ಭಾಷೆಯ ಉತ್ಕ್ರಾಂತಿಯ ಸ್ವರೂಪವನ್ನು ಜೋಶಿಯವರು ಮಿದುಳಿನ ಚಟುವಟಿಕೆಗಳ ಕೇಂದ್ರದಿಂದಲೇ ಚರ್ಚಿಸುತ್ತಾರೆ. ಅವರು ಇಲ್ಲಿ ಮುಖ್ಯವಾಗಿ ಹೇಳಬೇಕಾಗಿರುವುದು ಓದಿನ ಬಗೆಗೆ. ಓದುಗರ ಬಗೆಗೆ. ಓದುವುದೆಂದರೇನು? ಮೇಲ್ಪದರದ ಓದು ಮತ್ತು ಗಹನವಾದ ಓದಿಗೆ ಇರುವ ವ್ಯತ್ಯಾಸಗಳೇನು ? ಓದುವ ಪ್ರಕ್ರಿಯೆಯಲ್ಲಿ ಮಿದುಳಿನ ಪಾತ್ರವೇನು? ನಾವು ಯಾಕಾಗಿ ಓದುತ್ತೇವೆ? ಲಲಿತ ಸಾಹಿತ್ಯಕ್ಕೂ ವೈಚಾರಿಕ ಸಾಹಿತ್ಯಕ್ಕೂ ಇರುವ ವ್ಯತ್ಯಾಸಗಳೇನು? ಇವೇ ಮುಂತಾದ ಅನೇಕ ಪ್ರಶ್ನೆಗಳನ್ನು ಮನೋವಿಜ್ಞಾನ, ಜೀವವಿಜ್ಞಾನ, ಭೌತವಿಜ್ಞಾನ, ತತ್ವಶಾಸ್ತ್ರ ಹಾಗೂ ಜಾಗತಿಕ ಸಾಹಿತ್ಯ ಮತ್ತು ಆಧುನಿಕ ಮರಾಠಿ ಸಾಹಿತ್ಯ ಪರಂಪರೆಗಳ ಆಧಾರದಿಂದ ವಿವರಿಸುತ್ತಾರೆ. ಈ ನೆಲೆಯಲ್ಲಿ ಅವರ ಓದಿನ ಹಾಗೂ ಅರಿವಿನ ವಿಸ್ತಾರಗಳು ಬೆರಗುಗೊಳಿಸುತ್ತವೆ.

ಪ್ರಾರಂಭದಲ್ಲೇ ಉಲ್ಲೇಖಿಸಿದ ಸಾಲುಗಳು ನಾವು ಯಾಕಾಗಿ ಓದುತ್ತೇವೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದುದರಿಂದಲೇ ಅವರು ಓದುವುದು ಮತ್ತು ಬರೆಯುವುದರಲ್ಲಿ ಹೆಚ್ಚಿನ ವ್ಯತ್ಯಾಸವೇನಿಲ್ಲ, ಅವೆರಡೂ ಒಂದೇ ನಾಣ್ಯದ ಎರಡು ಮುಖಗಳು ಎಂದು ಅಭಿಪ್ರಾಯಪಡುತ್ತಾರೆ. ಅಂದರೆ ಅವೆರಡೂ ಸೃಷ್ಟಿಕ್ರಿಯೆಗಳೇ ಆಗಿದ್ದು, ಸಾಹಿತ್ಯ ವಿಮರ್ಶೆಯ ಪಥ್ಯದಲ್ಲಿ ನಂತರ ಸೇರ್ಪಡೆಯಾದ 'ರೀಡರ್ಸ್ ರೆಸ್ಪಾನ್ಸ್' ಸಿದ್ಧಾಂತ ಕೂಡ ಹೆಚ್ಚು ಕಮ್ಮಿ ಇದೇ ಬಗೆಯದಾಗಿದೆ. ಈ ಸಂಬಂಧವಾಗಿ ಮರಾಠಿಯ ಖ್ಯಾತ ವಿಮರ್ಶಕರಾದ ಡಾ॥ ಹರಿಶ್ಚಂದ್ರ ಥೋರಾತ್ ಅವರ ಜೊತೆ ತಾವು ನಡೆಸಿದ ಒಂದು ಸಂವಾದವನ್ನು ಅವರು ಹೀಗೆ ದಾಖಲಿಸುತ್ತಾರೆ: "ಪ್ರತಿಯೊಬ್ಬ ಓದುಗನೂ ಒಬ್ಬ ಉಪ–ನಿರ್ಮಾಣಕಾರನೇ ಆಗಿರುತ್ತಾನೆ. ಆತ ಒಂದು ಲಲಿತ ಕೃತಿಯನ್ನು ಓದುತ್ತ ಓದುತ್ತ ತನ್ನದೇ ಆದ ಅರ್ಥ–ಜಗತ್ತನ್ನು ನಿರ್ಮಿಸಿಕೊಳ್ಳುತ್ತಾನೆ. ಖ್ಯಾತ ಕವಿ ಗ್ರೇಸ್ರು (ಮಾಣಿಕ್ ಸೀತಾರಾಮ ಘೋಡ್‌ಘಾತೆ) ಕೂಡ ಇದೇ ಬಗೆಯ ಆಲೋಚನೆಗಳನ್ನು ಮಂಡಿಸಿದ್ದಾರೆ" ಎನ್ನುವ ಆನಂದ ಜೋಶಿಯವರ ಮಾತಿಗೆ, "ಓದುಗ ಕೇವಲ ಒಬ್ಬ ಉಪ ನಿರ್ಮಾಣಕಾರನೇನಲ್ಲ. ಆತ ಮೂಲ ಕರ್ತೃವಿನಷ್ಟೇ ಬಾಧ್ಯಸ್ಥನಾದ ನಿರ್ಮಾತೃ ಆಗಿರುತ್ತಾನೆ" ಎಂದು ಥೋರಾತ್ ಉತ್ತರಿಸುತ್ತಾರೆ. ಇದನ್ನೇ ಮುಂದುವರೆಸಿ ಲೇಖಕ ಮತ್ತು ಓದುಗ ಕೂಡಿಯೇ ಜ್ಞಾನದ ಅರಿವಿನ ಬಟ್ಟೆಯನ್ನು ನೇಯುತ್ತಾರೆ. ಈ ನೇಯ್ಗೆಯು ಹೊಸ ಕೃತಿಗಳಿಗೆ ಕಾರಣವಾಗುವುದಲ್ಲದೆ ಕೃತಿ ಸಂದರ್ಭಗಳನ್ನೂ ನಿರ್ಮಾಣಮಾಡುತ್ತದೆ ಎಂದು ಜೋಶಿಯವರು ಅಭಿಪ್ರಾಯಪಡುವುದು, ಸಂಸ್ಕೃತಿ ನಿರ್ಮಾಣದಲ್ಲಿ ಓದುಗರ ಸ್ಥಾನವನ್ನು ಎತ್ತಿಹಿಡಿಯುತ್ತದೆ. ಪುಸ್ತಕದ ಓದು ಎಂದರೆ ಅದೊಂದು ಜ್ಞಾನದ ಹೊಳೆ. ಲೇಖಕ ಬರೆದು ಬದಿಗೆ ಸರಿದ ಪುಸ್ತಕವನ್ನು ಜ್ಞಾನದ ಪ್ರವಾಹದಲ್ಲಿ ತೇಲಿಬಿಡುವ ಸಾಹಸ ಓದುಗರದ್ದೇ ಆಗಿರುತ್ತದೆ. ಒಂದು ಕೃತಿ ಓದುಗರ ಗ್ರಹಿಕೆಯ ಭಾಗವಾಗದಿದ್ದರೆ ಪ್ರವಾಹದ ಭಾಗವಾಗಲೂ ಸಾಧ್ಯವಿಲ್ಲ ಎಂದು ಹೇಳುವ ಲೇಖಕರು ಇಂದಿನ ಜಾಹೀರಾತು, ಮಾರಾಟ ಕಲೆ ಮುಂತಾದವು ಕೃತಿಯ ಜನಪ್ರಿಯತೆಗೆ ಕಾರಣಗಳೂ ಆಗಿವೆ ಎನ್ನುತ್ತಾರೆ.

ಒಂದು ಓದು ಅಥವಾ ಬರಹ ನಮ್ಮ ಸ್ಮೃತಿಯಲ್ಲಿ ಯಾವ ಸ್ವರೂಪದಲ್ಲಿ ನೆಲೆಯಾಗಿರುತ್ತದೆ ಎನ್ನುವುದಕ್ಕೆ ಬಹಳ ಪ್ರಸಿದ್ಧ "ಆ್ಯಲಿಸ್ ಇನ್ ವಂಡರ್ ಲ್ಯಾಂಡ್" ಕೃತಿಯ/ ನಾಟಕ ಪ್ರಯೋಗಗಳ ಪರಂಪರೆಯನ್ನು ಬಹಳ ದೀರ್ಘವಾಗಿ ಚರ್ಚಿಸುತ್ತಾರೆ. ಅವರ ಪ್ರಕಾರ ಸ್ಮೃತಿಯೆಂದರೆ "ಇದ್ದುದರ ಇದ್ದಂತೆಯೇ" ಆದ ನೆನಪಲ್ಲ. ಮಿದುಳು ತಜ್ಞರ ಪ್ರಕಾರ ಸ್ಮೃತಿಗಳೂ ಕೂಡ ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಬಗೆಯಲ್ಲಿ, ಶೈಲಿಯಲ್ಲಿ ತಾನೇ ನಿರ್ಮಿಸಿಕೊಂಡ "ಫಿಕ್ಷನ್"ಗಳಾಗಿರುತ್ತವೆ.

ಹಾಗೆ ನೋಡಿದರೆ ಇಡೀ ಭೌತ ಪ್ರಪಂಚವೇ ಒಂದು ಫಿಕ್ಷನ್.

**ಗಿರಿಜಾ ಶಾಸ್ತ್ರಿ**



ಚೆಪ್ಪಾಳಿ ಹೊಡೀರಿ ಚೆಪ್ಪಾಳಿ
ಎಲ್ಲಾರೂ ಹೊಡೀರಿ ಚೆಪ್ಪಾಳಿ

ಚೆಪ್ಪಾಳಿ ಹೊಡೆಯೋದು ಕಂಪಲ್ಸರಿ
ಇಲ್ದಿದ್ರೆ ಒದೆಯೋದು ಕಂಪಲ್ಸರಿ

ಸುಳ್ಳು ಹೇಳಿದ್ದಕ್ಕೆ ಚೆಪ್ಪಾಳಿ
ಮಳ್ಳು ಮಾಡಿದ್ದಕ್ಕೆ ಚೆಪ್ಪಾಳಿ

ದೇಶ ಸುತ್ತಿದ್ದಕ್ಕೆ ಚೆಪ್ಪಾಳಿ
ದ್ವೇಷ ಬಿತ್ತಿದ್ದಕ್ಕೆ ಚೆಪ್ಪಾಳಿ

ಭಾಷೆ ತಪ್ಪಿದ್ದಕ್ಕೆ ಚೆಪ್ಪಾಳಿ
ಬೂಸಿ ಹೊಡೆದಿದ್ದಕ್ಕೆ ಚೆಪ್ಪಾಳಿ

ನೋಟು ಬ್ಯಾನಿಗೆ ಚೆಪ್ಪಾಳಿ
ಕೋಟಿ ಸಾವಿಗೆ ಚೆಪ್ಪಾಳಿ

ತೆರಿಗೆ ತಂದಿದ್ದಕ್ಕೆ ಚೆಪ್ಪಾಳಿ
ಸುಲಿಗೆ ಮಾಡಿದ್ದಕ್ಕೆ ಚೆಪ್ಪಾಳಿ

ಇದ್ದುಳ್ಳವರ ಹಣಕ್ಕೆ ಚೆಪ್ಪಾಳಿ
ಬಡವರ ಹೆಣಕ್ಕೆ ಚೆಪ್ಪಾಳಿ

ಎಡದವ್ರು ಹೊಡಿದಿದ್ರ ಚೆಪ್ಪಾಳಿ
ಮಾರ್ಕ್ಸನ ಹತ್ತಿರ ಹುಗಿಯೋಣ

ಹೊಲೆಯರು ಹೊಡಿದಿದ್ರ ಚೆಪ್ಪಾಳಿ
ಅಂಬೇಡ್ಕರ್ ಹತ್ರ ಕಳಿಸೋಣ

ಹೆಣ್ಮಕ್ಳು ಹೊಡಿದಿದ್ರ ಚೆಪ್ಪಾಳಿ
ಅಕ್ಕನ ಪಕ್ಕ ಕಳಿಸೋಣ

ಸಾಬರು ಹೊಡಿದಿದ್ರ ಚೆಪ್ಪಾಳಿ
ಅಲ್ಲಾನ ಹತ್ರ ಕಳಿಸೋಣ

ರೈತರು ಹೊಡಿದಿದ್ರ ಚೆಪ್ಪಾಳಿ
ಭೂಮ್ಯಾಗ ಮಣ್ಣ ಮಾಡೋಣ

ಪ್ರಜಾಪ್ರಭುತ್ವಕ್ಕೆ ಚೆಪ್ಪಾಳಿ
ಇಲ್ದಿದ್ರ ಒದಿಕಿ ಕಂಪಲ್ಸರಿ

ಪ್ರಜಾಪ್ರಭುಗಳಿಗೆ ಚೆಪ್ಪಾಳಿ
ಇಲ್ದಿದ್ರ ಗುದಕಿ ಕಂಪಲ್ಸರಿ

ಚೆಪ್ಪಾಳಿ ಹೊಡೀರಿ ಚೆಪ್ಪಾಳಿ
ಎಲ್ಲಾರೂ ಹೊಡೀರಿ ಚೆಪ್ಪಾಳಿ

ಚೆಪ್ಪಾಳಿ ಹೊಡೆಯೋದು ಕಂಪಲ್ಸರಿ
ಇಲ್ದಿದ್ರೆ ಒದೆಯೋದು ಕಂಪಲ್ಸರಿ

**ಡಾ॥ ಎಂ. ಡಿ. ಒಕ್ಕುಂದ**
'ನೆಮ್ಮದಿ', # ೧೨೪, ಸಿ.ಐ.ಟಿ.ಬಿ. ಕಾಲೋನಿ
ಶ್ರೀನಗರ, ಧಾರವಾಡ – ೫೮೦ ೦೦೩

ಸ್ಮೃತಿಗಳ ಒಂದು ಸಂಕರ. ಲೇಖಕ ತನ್ನ ಸ್ಮೃತಿ ಸಂಕರಗಳ ಮೂಲಕ ಪ್ರದರ್ಶಿಸಿದ ಕೃತಿಯನ್ನು ಓದುಗ ತನ್ನ ಸ್ಮೃತಿಸಂಕರಗಳ ಮೂಲಕವೇ ಅರ್ಥಾನುಸಂಧಾನ ಮಾಡಿಕೊಳ್ಳುವ ಸಾಧನ.

ಇತಿಹಾಸ ತಜ್ಞರಾಗಿದ್ದ ಕೆ. ವ್ಯೆ. ರಾಜವಾಡೆಯವರ ಅಭಿಪ್ರಾಯವನ್ನು ಪ್ರಸ್ತಾಪಿಸುತ್ತ, "ಭಾಷೆಯೆಂದರೆ ನಮ್ಮ ವಿಕಾರ ವಿಚಾರಗಳ ಪ್ರದರ್ಶನದ ಒಂದು ಸಾಧನೆ. ಇಲ್ಲಿ ವಿಕಾರವೆಂದರೆ ಆಕಾರಗೊಳ್ಳಲು ತುಡಿಯುವ ವಿಚಾರ. ವೈಜ್ಞಾನಿಕವಾಗಿ ಭಾಷೆಯೆಂದರೆ, ವಿಕಾರ ವಿಚಾರಗಳಲ್ಲಿ ಸಂಭವಿಸಿದ, ಅದರ ಪ್ರದರ್ಶನಕ್ಕಾಗಿ ಭಾಷೆಯಲ್ಲಿ ಸಂಭವಿಸಿದ ಉತ್ಕ್ರಾಂತಿಯೇ ಆಗಿದೆ" ಎನ್ನುತ್ತಾರೆ ಜೋಶಿಯವರು. "ಆಡುಭಾಷೆ, ಲಿಖಿತ ಭಾಷೆ, ಚಿತ್ರಕಲೆ, ಹಸ್ತ ಕಲೆ, ಶಿಲ್ಪ ಕಲೆ, ಮುಂತಾದ ಎಲ್ಲ ಲಲಿತ ಕಲೆಗಳೂ ವಿಚಾರ ಪ್ರದರ್ಶನದ ರೂಪಗಳೇ ಆದುದರಿಂದ ಎಲ್ಲವೂ ಒಂದು ಬಗೆಯ 'ಭಾಷೆ'ಯೇ ಆಗಿವೆ" ಎನ್ನುತ್ತಾರೆ.

ಭಾಷೆಗೂ ಮತ್ತು ಹಸ್ತ ಕೌಶಲಕ್ಕೂ ನಿಕಟವಾದ ಸಂಬಂಧವಿದೆ ಎನ್ನುವ ಲೇಖಕರು, ಕಲ್ಲುಗಳಿಂದ ಆಯುಧಗಳನ್ನು ಮಾಡುವ ದೀರ್ಘ ಪ್ರಯತ್ನದಿಂದಾಗಿ ಮನುಷ್ಯನ ಅಂಗೈ ವ್ಯವಸ್ಥೆ ಮಂಗಗಳಿಗಿಂತ ಭಿನ್ನವಾಯಿತು; ಇದು ಮನುಷ್ಯನಿಗೆ ದಕ್ಕಿದ ಹೊಸ ಆಯಾಮ; ಇದು ಮಿದುಳಿನ ಬೌದ್ಧಿಕ ಶಕ್ತಿ–ಸಾಮರ್ಥ್ಯಗಳಿಗೆ ಹೊಸದಾರಿಗಳನ್ನೇ ತೆರೆಯಿತು; ಹಸ್ತ ಕೌಶಲದ ಮೂಲಕ ಮನುಷ್ಯ ತನ್ನ ಗುಹೆಗಳಲ್ಲಿ ಚಿತ್ರಗಳನ್ನು ಕೊರೆಯತೊಡಗಿದ; ಇದರ ಹಿಂದೆ ಕೂಡ ಭಾಷೆಯ ಅನಿವಾರ್ಯತೆಯೇ ಅಡಗಿತ್ತು ಎಂಬುದನ್ನು ಲೇಖಕರು ಬಹಳ ಸ್ವಾರಸ್ಯವಾಗಿ ಹೇಳುತ್ತಾರೆ. ಭಾಷೆಯೆನ್ನುವುದು ಮೂಲತಃ ಒಂದು ಜೈವಿಕವಾದ ತುಡಿತ. ತನ್ನ ಜೊತೆಯ ಜೀವಕ್ಕೆ ಏನನ್ನೋ ನಿವೇದಿಸಬೇಕಾಗಿದೆ ಎನ್ನುವುದೇ ಈ ತುಡಿತಕ್ಕೆ ಕಾರಣ. "ಅತ್ಲಾಗ ಒಂದು ಹುಲಿ ಹೋಗೇದ. ನೀ ಅಲ್ಲಿ ಹೋಗಬ್ಯಾಡ" ಎಂದು ಹೇಳುವುದು ಅವಶ್ಯಕವಾಗಿದ್ದಂತೆಯೇ, "ನನ್ನ ಮನಸ್ಸಿನೊಳಗ ಏನೋ ಕುದೀತಾ ಅದ" ಎಂದು ಹೇಳುವುದೂ ಮನುಷ್ಯನಿಗೆ ಆವಶ್ಯಕವಾಗಿತ್ತು. ಇಂತಹ ತನ್ನ ಹಸಿವುಗಳನ್ನು ನೀಗಿಕೊಳ್ಳಲು ಅವನಿಗೆ 'ಮಾತು' ಅನಿವಾರ್ಯವಾಗಿತ್ತು. ಈ ಮಾತಿನ ಹಸಿವೆಯಿಂದಾಗಿಯೇ ಅವನು ಕಲ್ಪನಾಶಕ್ತಿಯ ತರಂಗಗಳನ್ನು ಮುಟ್ಟುವ ಪ್ರಯತ್ನ ಮಾಡಿದ ಎಂದು ಅಭಿಪ್ರಾಯ ಪಡುವ ಲೇಖಕರು, ಈ ಕಲ್ಪನಾಶಕ್ತಿಯನ್ನೇ 'ರೂಪಕ' ಎನ್ನುತ್ತಾರೆ. 'ಪ್ರತಿಯೊಂದು ಶಬ್ದವೂ ಮೃತ–ರೂಪಕವೇ' ಎನ್ನುವ ಅರ್ಜೆಂಟೀನಾದ ಲೇಖಕನೊಬ್ಬನ ಮಾತನ್ನು ಉಲ್ಲೇಖಿಸುವ ಅವರು ಇದಕ್ಕೆ ಒಂದು ಬಹಳ ಒಳ್ಳೆಯ ಉದಾಹರಣೆಯನ್ನು ಕೊಡುತ್ತಾರೆ: "ಗುಹೆಗಳಲ್ಲಿ ವಾಸಿಸುತ್ತಿದ್ದ ಆ ಆದಿಮಾನವನಿಗೆ ತನ್ನ ಪಕ್ಕದಲ್ಲಿರುವ ಸ್ನೇಹಿತೆ ನಾಜೂಕಾಗಿದ್ದಾಳೆ, ಚೆಲುವಾಗಿದ್ದಾಳೆ ಎಂದು ಅವಳಿಗೇ ಹೇಳುವ ಮನಸ್ಸಾಗಿರಬೇಕು. ಆದರೆ ಆ ಬಗೆಯ ಮಾತು ರೂಪಿಸಲು ತಕ್ಕ ಭಾಷೆ ಅವನ ಬಳಿ ಇರಲಿಕ್ಕೂ ಇಲ್ಲ. ಆಗ ಆತ ಅಲ್ಲೇ ಇದ್ದ ಒಂದು ಕಾಡುಹೂವನ್ನು ತೋರಿಸಿ 'ತಾನು ಹೇಳಬೇಕಾದ' ಪ್ರಯತ್ನವನ್ನು ಮಾಡಿರಬೇಕು" ಎಂದು ಹೇಳುತ್ತ, ನಿವೇದಿಸಿಕೊಳ್ಳುವ ಜರೂರಿನಲ್ಲಿ ಹುಟ್ಟಿದ ರೂಪಕವೇ ಮನುಷ್ಯನ ಭಾಷೆಯಾಯಿತು. ರೂಪಕಗಳು ಸೂಚಕಗಳಾಗಿರುತ್ತವೆ, ಭಾಷೆ ಕೂಡ ಒಂದು ಸೂಚಕವೇ ಆದುದರಿಂದ ಶಬ್ದನಿರ್ಮಾಣದ ಉಗಮ ರೂಪಕವೇ ಆಗಿದೆ ಎನ್ನುತ್ತಾರೆ.

ಭಾಷೆ ಹಾಗೂ ಶಬ್ದಕ್ಕೆ ಸಂಬಂಧಪಟ್ಟ ೩–೪ ಮಿದುಳಿನ ಕೇಂದ್ರಗಳು ಎಷ್ಟು ಪ್ರಬಲವಾಗಿರುವುವೆಂದರೆ, ಭಾಷೆಗೆ ಸಂಬಂಧಪಟ್ಟ ಮಿದುಳಿನ ಕೇಂದ್ರವು ಮಿದುಳಿನ ಉಳಿದ ಎಲ್ಲಾ ಕೇಂದ್ರಗಳೊಂದಿಗೆ ಸಂಪರ್ಕವನ್ನು ಹೊಂದಿರುತ್ತದೆ. ಹಾಗೆಯೇ ಮಿದುಳಿನ ಇನ್ನುಳಿದ ಕೇಂದ್ರಗಳೂ ಭಾಷೆಯ ಕೇಂದ್ರದೊಂದಿಗೆ ಸಂಪರ್ಕವನ್ನು

ಪಡೆಯುತ್ತವೆ. ಈ ರೀತಿಯ ಕೊಳುಕೊಡುಗೆಯು ಪಂಚೇಂದ್ರಿಯಗಳಿಂದಲೂ ಅನುಭವಕ್ಕೆ ಬರುವ ಸಂಗತಿಯಾಗಿದೆ ಎನ್ನುವ ಜೋಶಿಯವರು, ಹಸಿರು ಮರಗಳ ನಡುವೆ ನಡೆಯುವಾಗ ಹಸಿರು ಬಣ್ಣವಾಗಿ ಮಾತ್ರವಲ್ಲದೆ ಹಸಿರು ವಾಸನೆಯಾಗಿ ಕಹಿ ರುಚಿಯಾಗಿಯೂ ಅನುಭವಕ್ಕೆ ಬರುತ್ತದೆ ಎನ್ನುವುದನ್ನು ಸಾದೃಶ್ಯವಾಗಿ ವಿವರಿಸುತ್ತಾರೆ. ಹಸಿರು, ದಟ್ಟ, ಕಹಿ ಈ ಎಲ್ಲವುಗಳನ್ನೂ ನಾವು ಮಾನವೀಯ ಸಂಬಂಧಗಳನ್ನು ವಿವರಿಸುವಾಗಲೂ ಉಪಯೋಗಿಸುತ್ತೇವೆ. ಇದಕ್ಕೆಲ್ಲಾ ಮಿದುಳಿನ ಈ ಸಂಬಂಧ – ಕಲ್ಪಿಸುವ ಅತ್ಯಂತ ಸೂಕ್ಷ್ಮವಾದ ರಚನೆಯೇ ಕಾರಣ ಎನ್ನುವ ಅವರ ಅಭಿಪ್ರಾಯ ಮಿದುಳಿನ ಅಗಾಧ ಶಕ್ತಿಯ ಬಗೆಗೆ ವಿಸ್ಮಯಗೊಳಿಸುತ್ತದೆ.

ಏನನ್ನಾದರೂ ಓದಬೇಕೇ, ಓದಬೇಡವೇ, ಓದುವುದಾದರೆ ಏನನ್ನು ಓದಬೇಕು ಎನ್ನುವ ಪ್ರಶ್ನೆಗೆ, "ನನ್ನ ಸ್ವಂತದ ವಿಷಯವನ್ನೇ ಹೇಳುವುದಾದರೆ ನನಗಂತೂ ನನ್ನೊಳಗಿನ ವಿಚಾರಗಳ ಕಿಡಿ ಹಾರಿ ಪ್ರಜ್ಞೆಯ ಇಂಧನ ಉರಿಯಲು ಇನ್ನೊಂದು 'ಸ್ವಯಂಭು' ಆದ ವೈಚಾರಿಕ ಮನಸ್ಸಿನ ಸಂಪರ್ಕ ಅತ್ಯವಶ್ಯವಾಗಿಬಿಡುತ್ತದೆ. ಅದಕ್ಕೆಂದೇ ನನಗೆ ಪುಸ್ತಕಗಳ ಓದು ಒಂದು ಸಹಜ ದಾರಿಯಾಗಿದೆ" ಎನ್ನುವ ಲೇಖಕರ ಈ ಮಾತುಗಳು ಲೇಖಕ ಮತ್ತು ಓದುಗರ ನಡುವಿನ ಗೋಡೆಯನ್ನೇ ಕೆಡವಿಬಿಟ್ಟಿದೆ. ಓದುಗ ಕೂಡ ಲೇಖಕನ ಕಿಡಿಗಳನ್ನೇ ಇಂಧನವನ್ನಾಗಿ ಮಾಡಿಕೊಳ್ಳುತ್ತಾನೆ. ಮತ್ತೆ ಓದು, ಲೇಖಕನೊಳಗೆ ಹೊಸ ಇಂಧನವಾಗಿ ಮಾರ್ಪಟ್ಟು ಕಿಡಿ ಹೊತ್ತಿಸಲು ಕಾರಣವಾಗುತ್ತದೆ. ಹೀಗೆ ಓದು – ಬರಹ ಎನ್ನುವುದು ಒಂದು ಚಕ್ರೀಯ ಪ್ರಕ್ರಿಯೆ. ಇಲ್ಲಿ ಲೇಖಕ ಮತ್ತು ಓದುಗ ಇಬ್ಬರೂ ಕಲೆತುಹೋಗಿದ್ದಾರೆ. ಇನ್ನೊಂದು ಕಡೆ ಲೇಖಕರು, "ಕವಿಯ ರಚನಾ ಕೌಶಲವೆಂಬುದು ಆತನ ಸಂವೇದನಾ ಸಂಕರವು ಆತನಿಗೆ ಒದಗಿಸಿದ ಶಕ್ತಿಯ ದೇಣಿಗೆ ಎಂದು ನಾವು ಕರೆದರೆ ಅದರಲ್ಲಿ ಯಾವ ತಪ್ಪೂ ಇಲ್ಲ" ಎನ್ನುವುದು ಈ ಮಾತುಗಳನ್ನೇ ಪುಷ್ಟೀಕರಿಸುತ್ತದೆ.

ಓದುವಿಕೆಯಿಂದ ಕೇವಲ ನಮ್ಮ ತರ್ಕಬುದ್ಧಿಯು ಹರಿತವಾದರೆ ಉಪಯೋಗವಿಲ್ಲ, ಅದು ನಮ್ಮ ಭಾವನಿಕ (ಭಾವನಾತ್ಮಕ) ವಿಶ್ವದ ವಿಸ್ತಾರಕ್ಕೂ ಕಾರಣವಾಗಬೇಕು ಎಂದು ಹೇಳುವ ಲೇಖಕರು, ಮಾರ್ಸೆಲ್ ಪ್ರೂಸ್ಟ್‌ನ ಉದಾಹರಣೆಯೊಂದನ್ನು ಕೊಡುತ್ತಾರೆ: "ಯಾವುದೇ 'ಸತ್ಯ'ವನ್ನು ಬಿಡಿಸಿ ತೋರಿಸಲು ಕೇವಲ ಬುದ್ಧಿಯ ಉಪಕರಣಕ್ಕೆ ತಕ್ಕ ಸೂಕ್ಷ್ಮತೆಯೂ ಇಲ್ಲ, ಶಕ್ತಿಯೂ ಇಲ್ಲ, ಕ್ಷಮತೆಯೂ ಇಲ್ಲ. ಉದಾಹರಣೆಗಳು, ದೃಷ್ಟಾಂತಗಳು, ಅನುಭವ ಕಥನಗಳು, ಈ ಬಗೆಯ ಸಾಧನಗಳು ತಮ್ಮ ತಮ್ಮ ಪುಟ್ಟ ಪುಟ್ಟ ಒಂದೊಂದೇ ಹೆಜ್ಜೆಗಳಿಂದಲೇ ನಮ್ಮ ಅಂತಃಕರಣವನ್ನೇ ತೋಯಿಸಿಬಿಡಬಲ್ಲ 'ಸತ್ಯ'ವನ್ನು ನಮ್ಮ ಸಾಕ್ಷಾತ್ಕಾರಕ್ಕೆ ಒದಗಿಸುತ್ತವೆ.

"ತರ್ಕ ಅಥವಾ ಅದರ ಜೊತೆ ಸಂಬಂಧವುಳ್ಳ ಇನ್ನುಳಿದ ಮಾರ್ಗಗಳು ನಮಗೆ ಸತ್ಯದ ಆಕಲನ (ಸತ್ಯದ ಸಮಗ್ರ ಗ್ರಹಿಕೆ) ಮಾಡಿಕೊಡಲಾರವು. ಅತ್ಯಂತ ಸೂಕ್ಷ್ಮವಾದ ನಮ್ಮದೇ ನಿರೀಕ್ಷೆಗಳಿಂದ ನಮ್ಮದೇ ಬುದ್ಧಿಗೆ ಈ ವಿಷಯವೂ ಪಟಾಯಿಸುತ್ತದೆ. (ಮನದಟ್ಟಾಗುತ್ತದೆ) ಆಗ ನಮ್ಮ ಬೌದ್ಧಿಕ ಶಕ್ತಿಯು ತನ್ನ ಹಕ್ಕಿನ ಹಟಗಳನ್ನು ಬಿಟ್ಟುಕೊಟ್ಟು ವಿವೇಕಯುತವಾಗಿ ತನ್ನನ್ನು ತಾನೇ ಹೃದಯದ ಸುಪರ್ದಿಗೆ ಒಪ್ಪಿಸಿಕೊಳ್ಳುತ್ತದೆ. ಹೃದಯದ ಜೊತೆಗೆ ಅದಕ್ಕಧೀನವಾಗಿ ದುಡಿಯಲು ನಮ್ಮ ಬೌದ್ಧಿಕತೆ ಒಪ್ಪಿಕೊಳ್ಳುತ್ತದೆ" ಪ್ರೂಸ್ಟ್‌ನ ಈ ಮಾತುಗಳು ಓದುವ ಕ್ರಿಯೆಗೆ ಸೂಕ್ತ ಮಾರ್ಗದರ್ಶನ ಮಾಡಬಲ್ಲವು ಎಂಬುದು ಲೇಖಕರ ಅಭಿಪ್ರಾಯ.

'ಲರ್ನಿಂಗ್' ಎನ್ನುವ ಲ್ಯಾಟಿನ್ ಶಬ್ದಕ್ಕೆ 'ಜಾಡುಹಿಡಿದು ನಡೆಯುವುದು, ಹಿಂಬಾಲಿಸುವುದು' ಎನ್ನುವ ಅರ್ಥವೂ ಇದೆ ಎನ್ನುವ ಲೇಖಕರು, ದಾರಿಯು ಎರಡು ಗಂತವ್ಯದ ಬಿಂದುಗಳನ್ನು ಜೋಡಿಸಿದರೆ, ಕತೆಯು ಲೇಖಕ ಮತ್ತು ಓದುಗನ ನಡುವಿನ ಮನೋಕೇಂದ್ರಗಳನ್ನು ಜೋಡಿಸುವ ಸೇತುವೆಯಾಗುತ್ತದೆ. ಸೈಬೀರಿಯನ್ ರೂಕ್ಷ ಮರುಭೂಮಿಯಲ್ಲಿ 'ದಾರಿ' ಅತ್ಯಂತ ಮಹತ್ವದ ಸಂಗತಿ ಹೇಗೋ ಹಾಗೇ ಬಾಳಿನ ಮರುಭೂಮಿಯಲ್ಲಿ ಕತೆ ಮಹತ್ವದ ಸಂಗತಿ. ಸೈಬೀರಿಯನ್ ಭಾಷೆಯಲ್ಲಿ 'ಕತೆ' ಮತ್ತು 'ದಾರಿ' ಎನ್ನುವ ಎರಡು ಅರ್ಥಗಳಿಗೂ 'ಖಾಂಟಿ' ಎನ್ನುವ ಒಂದೇ ಶಬ್ದವಿದೆ ಎಂಬ ಕುತೂಹಲಕಾರಿಯಾದ ಸಂಗತಿಯನ್ನು ವಿವರಿಸುತ್ತಾರೆ.

ವೈಚಾರಿಕ ಸಾಹಿತ್ಯಕ್ಕಿಂತ ಲಲಿತ ಸಾಹಿತ್ಯವೇ ಅಮೂಲ್ಯವಾದುದು. ಮಿದುಳಿನ ಕ್ರಿಯೆಯಲ್ಲಿ ಆದಿಮವಾದುದು ಎಂದು ಹೇಳುವ ಲೇಖಕರು ಬೌದ್ಧಿಕ – ವಿಷಯ ಎಂಬುದಕ್ಕೆ ಅಸ್ತಿತ್ವವೇ ಇಲ್ಲ ಎನ್ನುತ್ತಾರೆ. ಮಿದುಳಿನಲ್ಲಾದ ಉತ್ಕ್ರಾಂತಿಯ ಫಲವಾಗಿ ಮನುಷ್ಯನ ತರ್ಕಬುದ್ಧಿ ಪ್ರಬಲವಾಯಿತು, ಆದರೆ ಇದೇ ಬಗೆಯ ಉತ್ಕ್ರಾಂತಿ ಅವನ ಭಾವನೆಯ ಸ್ತರದ ಮೇಲೆ ಆಗಲಿಲ್ಲ. ಪರಿಣಾಮವಾಗಿ ಬೌದ್ಧಿಕತೆಯ ಮೇಲೆ ಒತ್ತು ಹೆಚ್ಚಾಯಿತು. ಆದರೆ ನಿಜವಾಗಿ ನೋಡಿದರೆ ಎಲ್ಲರಲ್ಲೂ, ಕೆಳವರ್ಗದ ಪ್ರಾಣಿಗಳಲ್ಲೂ ಭಾವಸ್ಪಂದನದ ಆಯಾಮವಿದ್ದೇ ಇದೆ. "ಯಾವುದೇ ಬೌದ್ಧಿಕ – ಪ್ರಶ್ನೆ ಹಾಗೂ ಬೌದ್ಧಿಕ – ಉತ್ತರಗಳ ತೆರೆಗಳು ಒಂದು ಭಾವಮೂಲ ದಡಕ್ಕೆ ಬಂದು ತಲುಪಬೇಕಾಗುತ್ತದೆ. ಈ ಭಾವನೆಗಳ ಮೂಲ ಬಿಂದುವಾಗಿರುವ ಮಿದುಳಿನ ಭಾಗಕ್ಕೆ 'ಅಮಿಗ್ಡಲ' ಎನ್ನುತ್ತೇವೆ. ಇದು ಆದಿಮವಾದದ್ದು ಎಂಬ ಅರ್ಥದಲ್ಲಿ ಈ ಶಬ್ದವು ರೂಪುಗೊಂಡಿದೆ." ಎನ್ನುವ ಲೇಖಕರ ಈ ಮಾತುಗಳು ಮೇಲೆ ಹೇಳಿದ ಮಾರ್ಸೆಲ್ ಪ್ರೂಸ್ಟ್‌ನ ಮಾತುಗಳನ್ನೇ ಒಂದು ರೀತಿಯಲ್ಲಿ ಸಮರ್ಥಿಸುತ್ತವೆ.

ಗಣಕ ಯಂತ್ರದ ಈ ಯುಗದಲ್ಲಿ ಸ್ಮೈಲಿ, ಇಮೋಜಿಗಳು ಆದಿಮಾನವ ಗುಹೆಯಲ್ಲಿ ಕೆತ್ತುತ್ತಿದ್ದ ಚಿತ್ರಲಿಪಿಯನ್ನೇ ನೆನಪಿಗೆ ತರುತ್ತವೆ. ಎಲ್ಲಾ ರೀತಿಯ ಆಂಗಿಕ ಭಾಷೆಗಳೂ ಅವುಗಳ ರಚನೆಗಳಲ್ಲಿ ಅಡಕವಾಗಿರುವುದು ಗಣಕಯಂತ್ರ ಬಳಸುವ ಆಧುನಿಕ ಮನುಷ್ಯನಿಗೆ (ಸೋಮಾರಿಗೆ) ಅನುಕೂಲವೇ ಆಗಿರಬಹುದು. ಆದರೆ ಈ ರೀತಿಯ ದೇಹಭಾಷೆ, ಚಹರೆಗಳ ಹಾವಭಾವಗಳ ಆಂಗಿಕ ಭಾವಗಳು ಬರಹದಲ್ಲಿ ಎಲ್ಲಿವೆ ಎಂದು ಕೇಳುವ ಪ್ರಶ್ನೆಗೆ, ಅಲ್ಪ ವಿರಾಮ, ಪೂರ್ಣ ವಿರಾಮ, ಪ್ರಶ್ನೆ ಚಿಹ್ನೆ, ಉದ್ಗಾರ ಚಿಹ್ನೆ ಇವುಗಳೇ ಲೇಖಕನ ಬರಹದ ಆಂಗಿಕ ಭಾಷೆ ಎನ್ನುತ್ತಾರೆ. ಒಂದು ಕಾಲದಲ್ಲಿ ಮರಾಠಿಯಲ್ಲಂತೂ ಈ ಬಗೆಯ ಚಿಹ್ನೆಗಳೇ ಇರಲಿಲ್ಲವೆಂದು ಹೇಳುತ್ತಾರೆ. ಈ ಮಾತು ಕನ್ನಡ ಭಾಷೆಗೂ ಅನ್ವಯವಾಗುತ್ತದೆ ಎನ್ನುವುದು ಸತ್ಯ. ಇದು ಭಾಷೆಯ ಸಂವಹನದಲ್ಲಾದ ಉತ್ಕ್ರಾಂತಿಯ ಕಡೆಗೆ ಗಮನ ಸೆಳೆಯುತ್ತದೆ. ಈ ಚಿಹ್ನೆಗಳ ಕೆಲಸವನ್ನೇ ಗಣಕಯಂತ್ರದ ಸ್ಮೈಲಿಗಳು ಇಂದು ಮಾಡುತ್ತಿವೆ ಎನ್ನುವುದಂತೂ ನಿಜ.

"ಲೇಖಕನ ಮನಸ್ಸೇ ಓದುಗನ ಮನಸ್ಸೂ ಆಗಿ ಸೆಳವಿಗೀಡಾಗಬಾರದು. ಆತನ ವಿಚಾರವೇ ಈತನ ವಿಚಾರವಾಗಬಾರದು. ಓದುವಾಗ ಎಚ್ಚರದಿಂದ ಓದಬೇಕು. ತನ್ನದೇ ಆದ ಸ್ವೋಪಜ್ಞತೆಯನ್ನು ಕಾಪಿಟ್ಟುಕೊಂಡು ಓದಬೇಕು. ಇನ್ನೊಬ್ಬರ ಆಲೋಚನಾ ಪತಾಕೆಗಳನ್ನು ವೀರಾವೇಶದಿಂದ ಹಿಡಿದು ಜಗತ್ತನ್ನೇ ಜಯಿಸುತ್ತೇವೆಂದು ಆವೇಶದ ಆಕ್ರಮಕ ಶೈಲಿಯಲ್ಲಿ, ಓದುಗನೆಂದೂ ಕೃತಿಯ ಒಳಗೂ ಹೋಗಬಾರದು, ಹೊರಗೂ ಬರಬಾರದು" ಎಂದು ಈ ಕೃತಿಯ ಮೊದಲಲ್ಲಿ 'ಆಶಯ' (ಮರಾಠಿ) ಪತ್ರಿಕೆಯ ಸಂಪಾದಕರಾದ ನಿತಿನ್ ವೈದ್ಯ ಅವರು ಹೇಳಿರುವುದು ಆನಂದ ಜೋಶಿಯವರ ಕೃತಿಗೆ ಒಳ್ಳೆಯ ಪೂರ್ವ ಪೀಠಿಕೆಯನ್ನು ಒದಗಿಸಿದೆ. ಸಾಹಿತ್ಯ, ಭಾಷೆ, ಓದು ಮತ್ತು ವಿಜ್ಞಾನ ಈ ನಾಲ್ಕರ ಸಂಬಂಧಾಂತರಗಳನ್ನು ತಿಳಿದುಕೊಳ್ಳುವ ಎಲ್ಲಾ ಓದುಗರೂ ಓದಲೇಬೇಕಾದ ಅನನ್ಯ ಕೃತಿ ಇದು.

ಒಂದೇ ಒಂದು ಆಕ್ಷೇಪವೆಂದರೆ ೨೧ನೇ ಶತಮಾನದ ಎರಡನೇ ದಶಕದ ಈ ಹೊತ್ತಿನಲ್ಲೂ, ಲಾಗಾಯ್ತಿನಿಂದ ಬಂದಿರುವ ನಮ್ಮ ಬರಹ ಸಂಸ್ಕೃತಿಯ ಪದ್ಧತಿಯಂತೆ 'ಓದುಗ'ನೆಂಬುವನು ಇಲ್ಲಿಯೂ 'ಗಂಡಸೇ' ಆಗಿರುವುದು. ಮನುಷ್ಯನ ಮಿದುಳು, ಭಾಷೆ ಎಂತೆಂತಹ ಉತ್ಕ್ರಾಂತಿಯನ್ನು ಹಾದು ಬಂದಿದ್ದರೂ ಕೂಡ ನಮ್ಮ ಭಾಷಾನೆಲೆಯ ಲಿಂಗ ರಾಜಕಾರಣದಲ್ಲಿ ಮಾತ್ರ ಇನ್ನೂ ಯಾವುದೇ ಉತ್ಕ್ರಾಂತಿ ಘಟಿಸದೇ ಇರುವುದು ವಿಷಾದನೀಯ..

ಝುಂಜರವಾಡರು ಮೂಲತಃ ಉತ್ತರ ಕರ್ನಾಟಕದವರಾದ್ದರಿಂದ ಅವರು ಇಲ್ಲಿ ಬಳಸಿರುವ ಭಾಷೆಗೆ ಸಹಜವಾಗಿಯೇ ಮರಾಠಿಯ ಸೊಗಡಿದೆ. ಇದು ಉತ್ತರ ಕರ್ನಾಟಕದ ಓದುಗರಿಗೆ ಸುಲಿದ ಬಾಳೆಯ ಹಣ್ಣಾಗಿರಬಹುದು. ಆದರೆ ಬಯಲು ಸೀಮೆಯ ಓದುಗರಿಗೆ ಮಾತ್ರ ಅಲ್ಲಲ್ಲಿ ತೊಡಕನ್ನುಂಟುಮಾಡುತ್ತದೆ ಎನ್ನುವುದು ನಿಜ. ಹೀಗೆ ಅಲ್ಲಲ್ಲಿ ಕನ್ನಡದ ಜಾಯಮಾನಕ್ಕೆ ಕಿಂಚಿದೂನವಾದರೂ ಕೃತಿಯ ಒಟ್ಟು ಸಂವಹನಕ್ಕೆ ಯಾವ ಕೊರತೆಯೂ ಬರುವುದಿಲ್ಲ, ಎನ್ನುವುದು ಇದರ ಹೆಗ್ಗಳಿಕೆ. ಇಂತಹ ಒಂದು ಅಪೂರ್ವ ಕೃತಿಯನ್ನು ಕನ್ನಡಕ್ಕೆ ಕೊಟ್ಟ ಝುಂಜರವಾಡರಿಗೆ ಅಭಿನಂದನೆಗಳು.

**ಗಿರಿಜಾ ಶಾಸ್ತ್ರಿ**
ನಂ.೧೬೦೮, ಇ-೩, ಲೋಕಧಾರ
ಫೇಸ್ – ೩, ಕಲ್ಯಾಣ್ (ಇ) – ಥಾಣೆ ಜಿಲ್ಲೆ, ಮಹಾರಾಷ್ಟ್ರ – ೪೨೧೩೦೬

# ಪೌರಕಾರ್ಮಿಕರ ಬದುಕು ಹಸನಾಗಲಿ

**ಭಾ**ರತದಲ್ಲಿ ಈಗ ಧರ್ಮ, ಸಂಸ್ಕೃತಿ ಮತ್ತು ಜಾತಿ ಸಂಘಟನೆಗಳ ಅಬ್ಬರ. ಆಯಾ ರಾಜ್ಯಗಳ ಚುನಾವಣೆಯ ಸಂದರ್ಭದಲ್ಲಿ ಅಲ್ಲಿನ ಜಾತಿಗಳು ತಮ್ಮ ಸಂಖ್ಯಾಬಲವನ್ನು ಪ್ರದರ್ಶಿಸಲು ಸಜ್ಜಾಗುತ್ತವೆ. ಬಲಾಢ್ಯ ಸಮುದಾಯಗಳು ಅವುಗಳ ಜಾತಿ ಬಲವನ್ನೇ ಚುನಾವಣಾ ಟ್ರಂಪ್‌ಕಾರ್ಡ್‌ನಂತೆ ಬಳಸುತ್ತವೆ. ಮಠ-ಮಾನ್ಯಗಳು ಕೂಡ ಸ್ವಜಾತಿ ರಾಜಕಾರಣಿಗಳ ಪರವಾಗಿ ಲಾಬಿ ನಡೆಸುತ್ತವೆ. ಪ್ರತಿಯೊಂದು ಜಾತಿಯ ಉದ್ಯಮಿಗಳು, ಶಿಕ್ಷಣ ಸಂಸ್ಥೆಗಳ ಮಾಲೀಕರು, ರಿಯಲ್ ಎಸ್ಟೇಟ್ ದಂಧೆಕೋರರು, ಪುಢಾರಿಗಳು, ಸಮಾಜ ಸೇವಕರ ಮುಖವಾಡ ತೊಟ್ಟವರು ಜಾತಿಯನ್ನೇ ಶ್ರೀರಕ್ಷೆ ಮಾಡಿಕೊಂಡಿದ್ದಾರೆ. ಜಾತಿಗಳಿಂದ ಲಾಭ ಪಡೆಯಲಾಗದ ಜನ ಧರ್ಮವನ್ನು ವೈಭವೀಕರಿಸುತ್ತಿದ್ದಾರೆ. ಆ ಮೂಲಕ ಜಾತಿ ಜನಸಮುದಾಯಗಳ ಹೆಗಲ ಮೇಲೆ ಸವಾರಿ ಮಾಡುತ್ತಿದ್ದಾರೆ.

ಧರ್ಮವನ್ನು ಗುತ್ತಿಗೆ ಪಡೆದುಕೊಂಡಂತೆ ವರ್ತಿಸುತ್ತಿರುವ ಕೆಲವು ಧಾರ್ಮಿಕ ಗುಂಪುಗಳು, ಸಾಮಾಜಿಕ ಜನಜೀವನದ ಸಾಮರಸ್ಯವನ್ನು ಹಾಳುಗೆಡುವುತ್ತಿವೆ. ಅತ್ಯಾಚಾರದಂತಹ ಪೈಶಾಚಿಕ ಕೃತ್ಯವನ್ನೂ ಸಹ ಧಾರ್ಮಿಕ ಚೌಕಟ್ಟಿನಿಂದ ಸಮರ್ಥಿಸುತ್ತಿರುವುದು ಅತ್ಯಂತ ಹೇಯವಾದುದು. ಸಮನ್ವಯತೆ ಮತ್ತು ಭ್ರಾತೃತ್ವವನ್ನು ಬದಿಗೆ ಸರಿಸಿ ಜಾತಿ ಮತ್ತು ಧರ್ಮ ರಾಜಕಾರಣ ಮೇಲುಗೈ ಸಾಧಿಸುತ್ತಿದೆ. ಸಾಮಾಜಿಕವಾಗಿ ಶಕ್ತಿ ರಾಜಕಾರಣದಲ್ಲಿ ಪ್ರಬಲ ಪೈಪೋಟಿ ನೀಡದ, ಮಠ ಪರಂಪರೆ ಇಲ್ಲದ ಅನೇಕ ತಳವರ್ಗಗಳು ತಳಮಳಕ್ಕೀಡಾಗಿವೆ. ರಾಜಕೀಯವಾಗಿ ಬಲಶಾಲಿ ಎನಿಸಿಕೊಳ್ಳದ ಸಮುದಾಯಗಳಿಗೆ 'ಪ್ರಭುತ್ವ'ದ ಕೊಡುಗೆ ನಗಣ್ಯ. ಮತಗಳು ಇಡುಗಂಟಾಗಿ ಸಿಗದ ಸಮುದಾಯಗಳ ನೋವನ್ನು 'ಪ್ರಭುತ್ವ' ತುಚ್ಛವಾಗಿ ಕಾಣುತ್ತದೆ. ಇಂಥ ಅನಾದರಣೆಗೆ ಒಳಗಾಗಿರುವ ಪೌರಕಾರ್ಮಿಕರ ಜನವರ್ಗ ನಮ್ಮ ನಡುವೆ ಬದುಕುತ್ತಿದೆ.

ಕರ್ನಾಟಕದಲ್ಲಿ ಈಗ ೪೫,೦೦೦ ಪೌರಕಾರ್ಮಿಕರು ಕೆಲಸ ನಿರ್ವಹಿಸುತ್ತಿರುವುದಾಗಿ ರಾಜ್ಯ ಪೌರಕಾರ್ಮಿಕರ ಸಂಘ ಹೇಳುತ್ತಿದೆ. ಸರ್ಕಾರಿ ವಲಯದಲ್ಲಿ ಕೆಲಸ ಮಾಡುತ್ತಿರುವವರ ಸಂಖ್ಯಾಬಲ, ಖಾಸಗಿ ಕಂಪನಿಗಳಲ್ಲಿ, ಕೈಗಾರಿಕೆಗಳಲ್ಲಿ ಸಾರ್ವಜನಿಕ ಶೌಚಾಲಯಗಳಲ್ಲಿ, ಅನೈರ್ಮಲ್ಯ ಕೆಲಸ ಮಾಡುತ್ತಿರುವವರ ಸಂಖ್ಯಾ ಅಧ್ಯಯನ ಇನ್ನೂ ನಡೆದಿಲ್ಲ. ಪೌರಕಾರ್ಮಿಕರ ಜನಾಂಗದ ಸಂಖ್ಯಾಬಲ ನಿಖರವಾಗಿ ನಮ್ಮ ಸರ್ಕಾರಕ್ಕೆ ತಿಳಿದಿಲ್ಲ. ಸ್ಥಳೀಯ ಸಂಸ್ಥೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡುತ್ತಿರುವ ೩೫,೦೦೦ ಜನರನ್ನು ಖಾಯಂಗೊಳಿಸಬೇಕೆಂದು ಉಚ್ಚ ನ್ಯಾಯಾಲಯ ಆದೇಶಿಸಿದೆ. ಆದರೆ ಸರ್ಕಾರ ಸ್ಥಳೀಯ ಸಂಸ್ಥೆಗಳ ೨೦,೦೦೦ ಮಂದಿಯನ್ನು ಮಾತ್ರ ಖಾಯಂ ಮಾಡಿಕೊಳ್ಳಲು ಗುರುತಿಸಿದೆ. ಉಳಿದ ೧೫,೦೦೦ ಪೌರಕಾರ್ಮಿಕರ ಗತಿ ಏನು ಎಂಬುದನ್ನು ಯಾರೂ ಪ್ರಶ್ನಿಸುತ್ತಿಲ್ಲ.

ಸ್ಥಳೀಯ ಸಂಸ್ಥೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿರುವ ೧೧,೦೦೦ ಪೌರಕಾರ್ಮಿಕರನ್ನು ಮೂರೇ ತಿಂಗಳಲ್ಲಿ ಖಾಯಂಗೊಳಿಸಲಾಗುವುದೆಂದು ಮುಖ್ಯಮಂತ್ರಿ ಸಿದ್ದರಾಮಯ್ಯ ೨೪-೦೬-೨೦೧೭ರಲ್ಲಿ ತಿಳಿಸಿದ್ದರು. ಪ್ರಸ್ತುತ ೪೦೦೦ದಿಂದ ೫೦೦೦ ರೂಗಳವರೆಗೆ ಸಂಬಳ ಪಡೆಯುತ್ತಿದ್ದು, ಇನ್ನು ಮುಂದೆ ೧೭,೦೦೦ ರೂ. ಸಂಬಳ ಪಡೆಯಲಿದ್ದಾರೆ ಎಂದರು. ಈಗ ೧೭,೦೦೦ ರೂ. ಸಂಬಳ ಸಿಗುತ್ತಿರುವುದು ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ ಮಾತ್ರ (ಆದರೆ ಕೈಗೆ ಸಿಗುತ್ತಿರುವುದು ೧೨,೭೦೦ ರೂಪಾಯಿಗಳು ಮಾತ್ರ). ನಗರ ಸಭೆಗಳಲ್ಲಿ ಇದೇ ಕೆಲಸ ನಿರ್ವಹಿಸುತ್ತಿರುವ ಪೌರಕಾರ್ಮಿಕರಿಗೆ ೧೩,೦೦೦, ಪಟ್ಟಣ ಪಂಚಾಯ್ತಿಗಳಲ್ಲಿನ ಪೌರಕಾರ್ಮಿಕರಿಗೆ ೧೨,೦೦೦ ರೂ. ಸಿಗುತ್ತಿದೆ. ಯಾಕೀ ತಾರತಮ್ಯ?



ಕರ್ನಾಟಕದ ವಿಧಾನಸಭೆಯಲ್ಲಿ ದಿನಾಂಕ ೧೩-೦೭-೨೦೧೭ರಂದು ಸಚಿವ ಸಂಪುಟ ಸಭೆಯಲ್ಲಿ ಗುತ್ತಿಗೆ ಪೌರಕಾರ್ಮಿಕರ ವಿಶೇಷ ನೇಮಕಾತಿ ಕಾನೂನು ರೂಪಿಸಲಾಯಿತು. ಖಾಯಂಗೊಂಡ ನೌಕರರು ಇನ್ನು ಮುಂದೆ ತಿಂಗಳಿಗೆ ಈಗಿರುವ ೧೭,೦೦೦ ರೂ.ಗಳ ಬದಲಿಗೆ ೨೫,೦೦೦ ರೂಪಾಯಿಗಳನ್ನು ಪಡೆಯಲಿದ್ದಾರೆ. ಇದರಿಂದ ೯೩ ಕೋಟಿ ರೂ. ಅಧಿಕ ಹೊರೆ ಬೀಳಲಿದ್ದು, ಒಟ್ಟಾರೆ ವಾರ್ಷಿಕ ೩೩೬ ಕೋಟಿ ರೂ. ಸಂಬಳಕ್ಕೆ ಖರ್ಚಾಗಲಿದೆ ಎಂದು ಅಂದಾಜಿಸಲಾಯಿತು. ಆದರೆ ಇದು ನಿಗದಿತ ಅವಧಿಯೊಳಗೆ ಕಾರ್ಯಗತಗೊಳ್ಳದೇ ಉಳಿದುಹೋಯಿತು. ೫.೨೩ ಲಕ್ಷ ನೌಕರರು ಮತ್ತು ೫.೭೩ ಲಕ್ಷ ಪಿಂಚಣಿದಾರರ ಹಿತ ಕಾಯುವ ಸರ್ಕಾರಕ್ಕೆ ೩೫ ಸಾವಿರ ಪೌರಕಾರ್ಮಿಕರ ನೇಮಕಾತಿ ಹೊರೆಯಾಯಿತೆ?

ಶ್ರೀ ಸಿದ್ದರಾಮಯ್ಯನವರ ಸರ್ಕಾರ ರಾಜ್ಯ, ದೇಶ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆಯುವ ಕೆಲವು ದೂರದೃಷ್ಟಿ ಯೋಜನೆಗಳನ್ನು ರೂಪಿಸಿತು. ಅನ್ನ ಭಾಗ್ಯ, ಇಂದಿರಾ ಕ್ಯಾಂಟೀನ್, ಎರಡು ಗ್ಯಾಸ್ ಸಿಲಿಂಡರ್‌ಗಳ ಉಚಿತ ವಿತರಣೆ, ಹೆಣ್ಣು ಮಕ್ಕಳಿಗೆ ಉಚಿತ ಶಿಕ್ಷಣ, ರೈತರ ಸಾಲಮನ್ನಾ, ಸಾರಿಗೆ ಕ್ಷೇತ್ರದಲ್ಲಿ ರಾಷ್ಟ್ರೀಯವಾಗಿ ಗಮನ ಸೆಳೆದಿದ್ದು, ೭೮೬ ಕೋಟಿ ರೂಪಾಯಿಗಳಲ್ಲಿ ರಾಮಥಾಳದಲ್ಲಿ ರೂಪುತಳೆದ ಪ್ರಪಂಚದಲ್ಲೇ ಬೃಹತ್ತಾದ ಸೂಕ್ಷ್ಮ ನೀರಾವರಿ ಯೋಜನೆ, ೧೬,೫೦೦ ಕೋಟಿ ರೂಪಾಯಿಗಳ ವಿಶ್ವದ ಅತಿದೊಡ್ಡ ಸೋಲಾರ್ ಪಾರ್ಕ್, ೧.೯ ಲಕ್ಷ ಕೃಷಿ ಹೊಂಡ, ಕೆರೆ ಹೂಳು ತೆಗೆಯುವುದು ಮತ್ತು ಸಾವಿರಾರು ಕೆರೆಗಳಿಗೆ ನೀರು ತುಂಬಿಸುವ ಯೋಜನೆ ಮುಂತಾದ ಗಮನ ಸೆಳೆಯುವ ಕೆಲಸಗಳನ್ನು ಮಾಡಿದ್ದು ಶ್ಲಾಘನೀಯವಾದದ್ದು. ಇಷ್ಟೆಲ್ಲಾ ಪ್ರಗತಿಯ ನಡುವೆ ಪೌರಕಾರ್ಮಿಕರನ್ನು ಖಾಯಂ ಮಾಡದೆ ಹೋದದ್ದು ನೋವಿನ ಸಂಗತಿಯಲ್ಲವೇ?

ಈಗಾಗಲೇ ಕೋಟಿ ಕೋಟಿ ರೂಪಾಯಿಗಳ ರುಚಿ ನೋಡಿರುವ ಗುತ್ತಿಗೆದಾರರು ರಾಜಕಾರಣಿಗಳ ಮೇಲೆ ಒತ್ತಡ ತಂದು ಖಾಯಂಗೊಳಿಸದಂತೆ ಮಾಡಿದ್ದಾರೆ ಎಂದು ಪೌರಕಾರ್ಮಿಕರು ಆರೋಪಿಸುತ್ತಿದ್ದಾರೆ. ರಾಜ್ಯಮಟ್ಟದಲ್ಲಿ ಇದೊಂದು ದೊಡ್ಡ ದಂಧೆಯಾಗಿದ್ದು, ಇವರೇ ಈ ವಿಷಯದಲ್ಲಿ ಸರ್ಕಾರವನ್ನು ನಿಯಂತ್ರಿಸುತ್ತಿರುವುದು ಈಗ ಗುಟ್ಟಾಗಿ ಉಳಿದಿಲ್ಲ. ಅಧಿಕಾರಿಗಳ ಲೂಟಿಕೋರತನ ಹಲವು ತೊಡಕುಗಳನ್ನು ಹುಟ್ಟುಹಾಕುತ್ತಲೇ ಇದ್ದು, ಸಮಸ್ಯೆ ಹಾಗೇ ಉಳಿದುಕೊಳ್ಳಲು ಕಾರಣವಾಗಿದೆ. ಅವರ ಲಾಭಕ್ಕಾಗಿ ಇವರು ಅರೆಹೊಟ್ಟೆ - ಅರೆಬಟ್ಟೆಯಲ್ಲಿರಬೇಕಾಗಿರುವುದು ಅನಿವಾರ್ಯವಾಗಿದೆ. ಇದೊಂದು ವಿಷವರ್ತುಲ. ಗುತ್ತಿಗೆದಾರರು, ಅಧಿಕಾರಿಗಳು, ರಾಜಕಾರಣಿಗಳ ಧನದಾಹಿತನಕ್ಕೆ ಅಮಾಯಕ ಜನ ಬಲಿಯಾಗುತ್ತಿದ್ದಾರೆ.

ಎಲ್ಲ ರೀತಿಯಿಂದಲೂ ಶೋಷಣೆಗೆ ಒಳಗಾದ ಈ ಜನ ಈ ಸರ್ಕಾರ ಅಲ್ಲದಿದ್ದರೆ ಮುಂದಿನ ಸರ್ಕಾರ ನಮ್ಮ ಬವಣೆಯನ್ನು ನೀಗಿಸಬಹುದು ಅಂದುಕೊಂಡು ಅದೆಷ್ಟೋ ಸರ್ಕಾರಗಳ ಗೆಲುವಿಗೆ ಮತ ಹಾಕಿದ್ದಾರೆ. ರಾಜಕಾರಣಿಗಳ ಆಶ್ವಾಸನೆಗಳನ್ನೇ ನಿಜವೆಂದು ನಂಬಿ ಮೋಸಹೋಗುತ್ತಲೇ ಬಂದಿದ್ದಾರೆ. ಅವರ ಮೇಲಿನ ಶೋಷಣೆ ಬೇರೆ ಬೇರೆ ರೀತಿಯಲ್ಲಿ ಸಾಗುತ್ತಲೇ ಇದೆ. ಯಾವ ಸರ್ಕಾರ ಬಂದರೂ ಇವರ ಮೇಲೆ ಯಾವ ಪರಿಣಾಮಗಳೂ ಆಗಲಿಲ್ಲ. ಇದೊಂದು ಸರ್ಕಾರಿ ಪ್ರಾಯೋಜಿತ ಜೀತಗಾರಿಕೆಯಾಗಿ ಮುಂದುವರಿಯುತ್ತಲೇ ಇದೆ. ಆದ್ದರಿಂದ, ಅಂತಿಮವಾಗಿ ಆಳುವ ಸರ್ಕಾರಗಳು ಈ ಸಮುದಾಯದ ಸಬಲೀಕರಣದ ಜವಾಬ್ದಾರಿ ಹೊರಬೇಕಿದೆ. ಈ ಕುರಿತು ನಾಡಿನ ಎಲ್ಲಾ ಪ್ರಜ್ಞಾವಂತರು ಸರ್ಕಾರಕ್ಕೆ ನೆನಪಿಸಬೇಕಾಗಿದೆ.

**ಟಿ. ಮಂಜು**
ಸಂಶೋಧಕ, ಗಾಂಧೀ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು - ೧೦

**ಡಾ॥ ಆರ್. ಸಿದ್ದರಾಜು**
ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ಮತ್ತು ಸಹಕಾರ ವಿಭಾಗ
ಮಹಾರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು




**ಉದ್ಯೋಗಸ್ಥ ತಂದೆ ತಾಯಿಯರ ಮಕ್ಕಳು ಹಾದಿ ತಪ್ಪುತ್ತಿದ್ದಾರೆ ಎಂಬುದನ್ನು ಧ್ವನಿಸುವ ಮಾತಿದು. ಇದರಲ್ಲಿ ಸಮಾಜವನ್ನು ಒಕ್ಕಣ್ಣಿನಿಂದ ವೀಕ್ಷಿಸಿದ ನೋಟವಿದೆ. ಉದ್ಯೋಗಸ್ಥರಲ್ಲದ ಹೆತ್ತವರ ಮಕ್ಕಳೂ ದಾರಿ ತಪ್ಪುವ ಸಂಭವವಿದೆ. ಆದರೆ ಇಲ್ಲಿ ಮಕ್ಕಳನ್ನು ತಿದ್ದುವ ಶಿಕ್ಷಕಿ ಮತ್ತು ಕಳ್ಳರನ್ನು ಹಿಡಿದು ಶಿಕ್ಷಿಸುವ ಪೊಲೀಸಾದ ಹೆತ್ತವರ ಮಕ್ಕಳೇ ದಾರಿ ತಪ್ಪುತ್ತಿದ್ದಾರೆ ಎಂಬುದನ್ನು ವ್ಯಂಗ್ಯವಾಗಿ ಹೇಳಲಾಗಿದೆ. ಅಪ್ಪೆ ಟೀಚರ್ ಆಗಿರುವುದು ಗೌರವಕ್ಕಿಂತ ಅಗೌರವದ ಭಾವವೇ ಧ್ವನಿಸುತ್ತದೆ.**

**ಬಿ. ಎಂ. ರೋಹಿಣಿ**

**‘ಅಪ್ಪೆ** ಟೀಚರ್, ಅಮ್ಮೆ ಪೊಲೀಸ್, ಮಗೆ ಕಲುವೆ’ (ತಾಯಿ ಟೀಚರ್, ತಂದೆ ಪೊಲೀಸ್, ಮಗ ಕಳ್ಳ) ಇದು ತುಳು ಭಾಷೆಯ ಒಂದು ನಾಣ್ಣುಡಿ. ಇದು ಹೆಣ್ಣು ಮಕ್ಕಳು ಶಿಕ್ಷಕಿಯರಾಗಿ ಸೇವೆ ಸಲ್ಲಿಸುತ್ತಿದ್ದ ಪ್ರಾರಂಭ ಕಾಲದಲ್ಲಿ ಹುಟ್ಟಿದ್ದ ಮಾತಾಗಿರಬೇಕು. ಉದ್ಯೋಗಸ್ಥ ತಂದೆ ತಾಯಿಯರ ಮಕ್ಕಳು ಹಾದಿ ತಪ್ಪುತ್ತಿದ್ದಾರೆ ಎಂಬುದನ್ನು ಧ್ವನಿಸುವ ಮಾತಿದು. ಇದರಲ್ಲಿ ಸಮಾಜವನ್ನು ಒಕ್ಕಣ್ಣಿನಿಂದ ವೀಕ್ಷಿಸಿದ ನೋಟವಿದೆ. ಉದ್ಯೋಗಸ್ಥರಲ್ಲದ ಹೆತ್ತವರ ಮಕ್ಕಳೂ ದಾರಿ ತಪ್ಪುವ ಸಂಭವವಿದೆ. ಆದರೆ ಇಲ್ಲಿ ಮಕ್ಕಳನ್ನು ತಿದ್ದುವ ಶಿಕ್ಷಕಿ ಮತ್ತು ಕಳ್ಳರನ್ನು ಹಿಡಿದು ಶಿಕ್ಷಿಸುವ ಪೊಲೀಸಾದ ಹೆತ್ತವರ ಮಕ್ಕಳೇ ದಾರಿ ತಪ್ಪುತ್ತಿದ್ದಾರೆ ಎಂಬುದನ್ನು ವ್ಯಂಗ್ಯವಾಗಿ ಹೇಳಲಾಗಿದೆ. ಅಪ್ಪೆ ಟೀಚರ್ ಆಗಿರುವುದು ಗೌರವಕ್ಕಿಂತ ಅಗೌರವದ ಭಾವವೇ ಧ್ವನಿಸುತ್ತದೆ. ಹೀಗೆ ಸಮಾಜದ ಸ್ಥಿತಿಗತಿಗಳನ್ನು ವ್ಯಂಗ್ಯವಾಗಿ ಹೇಳುವ ಸಾಕಷ್ಟು ನುಡಿಮುತ್ತುಗಳು ತುಳುವಿನಲ್ಲಿದ್ದಂತೆ ಎಲ್ಲ ಭಾಷೆಗಳಲ್ಲೂ ಇವೆ. ಈ ವ್ಯಂಗ್ಯ ಮಾತುಗಳಲ್ಲಿ ಸೂಕ್ಷ್ಮವಾದ ಸಾಮಾಜಿಕ ವಿಮರ್ಶೆಗಳೂ ಅಡಕವಾಗಿವೆ. ಇವುಗಳನ್ನು ಸ್ವೀಕರಿಸುವುದೂ, ತಿರಸ್ಕರಿಸುವುದೂ ತಮ್ಮ ತಮ್ಮ ಬೌದ್ಧಿಕ ಮಟ್ಟದ ಸ್ವಾತಂತ್ರ್ಯದ ಆಯ್ಕೆಗೆ ಬಿಟ್ಟದ್ದು. ಈಗ ತುಳುವಿನಲ್ಲಿ ಅಪ್ಪೆ ಟೀಚರ್ ಎಂಬ ಹೆಸರಿನ ಚಲನಚಿತ್ರ ಬಹಳ ಸುದ್ದಿ ಮಾಡುತ್ತಿದೆ. ಮಕ್ಕಳು ದಾರಿ ತಪ್ಪುವುದಕ್ಕೆ ಇರುವ ಹಲವಾರು ಮಾಧ್ಯಮಗಳಲ್ಲಿ ಈ ತುಳು ಸಿನಿಮಾ ಕೂಡ ಸೇರಿದೆ ಎಂಬುದು ಖೇದದ ಮಾತಾಗಿದೆ.

ದ್ವಂದ್ವಾರ್ಥದ ಮಾತುಗಳನ್ನಾಡುವುದು, ಗೇಲಿಗೆ, ನಿಂದೆಗೆ, ಇಂತಹ ಮಾತುಗಳನ್ನು ಬಳಸುವುದು ಇತ್ತೀಚಿನ ವರ್ಷಗಳಲ್ಲಿ ನಾಟಕ ಮತ್ತು ಸಿನಿಮಾಗಳಲ್ಲಿ ಹೆಚ್ಚುತ್ತಿರುವುದನ್ನು ನಾವೆಲ್ಲಾ ಗಮನಿಸುತ್ತಾ ಬಂದಿದ್ದೇವೆ. ಕಳೆದ ಶತಮಾನದ ೮೦ರ ದಶಕದ ಬಳಿಕ ಇಲ್ಲಿ ತುಳು ನಾಟಕಗಳು ಬೆಳೆದು ಬಂದ ದಾರಿಯತ್ತ ಗಮನಿಸಿದಾಗ ಅದು ಪಡೆದ ಪಲ್ಲಟ ವಿಸ್ಮಯ ಹುಟ್ಟಿಸುತ್ತಿದೆ. ಈ ನಾಟಕ ತಂಡಗಳು ಭರ್ಜರಿ ಪ್ರದರ್ಶನಗಳನ್ನು ನೀಡುವುದರ ಜೊತೆಗೆ ಇಲ್ಲಿನ ನಾಟಕಪ್ರಿಯರ ಅಭಿರುಚಿಯನ್ನೇ ಬದಲಾಯಿಸಿದ್ದು ಗಮನಾರ್ಹ. ಆಬಾಲವೃದ್ಧರನ್ನೂ ಒಳಗೊಂಡಂತೆ ಕರಾವಳಿ, ಹೊರರಾಜ್ಯ, ವಿದೇಶಗಳಾಚೆಯೂ ವಿಸ್ತರಿಸಿ ಎಲ್ಲರನ್ನು ಒಂದು ರೀತಿಯ ಸಮ್ಮೋಹನಕ್ಕೆ ಒಳಪಡಿಸಿದ್ದು ಸತ್ಯ. ಅದರ ಬೆಳವಣಿಗೆಯಾಗಿ ಕ್ಯಾಸೆಟ್‌ಗಳು, ಸಿ.ಡಿ.ಗಳು ಬಿಸಿ ದೋಸೆಗಳಂತೆ ಮಾರಾಟವಾಗಿ ಯುವ ಜನರಲ್ಲಿ ನಾಟಕವೆಂದರೆ ಹೀಗೆಯೇ ಇರಬೇಕು, ದ್ವಂದ್ವಾರ್ಥಗಳ ಸಂಭಾಷಣೆಯಿಲ್ಲದಿದ್ದರೆ ನಾಟಕವೇ ಅಲ್ಲ ಎಂಬ ಭಾವನೆ ಗಟ್ಟಿಗೊಂಡಿತು. ನಾಟಕಗಳಿಗೆ ಮನರಂಜನೆಯೇ ಪ್ರಧಾನವೆಂಬ ಭಾವ ಬಲಿಯಿತು. ಇಂತಹ ಅಭಿರುಚಿಯನ್ನು ಬೆಳೆಸಿಕೊಂಡ ಪ್ರೇಕ್ಷಕರಿಗೆ ಹೊಸ ಅಲೆಯ, ಆಧುನಿಕ ರಂಗಭೂಮಿಯ ನಾಟಕಗಳು ಕಿವುಡನ ಮುಂದೆ ಕಿನ್ನರಿ ಬಾರಿಸಿದಂತಾಯಿತು. ಸೀಮಿತ ಸಂಖ್ಯೆಯ ಪ್ರೇಕ್ಷಕರ ಮುಂದೆ ಈ ನಾಟಕಗಳು ಪ್ರದರ್ಶನಗೊಂಡು, ಹಾಕಿದ ಖರ್ಚನ್ನು ಗಿಟ್ಟಿಸಿಕೊಳ್ಳಲಾಗದೆ ಹತಾಶರಾದದ್ದೂ ಇದೆ. ‘ನಾಟಕ ಕಲೆಯೆಂದರೆ ಪ್ರೇಕ್ಷಕ ಮನಪೂರ್ತಿ ನಗಬೇಕು. ಗಂಭೀರವಾಗಿ ಕೂತು ಕೇಳಲು, ನೋಡಲು ಅದೇನು ಪಾಠ ಮಾಡುವ ಲೆಕ್ಚರರುಗಳ ಉಪನ್ಯಾಸವೇ?’ ಎಂದು ಹೇಳಿದವರನ್ನು ಕೇಳಿಸಿಕೊಂಡಿದ್ದೇನೆ. ಬೌದ್ಧಿಕವಾಗಿ ನಮ್ಮ ಚಿಂತನೆಗಳನ್ನು ಎತ್ತರಿಸುವ ಸಂಸ್ಕಾರಗೊಳಿಸುವ ಪ್ರಯತ್ನ ನಾಟಕ ಅಥವಾ ಸಿನಿಮಾಗಳಂತಹ ದೃಶ್ಯ ಮಾಧ್ಯಮಗಳಲ್ಲಿರಬಾರದು ಎಂದು ನಂಬಿದ ಒಂದು ದೊಡ್ಡ ವರ್ಗವೇ ನಮ್ಮಲ್ಲಿದೆ. ದ್ವಂದ್ವಾರ್ಥ ಸಂಭಾಷಣೆಗಳುಳ್ಳ ಮಾತುಗಳನ್ನು ಮತ್ತೆ ಮತ್ತೆ ಕೇಳಿಸಿಕೊಳ್ಳುತ್ತಾ ಮೆಚ್ಚಿಕೊಂಡು ಬಂದಿರುವ ಈ ಮನಸ್ಸಿನ ಭಾವನೆಗಳು ಈಗ ಮೊಂಡಾಗಿವೆ. ಬಹುತೇಕ ಈ ಸಂಭಾಷಣೆಗಳು ಕಾಮ–ಪ್ರೇಮದ ಸುತ್ತಲೇ ಗಿರಕಿ ಹೊಡೆಯುತ್ತವೆ. ಶೃಂಗಾರವು ನವರಸಗಳಲ್ಲಿ ಪ್ರಧಾನ. ಕಾಮವು ಮನುಷ್ಯನ ಮೂಲಭೂತ ಗುಣಗಳಲ್ಲಿ ಒಂದು ಎಂಬುದನ್ನು ಎಲ್ಲರೂ ಬಲ್ಲರು. ಕವಿಗಳು, ನಾಟಕಕಾರರು ಓದುಗನಲ್ಲಿ, ಪ್ರೇಕ್ಷಕನಲ್ಲಿ ಈ ರಸ ಮತ್ತು ಗುಣಗಳನ್ನು ಉದ್ದೀಪನಗೊಳಿಸಿ ಮೈಮರೆಯುವಂತೆ ಮಾಡುತ್ತಾರೆ. ಅತಿಯಾದರೆ ಅಮೃತವೂ ವಿಷವೇ ಆಗುತ್ತದೆ, ಅಲ್ಲವೇ? ಈ ಮಾಧ್ಯಮಗಳು ಪ್ರೇಕ್ಷಕರ ಮನಸ್ಸನ್ನು ಅರಳಿಸುವಂತಿರಬೇಕೇ ಹೊರತು ಕೆರಳಿಸುವಂತಿರಬಾರದು. ಕೆಲವೊಂದು ನಾಟಕಗಳನ್ನು ಹೊರತುಪಡಿಸಿ ತುಳುವಿನ ನಾಟಕಗಳು ಒಳ್ಳೆಯ ಸಂದೇಶವನ್ನು ನೀಡಿವೆ. ಇದು ಪ್ರತಿಯೊಂದು ಕಲೆಯೊಳಗೂ ಅಂತಸ್ಥಗೊಂಡಿರುವ ಧರ್ಮ. ಧರ್ಮವೆಂದರೆ ತಿರುಕನ ತಟ್ಟೆಗೆ ಸಮಾನವೆಂದು ಲಘುವಾಗಿ ಸ್ವೀಕರಿಸಿರುವ ಬಹುತೇಕ ಜನ ಸಮುದಾಯ ತಿರುವಿನಲ್ಲಿ ಸಾಗುತ್ತಾ ಪ್ರಪಾತದತ್ತ ಹೆಜ್ಜೆ ಹಾಕುತ್ತಿದೆಯೇ ಎಂಬ ಸಂದೇಹ ಮೂಡುತ್ತಿದೆ. ಹೊಸ ಹೊಸ



ತಂತ್ರಜ್ಞಾನದ ಇಲೆಕ್ಟ್ರೋನಿಕ್ ಮಾಧ್ಯಮಗಳು ಅಂಗೈಯಲ್ಲಿ ಭೂಮಂಡಲವನ್ನೇ ತಂದಿರಿಸಿವೆ. ಬಚ್ಚಿಡುವಂಥದ್ದು ಏನೂ ಉಳಿಯಲಿಲ್ಲವೆಂದು ಬಿಚ್ಚಿಟ್ಟಿವೆ. ಇದನ್ನು ಪ್ರಶ್ನಿಸುವುದು, ನಿಯಂತ್ರಿಸುವುದು ವೈಯಕ್ತಿಕ ಮಟ್ಟದಲ್ಲಿ ಪ್ರಾದೇಶಿಕ ಮಟ್ಟದಲ್ಲಿ ಸಾಧ್ಯವಿಲ್ಲ. "ನಿಮಗೆ ಅಸಹ್ಯವೆನಿಸಿದರೆ ನೋಡದೇ ಇರುವ ಸ್ವಾತಂತ್ರ್ಯವಿದೆಯಲ್ಲಾ" ಎಂದು ಪ್ರೇಕ್ಷಕರ ತಲೆ ಮೇಲೆ ಗೂಬೆ ಕೂರಿಸುವ, ಮಾಧ್ಯಮದ ಮಾಲಿಕ ಮಂದಿಯ ಭಂಡತನದ ಬಗ್ಗೆ ಪ್ರಶ್ನಿಸುವ, ಪ್ರತಿಭಟಿಸುವ ಧೈರ್ಯ ಯಾರಿಗೂ ಇಲ್ಲವೆಂಬ ಭಾವ ಸಮಾಜದಲ್ಲಿ ಗಟ್ಟಿಗೊಂಡಿದೆ.

ಇಂತಹ ಪರಿಸ್ಥಿತಿಯಲ್ಲಿ 'ಅಪ್ಪೆ ಟೀಚರ್' ಎಂಬ ತುಳು ಸಿನಿಮಾದ ಅಶ್ಲೀಲ ಸಂಭಾಷಣೆಯ ವಿರುದ್ಧ ಮಂಗಳೂರಿನಲ್ಲಿ ಮಹಿಳೆಯರು ಪ್ರತಿಭಟನೆ ನಡೆಸಿ ಹೊಸ ದಾಖಲೆ ಸೃಷ್ಟಿಸಿದರು. ಆಗ ಮಹಿಳೆಯರು ಎದುರಿಸಿದ ಆರೋಪಗಳು, ಸವಾಲುಗಳು ಮತ್ತು ಇರಿಸು ಮುರಿಸುಗಳ ಬಗ್ಗೆ ಹೇಳಬೇಕಾಗಿದೆ. ಮೊದಲನೆಯದಾಗಿ, ಈ ತುಳು ಸಿನಿಮಾವನ್ನು ಕರಾವಳಿಯ ಪ್ರೇಕ್ಷಕರು ಮೆಚ್ಚಿ ಪ್ರೋತ್ಸಾಹಿಸಿದ್ದಾರೆ. ಈಗ ಚಿತ್ರ ದಿಗ್ವಿಜಯ ಸಾಧಿಸುವತ್ತ ಹೊರಟಿದೆ. ಎರಡನೆಯದಾಗಿ, ಪ್ರತಿಭಟನಾಕಾರರು, ಅಶ್ಲೀಲ ಎಂದು ಹೇಳುವ ಯಾವುದೂ ಆ ಸಿನಿಮಾದಲ್ಲಿಲ್ಲ. ಮೂರನೆಯದಾಗಿ, ಹೀಗೆ ಪ್ರತಿಭಟನೆ ಮಾಡಲು ಈ ಚಿತ್ರದ ನಿರ್ಮಾಪಕರು ಲಂಚ ನೀಡಿದ್ದಾರೆ, ಇದಕ್ಕಿಂತಲೂ ಅಶ್ಲೀಲವಾಗಿ ಚಿತ್ರಿತವಾಗಿರುವ ಬೇರೆ ಸಿನಿಮಾಗಳ ಬಗ್ಗೆ ಪ್ರತಿಭಟಿಸದೆ ಇದೇ ಸಿನಿಮಾದ ಬಗ್ಗೆ ಕೆರಳಿದ್ದರ ಹಿಂದೆ ಏನೋ ದುರುದ್ದೇಶವಿದೆ ಎಂಬುದು ಮಹಿಳೆಯರು ಎದುರಿಸಿದ ನಾಲ್ಕನೆಯ ಸವಾಲು.

ಕರಾವಳಿಯ ಪ್ರೇಕ್ಷಕರಿಗೆ ಅಶ್ಲೀಲ ದ್ವಂದ್ವಾರ್ಥದ ಸಂಭಾಷಣೆಗಳನ್ನು ಕೇಳಿ ಕೇಳಿ ಸಂವೇದನೆ ಮರಗಟ್ಟಿದೆ ಇಲ್ಲವೇ ನಾಶವಾಗಿದೆ ಎಂಬ ಸಂದೇಹ ನನಗಿದೆ. ಸಮೂಹ ಅತ್ಯಾಚಾರವನ್ನು ಹೇಗೆ ಮಾಡುವುದೆಂದು ಸಂಭಾಷಣೆಯ ಮೂಲಕ ತುಳು ಚಿತ್ರರಂಗದ ದಿಗ್ಗಜರೆಂಬ ನಟರು ವರ್ಣಿಸುತ್ತಾರೆ. ಅತ್ಯಾಚಾರ ಮಾಡುವುದಕ್ಕಿಂತಲೂ ನೋಡುವುದೇ ಮಜಾ ಎಂಬ ಅವರ ಮಾತು ಯಾರು ಕೈಕಾಲು ಹೇಗೆ ಹಿಡಿಯಬೇಕು, ಹೇಗೆ ಬೊಬ್ಬಿಡಬೇಕು, ಅತ್ಯಾಚಾರ ಮಾಡಬೇಕಾದ ಅಂಗದ ಕುರಿತು ಹೇಳುವ ಮಾತುಗಳು ಅಪ್ಪೆ ಮತ್ತು ಟೀಚರ್ ಎಂಬ ಗೌರವಾನ್ವಿತ ಸ್ತ್ರೀಯರ ಹೆಸರಿನಲ್ಲಿ ಮೂಡಿರುವ ಸಿನಿಮಾಕ್ಕೆ ಅಗತ್ಯವಿರಲಿಲ್ಲ. ಈ ಮಾತುಗಳನ್ನಾಡುವಾಗ ಸ್ತ್ರೀಯರ ಬಗ್ಗೆ ಅವರಿಗಿದ್ದ ಭಾವನೆಗಳೇನು ಎಂಬುದು ಚಿಕ್ಕ ಮಗುವಿಗೂ ಅರ್ಥವಾಗುತ್ತದೆ. ಇಂದು ಪ್ರತಿನಿತ್ಯವೆಂಬಂತೆ ಅತ್ಯಾಚಾರದ, ಅದರಲ್ಲೂ ಸಾಮೂಹಿಕ ಅತ್ಯಾಚಾರದ ಸುದ್ದಿಗಳು ಪ್ರಕಟವಾಗುತ್ತಿರುವ ಈ ಕಾಲದಲ್ಲಿ ಎಳೆಯ ಮನಸ್ಸುಗಳ ಮೇಲೆ ಬೀರುವ ಪರಿಣಾಮಗಳ ಬಗ್ಗೆ ಯೋಚಿಸಲಾರದಷ್ಟು ಕಟುಕರೇ ಇವರು? ಇದು ಅಶ್ಲೀಲವಲ್ಲವೆಂದಾದರೆ ಚಿತ್ರ ನಿರ್ಮಾಪಕನ ದೃಷ್ಟಿಯಲ್ಲಿ ಅಶ್ಲೀಲ ಯಾವುದು ಎಂಬುದರ ಬಗ್ಗೆ ಸ್ಪಷ್ಟೀಕರಣ ನೀಡುತ್ತಾರೆಯೇ? ಈ ಸಂಭಾಷಣೆಗಳು ಸೆನ್ಸಾರ್ ಆಗದೆ ಪ್ರದರ್ಶನಗೊಳ್ಳಲು ಕಾರಣವೇನು ಎಂದು ತಿಳಿಯಬೇಕಾಗಿದೆ. ಕರಾವಳಿಯ ಜನರಿಗೆ ಇದು ಸದಭಿರುಚಿಯ ಚಿತ್ರವಾಗಿದೆ. ಮುಂದೆ ಇದೇ ರೀತಿಯ ಚಿತ್ರ ನಿರ್ಮಾಣಕ್ಕೆ ಪ್ರೋತ್ಸಾಹ ಲಭಿಸಿದೆ ಎಂದು ನಿರ್ಮಾಪಕರು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಈ ಚಿತ್ರದ ಸಂಭಾಷಣೆಗಳು ಅಶ್ಲೀಲವಲ್ಲವೆಂದಾದರೆ ಮುಂದಿನ ಚಿತ್ರಗಳಲ್ಲಿ ಸ್ತ್ರೀಯರನ್ನು ಕೇಂದ್ರೀಕರಿಸಿ ಇನ್ನೂ ಏನೇನು ದೌರ್ಜನ್ಯಗಳನ್ನು ತೋರಿಸಲಿದ್ದಾರೋ ಎಂಬ ಆತಂಕ ಇಲ್ಲಿನ ಮಹಿಳೆಯರಲ್ಲಿ ಉಂಟಾಗಿದೆ. ಆದುದರಿಂದ ಅವರು ಚಿತ್ರ ನಿರ್ಮಾಪಕರಿಗೆ ಒಂದು ಎಚ್ಚರಿಕೆಯ ಸಂದೇಶವನ್ನು ನೀಡಿ ಜಾತಿ, ಮತ, ವರ್ಗ, ಭೇದಗಳನ್ನು ಮರೆತು ಒಂದಾಗಿದ್ದಾರೆ. ಮುಸ್ಲಿಂ ಮಹಿಳಾ ಸಂಘಟನೆ, ಕ್ರೈಸ್ತ ಮಹಿಳಾ ಸಂಘಟನೆ, ಪ್ರಜ್ಞಾ ಕೌನ್ಸಿಲಿಂಗ್ ಸಂಸ್ಥೆ, ಡೀಡ್ಸ್ ಸಂಸ್ಥೆ, ಕರಾವಳಿ ಲೇಖಕಿಯರ ಸಂಘ, ಮಹಿಳಾ ದೌರ್ಜನ್ಯ ವಿರೋಧಿ ವೇದಿಕೆ, ಮಂಗಳೂರು ಮಹಿಳಾ ಮಂಡಲಗಳ ಒಕ್ಕೂಟ, ಸಹಕಾರ ಭಾರತಿ ಸಂಸ್ಥೆ, ಸಮತಾ ಬಳಗ, ಬಿಲ್ಲವ ಮಹಿಳಾ ಸಂಘ, ಬೆಳ್ತಂಗಡಿಯ ಮಹಿಳಾ ಸಂಘ, ಜನವಾದಿ ಮಹಿಳಾ ಸಂಘಟನೆ, ಸೃಜನಾ ಬಳಗ, ಇಂತಹ ಇನ್ನೂ ಹಲವಾರು ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ನಡೆದ ಪ್ರತಿಭಟನೆಯು ತುಳು ಚಿತ್ರರಂಗದಲ್ಲಿ ಒಂದು ಸಣ್ಣ ಕಂಪನವನ್ನುಂಟುಮಾಡಿದೆ. ಅಪ್ಪೆ ಟೀಚರ್ ಎಂಬ ಗೌರವಯುತವಾದ ರಕ್ಷಣಾ ಕವಚದೊಳಗೆ ಇಂತಹ ಹೊಲಸು ಸಂಭಾಷಣೆಯನ್ನು ತುರುಕಿದ್ದು ಇಡೀ ಸ್ತ್ರೀ ಸಮುದಾಯಕ್ಕೇ ಬಗೆದ ದ್ರೋಹವಾಗಿದೆ, ಆ ಸಂಭಾಷಣೆಯನ್ನು ಕತ್ತರಿಸಿ ಚಿತ್ರ ಪ್ರದರ್ಶಿಸಬೇಕು ಎಂಬುದು ಮಹಿಳೆಯರ ಬೇಡಿಕೆ. ನಿರ್ಮಾಪಕರು ಇನ್ನು ಮುಂದೆ ಇಂತಹ ಚಿತ್ರ ಮಾಡುವುದಿಲ್ಲವೆಂದು ಸಾರ್ವಜನಿಕವಾಗಿ ಹೇಳಿಕೆ ನೀಡಬೇಕೆಂದು ಮಹಿಳೆಯರ ಆಗ್ರಹ. ಚುನಾವಣೆಯ ನೀತಿಸಂಹಿತೆ ಜಾರಿಯಲ್ಲಿದೆ ಎಂಬ ನೆಪದಲ್ಲಿ ಏಪ್ರಿಲ್ ಮೊದಲ ವಾರದಲ್ಲಿ ಈ ಮಹಿಳೆಯರು ಸಲ್ಲಿಸಿದ ಅರ್ಜಿಯನ್ನು ಆಡಳಿತವು ಅಂಚಿಗೆ ತಳ್ಳಿತು. ಎರಡನೆಯ ಸಲದ ಪತ್ರಕ್ಕೂ ಸ್ಪಂದಿಸದ ಕಾರಣ ನಿರ್ವಾಹವಿಲ್ಲದೆ ಮಹಿಳೆಯರು ಪ್ರತಿಭಟಿಸಲೇಬೇಕಾಯಿತು. ಮಹಿಳೆಯರ ಬೇಡಿಕೆಯನ್ನು ಕೇವಲವಾಗಿ ಕಾಣುವ ಮನಃಸ್ಥಿತಿ ಹೆಚ್ಚುತ್ತಿರುವುದನ್ನು ಕಂಡು ಎಲ್ಲಾ ಸಂಘಟನೆಗಳ ಮಹಿಳೆಯರು ಸಿಡಿದೆದ್ದರು. ತೃಪ್ತಿಕರವಾದ ಉತ್ತರ ಸಿಗದಿದ್ದರೆ ಮುಂದೆಯೂ ಈ ಪ್ರತಿಭಟನೆ ತೀವ್ರವಾಗುವುದರಲ್ಲಿ ಸಂಶಯವಿಲ್ಲ.

ಸವಾಲುಗಳ ಜೊತೆಗೆ ಆರೋಪಗಳೂ, ಮಹಿಳೆಯರ ಮೇಲೆರಗಿದವು. ನಿರ್ಮಾಪಕರು ಎಲ್ಲೋ ಕೂತುಕೊಂಡು ಮಹಿಳೆಯರದ್ದು ದುರುದ್ದೇಶಪೂರಿತ ಪ್ರತಿಭಟನೆಯೆಂದು ಬೀಸು ಹೇಳಿಕೆ ನೀಡಿದರೆ, ಮಾಧ್ಯಮಗಳು ಸಂಘಟನೆಗಳ ಮೇಲೆಯೇ ಲಂಚದ ಆರೋಪ ಹೊರಿಸಿದರು. ಇಂತಹ ಅವಮಾನಗಳಿಂದಾಗಿ ಸಂಘಟನೆಯಲ್ಲಿ ಮಹಿಳೆಯರಲ್ಲಿ ಸಿಟ್ಟು, ರೋಷ ವೃದ್ಧಿಸಿದೆ. ಈ ಪ್ರತಿಭಟನೆಯಲ್ಲಿ ಪ್ರೋತ್ಸಾಹ ನೀಡಿದ ನೂರಾರು ಮಂದಿ ಪುರುಷರಿದ್ದಾರೆ. ಅವರ್‍ಯಾರೂ ವೇದಿಕೆಯಲ್ಲಿ ಕಾಣಿಸಿಕೊಂಡಿಲ್ಲ. ನಿಜವಾಗಿ ಈ ಚಿತ್ರವು ಪುರುಷನನ್ನೂ ಕೂಡ ವಿಕೃತ ಮನಸ್ಕನನ್ನಾಗಿ ಚಿತ್ರಿಸಿದೆ. ಅದರ ವಿರುದ್ಧ ಪುರುಷರೂ ಸಿಡಿದೇಳುವ ಅಗತ್ಯವಿದೆ. ಒಂದು ಸ್ವಸ್ಥ ಸಮಾಜ ನಿರ್ಮಾಣವಾಗಬೇಕಾದರೆ ಸ್ತ್ರೀ-ಪುರುಷರಿಬ್ಬರೂ ಹೆಗಲೆಣೆಯಾಗಿ ದುಡಿಯಬೇಕು ಎಂಬ ಸತ್ಯ ಇಂತಹ ಸಂದರ್ಭಗಳಲ್ಲಿ ಮನವರಿಕೆಯಾಗುತ್ತದೆ.

ಇನ್ನೊಂದು ಆರೋಪವೆಂದರೆ ಬೇರೆಲ್ಲಾ ಸಿನಿಮಾಗಳಲ್ಲಿ ಇದಕ್ಕಿಂತಲೂ ಅಶ್ಲೀಲವಾದ ದೃಶ್ಯಗಳಿದ್ದಾಗ ಸುಮ್ಮನಿದ್ದವರು ಈಗ ಮಾತ್ರ ಯಾಕೆ ಧ್ವನಿಯೆತ್ತಿದ್ದಾರೆ ಎಂಬುದು. ವರ್ಷಗಳಿಂದ ಸಿನಿಮಾ ಮತ್ತು ದೂರದರ್ಶನಗಳಲ್ಲಿ ಬರುವ ಅಶ್ಲೀಲ ದೃಶ್ಯಗಳನ್ನು ನೋಡಿ ನೋಡಿ ಕುದಿಗೊಂಡ ಮನಸ್ಸುಗಳು ಇಂದು ಸ್ಫೋಟಗೊಂಡಿವೆ. ಯಾಕೆ ಈವರೆಗೆ ಧ್ವನಿಯೆತ್ತಿಲ್ಲ ಎಂಬುದು ಲೋಪವಲ್ಲ. ಆ ಎಲ್ಲಾ ಅಶ್ಲೀಲ ದೃಶ್ಯಗಳು ನಮಗೆ ಒಪ್ಪಿಗೆಯಾಗಿದೆ ಎಂದು ಅರ್ಥವಲ್ಲ. ನಮ್ಮ ಮನಸ್ಸಿನ ಕುದಿ ಬಿಂದು ಸ್ಫೋಟಗೊಳ್ಳಲು ಅಪ್ಪೆ ಟೀಚರ್ ಸಿನಿಮಾ ಕಾರಣವಾಗಿದೆ ಎಂಬುದೇ ಮುಖ್ಯವಾಗಿದೆ. ಸಂವೇದನಾರಹಿತವಾದ ಅಮಾನವೀಯವಾದ ಪ್ರಶ್ನೆಗಳಿಂದ ಮಹಿಳೆಯರನ್ನು ಬಾಯಿ ಮುಚ್ಚಿಸಬಹುದು ಎಂದು ನಂಬಿದ್ದ ಪುರುಷ ಪ್ರಧಾನ ಚಿಂತನೆಯುಳ್ಳ ಮನಸ್ಸುಗಳನ್ನು ರಿಪೇರಿಗೊಳಿಸುವ ಶಕ್ತಿ ಈ ಸಂಘಟನೆಗಳಿಗಿದೆ ಎಂದು ಹೇಳಲು ಬಯಸುತ್ತಾರೆ. ಹಿಂದೆ ಬಾಯಿ ತೆರೆಯಲಿಲ್ಲವೆಂಬ ಕಾರಣಕ್ಕೆ ಈಗ ಧ್ವನಿ ಎತ್ತಿದ್ದು ಅಪರಾಧವಾಗಿ ಕಾಣಬಾರದಲ್ಲ. ಸ್ವಾರ್ಥ ಸಾಧನೆಗಾಗಿ ಮಾನವ ಎಂತಹ ನೀಚ ಕೆಲಸಕ್ಕೂ ಹೇಸುವುದಿಲ್ಲವೆಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಇಡೀ ಫಿಲ್ಮ್ ಇಂಡಸ್ಟ್ರಿಯನ್ನೇ ರಿಪೇರಿ ಮಾಡುವ ಗುತ್ತಿಗೆಯನ್ನು ಮಹಿಳೆಯರು ವಹಿಸಿಕೊಂಡಿಲ್ಲ. ದ. ಕ. ಜಿಲ್ಲೆಯು ನಾನಾ ಕಾರಣಗಳಿಂದಾಗಿ ಈಗಾಗಲೇ ಕುಪ್ರಸಿದ್ಧವಾಗಿದೆ. ನಮ್ಮ ಪರಿಸರದ ನಮ್ಮ ಸಂಸ್ಕೃತಿಯನ್ನು ಬಿಂಬಿಸುವ ತುಳುನಾಡಿನ ಈ ಚಿತ್ರವು ಬುದ್ಧಿವಂತರ ಜಿಲ್ಲೆಯೆಂದು ಖ್ಯಾತರಾದ ನಮ್ಮ ಮಾನ ಹರಾಜು ಮಾಡುವಂತಿರಬಾರದು ಎಂದಷ್ಟೇ ಮಹಿಳೆಯರ ಕಳಕಳಿಯಾಗಿದೆ. ಇದಕ್ಕೇ ಪ್ರಜ್ಞಾವಂತರು ಸ್ಪಂದಿಸುತ್ತಾರೆಂದು ಎಲ್ಲಾ ಮಹಿಳೆಯರೂ ಆಶಿಸುತ್ತಾರೆ.

ಬಿ. ಎಂ. ರೋಹಿಣಿ
ಪಂಚಾಯತ್ ಕಚೇರಿ ಬಳಿ, ಕುಡುಪು, ಮಂಗಳೂರು-೫೭೫೦೨೮



ಸುಶಿಕ್ಷಿತ, ಸರಳ ಸಜ್ಜನ ವ್ಯಕ್ತಿ. ಸ್ವಲ್ಪ ಕಡಿಮೆಯೇ ಎನ್ನುವಂಥ ಎತ್ತರದ ನಿಲುವಿನ ಸ್ಫುರದ್ರೂಪಿ. ಸದಾ ಹಸನ್ಮುಖಿ, ಶುಭ್ರ ಶ್ವೇತ ವರ್ಣದ ಉಡುಗೆ ತೊಡುಗೆಯಲ್ಲಿ ಸರಳವಾಗಿ ಹಮ್ಮು ಬಿಮ್ಮಿಲ್ಲದೇ ಸಹಜವಾಗಿ ಜನರ ಮಧ್ಯೆ ನಡೆದುಕೊಂಡು ಬರುವ ಸ್ನೇಹಮಯಿ. ರೈತರು, ಅಧಿಕಾರಿಗಳು, ಸ್ನೇಹಿತರು, ಸಂಬಂಧಿಕರು ಯಾರೇ ಎದುರಾದರೂ ಸ್ನೇಹಪೂರ್ಣ ನಗೆಯನ್ನು ಸೂಸಿ ಆತ್ಮೀಯತೆಯಿಂದ ಎದುರುಗೊಳ್ಳುವ, ಅವರೊಂದಿಗೆ ಬೆರೆತು ಬಾಂಧವ್ಯ ಬೆಸೆಯುವ ಸ್ವಭಾವ.

ಇಂತಹ ವ್ಯಕ್ತಿ ಶಕ್ತಿಯಾದದ್ದು ಹೇಗೆ ? ಕಾಲ ದೇಶಗಳೇ ಉತ್ತರ. ದಶಕಗಳ ಹಿಂದೆ ಪಂಚ ನದಿಗಳ ಬೀಡಾದ ಅವಿಭಜಿತ ಬಿಜಾಪುರ ಜಿಲ್ಲೆ ಐತಿಹಾಸಿಕ ಹಾಗೂ ರಾಜಕೀಯ ಕಾರಣಗಳಿಂದಾಗಿ "ಬರಗಾಲದ ಬೀಡು, ಬಡತನದ ನೆಲೆನಾಡು" ಎಂಬ ಹಣೆಪಟ್ಟಿ ಕಟ್ಟಿಕೊಂಡಿದ್ದು ನಾಡಿನ ಇತಿಹಾಸದಲ್ಲಿ ಕಪ್ಪುಚುಕ್ಕೆಯೇ ಸರಿ. ೧೯೭೦–೮೦ರ ದಶಕಗಳಲ್ಲಿ ಈ ಭಾಗದ ಜನ ಅನುಭವಿಸಿದ ಕಷ್ಟ ಕಾರ್ಪಣ್ಯಗಳು ಅನೇಕ. ಪಕ್ಕದಲ್ಲಿಯೇ ಮೈದುಂಬಿ ಹರಿಯುವ ದೇಶದ ನಾಲ್ಕನೇ ಅತೀ ದೊಡ್ಡ ನದಿ ಕೃಷ್ಣೆಯ ಮಗ್ಗುಲಲ್ಲಿಯೇ ಬರಗಾಲ, ಕಿತ್ತು ತಿನ್ನುವ

# ಸಿದ್ದು ನ್ಯಾಮಗೌಡ

## ವ್ಯಕ್ತಿ, ಶಕ್ತಿ ಮತ್ತು ಜೀವನ ಸಾರ್ಥಕತೆ

**ಡಾ॥ ರಾಜೇಂದ್ರ ಪೋದ್ದಾರ**

"ಶರಣರ ಜೀವನ ಮರಣದಲ್ಲಿ ಕಾಣಾ" ಎಂಬಂತೆ ನಮ್ಮೊಡನಿರುವ ಅನೇಕ ಮಹನೀಯರ ಮಹತ್ವ ಅವರ ಜೀವಿತಾವಧಿಯಲ್ಲಿ ಕಾಣದೇ ಹೋಗುತ್ತದೆ. ಆದರೆ, ಮರಣಾನಂತರ ಅವರ ಘನತೆ ಗೌರವಗಳ ಸೌಧ ನಿರ್ಮಿಸುತ್ತೇವೆ. ಇಂತಹ ಮಾಡಿ ಮಡಿದವರ ಗುಂಪಿಗೆ ಸೇರಿದವರು ನಾಡಿನ ಸಜ್ಜನ ರಾಜಕಾರಣಿ ರೈತ ಮುಖಂಡ, ಶ್ರೀ ಸಿದ್ದು ನ್ಯಾಮಗೌಡರು. ಸುಮಾರು ಏಳು ದಶಕಗಳ ಜೀವನದ ಯಾತ್ರೆಯನ್ನು ಮುಗಿಸಿ ಒಂದು ಅಪಘಾತದಲ್ಲಿ ತೀರಿ ನಮ್ಮನ್ನಗಲಿದ್ದಾರೆ. ಇದೀಗ ನಮ್ಮೆಲ್ಲರೊಂದಿಗೆ ನಮ್ಮ ಮುಂದೆ – ಮುಂದೆಯೇ ನಮ್ಮ ಸಹ ಪಯಣದಲ್ಲಿ ಕೈ ಹಿಡಿದು, ಹೆಜ್ಜೆ ಹಾಕುತ್ತಿದ್ದ ವ್ಯಕ್ತಿ ಸರಕ್ಕನೆ ಪಕ್ಕಕ್ಕೆ ಸರಿದು ಗುಂಪಿನಿಂದ ಮಾಯವಾದಂತೆ ಭಾಸವಾಗುತ್ತಿದೆ. ಶ್ರೀಯುತರು ಅಕಾಲಿಕ ಕಣ್ಮರೆಯಾಗಿದ್ದು, ಈ ಸಮಾಜ, ನಾಡಿನ ರಾಜಕೀಯ ಹಾಗೂ ರೈತ ಸಮುದಾಯ, ಕುಟುಂಬ ಹಾಗೂ ನನಗೆ ವೈಯಕ್ತಿಕ ನಷ್ಟವೆಂಬ ನೋವು ಪೀಡಿಸುತ್ತಿದೆ. ಮೇ ೨೮, ೨೦೧೮ರಂದು ಸಂಭವಿಸಿದ ರಸ್ತೆ ಅಪಘಾತದಲ್ಲಿ ನಮ್ಮನ್ನಗಲಿದ ನ್ಯಾಮಗೌಡರ ಅಂತಿಮ ಸಂಸ್ಕಾರದ ದೃಶ್ಯ ಅವರ ವ್ಯಕ್ತಿತ್ವ, ಕರ್ತೃತ್ವ ಶಕ್ತಿ ಹಾಗೂ ಜೀವನ ಸಾರ್ಥಕತೆಗೆ ಸಾಕ್ಷಿಯಾಗಿತ್ತು.

ಬಡತನ, ಉಪವಾಸ, ಗುಳೆಯಂತಹ ಸಾಮಾಜಿಕ ಪಿಡುಗುಗಳ ಮಧ್ಯೆ ಬದುಕಿದ ಜನರಿಗೆ ಜೀವನ ಶಾಪವಾಗಿತ್ತು. ಇಂತಹ ದಾರುಣ ಪರಿಸ್ಥಿತಿಯಲ್ಲಿ ಕಾಲದ ಸವಾಲಿಗೆ ಜನಮಾನಸದ ಉತ್ತರ ಎಂಬಂತೆ ಅಲ್ಲಿಯ ಜನತೆ ಭೋರ್ಗರೆದು ಹರಿವ ಕೃಷ್ಣೆಯನ್ನು ಕಟ್ಟಿ ಹಾಕಿ ಬಯಲು ಸೀಮೆಯ ತೃಷೆಯನ್ನು ಶಮನಗೊಳಿಸುವ ಸಂಕಲ್ಪ ಕೈಕೊಂಡಿದ್ದರು.

ಸರಕಾರದ ನಿರ್ಲಕ್ಷ್ಯ, ಸ್ಥಳೀಯ ಪಟ್ಟಭದ್ರರ ವಿರೋಧ, ತಾಂತ್ರಿಕ ಹಾಗೂ ಹಣಕಾಸಿಕ ಕೊರತೆಗಳನ್ನು ಲೆಕ್ಕಿಸದೇ ಕೃಷ್ಣೆಯನ್ನು ತಡೆದು ನಿಲ್ಲಿಸಲು ಜನ ಸನ್ನದ್ಧರಾಗಿದ್ದರು. ಆಗ ಜನಾಂದೋಲನದ ಮಧ್ಯೆ ಎದ್ದು ಬಂದವರೇ ಸಿದ್ದು ನ್ಯಾಮಗೌಡರು. ಜಮಖಂಡಿ ಪಟ್ಟಣದಿಂದ ಸ್ವಲ್ಪ ದೂರದಲ್ಲಿ ಚಿಕ್ಕಪಡಸಲಗಿ ಎಂಬ ಪುಟ್ಟ ಗ್ರಾಮದ ಬಳಿ ಕೃಷ್ಣೆಯನ್ನು ತಡೆದು ನಿಲ್ಲಿಸುವ ಹರ ಸಾಹಸಕ್ಕೆ ಕೈ ಹಾಕಲಾಗಿತ್ತು. ಕೃಷ್ಣಾ ನದಿಗೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ ಈ ಸಂಕಲ್ಪವಾಗಿತ್ತು. ನೀರಾವರಿಗೆ ಬೃಹತ್ ಅಣೆಕಟ್ಟೆಗಳು ಮಾತ್ರ ಸಾಧು ಎನ್ನುವ ಜಾಗತಿಕ ಚರ್ಚೆ – ವಿವಾದಗಳ ಸಂದರ್ಭದಲ್ಲಿ ಸ್ಥಳೀಯವಾಗಿ ನಿರ್ಮಿಸಿದ ಸಣ್ಣ ಪ್ರಮಾಣದ ನೀರಾವರಿ ವ್ಯವಸ್ಥೆ ಆರ್ಥಿಕವಾಗಿ ಸುಲಭ ಹಾಗೂ ಸುಸ್ಥಿರ ಅಭಿವೃದ್ಧಿಗೆ ಮಾರ್ಗ ಎಂದು ತಾತ್ವಿಕವಾಗಿ ಎತ್ತಿ ತೋರಿಸಿದ್ದು, "ಚಿಕ್ಕ ಪಡಸಲಗಿ ಬ್ಯಾರೇಜ್". "ಚಿಕ್ಕದಲ್ಲೊ ತಮ್ಮಾ ಈ ಪಡಸಲಗಿ ನಾಡಿಗೆ ದೊಡ್ಡದೋ" ಎಂಬ ಜನಪದ ಕವಿಯ ನುಡಿಯಂತೆ ಕೃಷ್ಣಾ ತೀರ ರೈತ ಸಂಘ ಸ್ಥಾಪಿಸಿ ದೇಶವೇ ಬೆರಗಾಗುವಂತೆ ಕೇವಲ ಎರಡು ವರ್ಷಗಳಲ್ಲಿ ೬೨.೭ ಲಕ್ಷ ರೂಪಾಯಿ ವೆಚ್ಚದಲ್ಲಿ ಸುಮಾರು ಐದು ಟಿಎಮ್‌ಸಿಎಫ್ಟಿ ನೀರನ್ನು




*ಚಿಕ್ಕಪಡಸಲಗಿ ರೈತ ಮುಖಂಡ ಶ್ರೀ ಸಿದ್ದು ನ್ಯಾಮಗೌಡ ಸಂಘಟನೆಯಲ್ಲಿ*



*ಜನ ಸಂಘಟನೆಯ ಸಾಧನೆ ಮತ್ತು ಸಾಹಸ ಸಂಕೇತ ಚಿಕ್ಕಪಡಸಲಗಿ ಬ್ಯಾರೇಜ್*

ಸಂಗ್ರಹಿಸಿ ಸಾವಿರಾರು ಎಕರೆ ಕೃಷಿ ಭೂಮಿಗೆ ನೀರಾವರಿಗಾಗಿ ನೀರು, ಸುಮಾರು ೩೦ ಹಳ್ಳಿಗಳು ಹಾಗೂ ಜಮಖಂಡಿ ಪಟ್ಟಣಕ್ಕೆ ಕುಡಿಯುವ ನೀರಿನ ವ್ಯವಸ್ಥೆಯಾಗಿತ್ತು. ಬರದಿಂದ ಬೆಂಡಾದ ಬಯಲು ಸೀಮೆಯ ಭೂಮಿಗೆ ನೀರು ದೊರೆತಿತ್ತು. ನೀರಡಿಸಿದ ಜನ, ಜಾನುವಾರು, ಜಲಚರಗಳಿಗೆ ಜೀವ ಮೂಡಿತ್ತು. ಕೃಷಿ, ಹೈನುಗಾರಿಕೆ, ಕೃಷಿ ಉದ್ದಿಮೆಗಳಿಗೆ ನವ ಚೈತನ್ಯ ಮೂಡಿತ್ತು, ನೋಡ ನೋಡುವುದರಲ್ಲಿ (೧೯೮೫-೯೦) ಜನಜೀವನ ಬದಲಾಗಿತ್ತು. ಸುತ್ತಲೂ ಸಮೃದ್ಧಿ ಹೊರಸೂಸುತ್ತಿತ್ತು. ಒಟ್ಟಾರೆ, ಕಾಲವೋ, ಜಾಲವೋ ಎಂಬಂತೆ ಚಿಕ್ಕಪಡಸಲಗಿ ಬ್ಯಾರೇಜಿನ ರೂವಾರಿಯಾಗಿ, ಜನಶಕ್ತಿಯ ಸಂಕೇತವಾಗಿ ಹೊರಹೊಮ್ಮಿತ್ತು ಸಿದ್ದು ನ್ಯಾಮಗೌಡರ ಕರ್ತೃತ್ವ ಶಕ್ತಿ. ಅನೇಕ ಅಡ್ಡಿ ಅಡಚಣೆಗಳ ಮಧ್ಯೆ ಹಗಲಿರುಳು ಶ್ರಮಿಸಿ ಜನ, ಹಣ, ಸಾಮಗ್ರಿಗಳನ್ನು ಯುದ್ಧೋಪಾದಿಯಲ್ಲಿ ಕ್ರೋಢೀಕರಿಸಿ, ನಾಡೇ ಬೆರಗಾಗುವಂತೆ ಅಲ್ಪಾವಧಿಯಲ್ಲಿ, ಅತ್ಯಂತ ಕಡಿಮೆ ಖರ್ಚಿನಲ್ಲಿ ಕೃಷ್ಣೆಗೆ ತಡೆಗೋಡೆ ನಿರ್ಮಿಸಿದ್ದು ಇತಿಹಾಸ. ಜಾಗತಿಕ ಜಲ ಸಂಪನ್ಮೂಲ ಸಂಶೋಧನೆ ಹಾಗೂ ಸಾಹಿತ್ಯದಲ್ಲಿ ತನ್ನ ಛಾಪು ಮೂಡಿಸಿದ ಚಿಕ್ಕಪಡಸಲಗಿ ಬ್ಯಾರೇಜ್ ಅದ್ವಿತೀಯವಾದದ್ದು. ಅದು ಜನ ಸಮುದಾಯದ ಸಾಹಸ ಹಾಗೂ ಸಾಧನೆಯ ಸಂಕೇತ.

"ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬುದು ಅವರಿಗೊಂದು ಬಿರುದು. ಅಂದಿನ ರಾಜಕೀಯ ಲೆಕ್ಕಾಚಾರದಂತೆ ಬಾಗಲಕೋಟೆ ಲೋಕಸಭಾ ಕ್ಷೇತ್ರ ಸ್ಪರ್ಧೆಯಲ್ಲಿ (೧೯೯೧) ನಾಡಿನ ಗಣ್ಯ ರಾಜಕಾರಣಿ ರಾಮಕೃಷ್ಣ ಹೆಗಡೆಯವರನ್ನು ಪರಾಭವಗೊಳಿಸಿದ್ದಲ್ಲದೆ, ಜನ ಬೆರಗಾಗುವಂತೆ ಕೇಂದ್ರ ಸರಕಾರದ ಮಂತ್ರಿಯಾದರು. ಮುಂದಿನ ಎರಡು ಬಾರಿ ಲೋಕಸಭಾ ಚುನಾವಣೆಗಳಲ್ಲಿ ಸೋತರೂ ಛಲ ಬಿಡದ ತ್ರಿವಿಕ್ರಮನಂತೆ ವಿದಾಯಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಜಮಖಂಡಿ ಶುಗರ್ಸ್ ಲಿ. ಅಡಿಯಲ್ಲಿ ಚಿಕ್ಕಪಡಸಲಗಿ ಬ್ಯಾರೇಜ್ ಸಮೀಪದ ನಾಗನೂರಿನಲ್ಲಿ ಹಾಗೂ ಇಂಡಿ ತಾಲ್ಲೂಕಿನ ನಾದ ಗ್ರಾಮದಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರಾರಂಭಿಸಿ ಉತ್ತರ ಕರ್ನಾಟಕದಲ್ಲಿ ಕಬ್ಬು ಸಂಸ್ಕರಣೆಯ ಸಮಸ್ಯೆಗೆ ಪರಿಹಾರ ಕಲ್ಪಿಸಿದರು. ಗ್ರಾಮೀಣ ಉದ್ಯೋಗ ಸೃಷ್ಟಿಸಲು ಕಾರಣಕರ್ತರಾದರು, ರೈತಾಪಿ ಜನರ ಬಾಳು ಹಸನಾಗುವಂತೆ ದಾರಿ ದೀಪವಾದರು.

ಸದಾ ಚಿಂತನೆ ಹಾಗೂ ಕಾರ್ಯತತ್ಪರತೆಯ ಗುಣಗಳನ್ನು ಮೈಗೂಡಿಸಿಕೊಂಡಿದ್ದ ನ್ಯಾಮಗೌಡರು ಗ್ರಾಮೀಣ ಭಾಗದ ರೈತಾಪಿ ಮಕ್ಕಳ ಶೈಕ್ಷಣಿಕ ವ್ಯವಸ್ಥೆ ಸಮಸ್ಯೆಗಳನ್ನು ಮನಗಂಡು ರಾಯಲ್ ಪ್ಯಾಲೇಸ್ ಸ್ಕೂಲ್ ಮೂಲಕ ಉತ್ಕೃಷ್ಟ ಮಟ್ಟದ ವಸತಿ ಶಾಲೆ ವ್ಯವಸ್ಥೆಯನ್ನು ಕಲ್ಪಿಸಿದರು. ಕರ್ನಾಟಕ ವಿಧಾನ ಪರಿಷತ್ ಸದಸ್ಯರಾಗಿ ಸಕ್ರಿಯ ರಾಜಕೀಯವನ್ನು ಮುಂದುವರಿಸಿ ಜಮಖಂಡಿ ಕ್ಷೇತ್ರದ ಸರ್ವಾಂಗೀಣ ಅಭಿವೃದ್ಧಿಗೆ ಕಂಕಣಬದ್ಧರಾದರು. ತಮ್ಮ ಧೋರಣೆಗಳು ಹಾಗೂ ಸಾರ್ವಜನಿಕ ಜೀವನದಲ್ಲಿ ಜನ ಮೆಚ್ಚುಗೆಯನ್ನು ಪಡೆದ ಅವರು ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿದ್ದರು. ಹಿರಿಯ ರಾಜಕಾರಣಿಯಾದರೂ ರಾಜಕೀಯ ಲೆಕ್ಕಾಚಾರದಲ್ಲಿ ಅವರಿಗೆ ಸಚಿವ ಸ್ಥಾನ ದೊರೆಯಲಿಲ್ಲ ಎಂಬುದು ಅವರ ಆಪ್ತರ ಕೊರಗು. ಒಂದು ವೇಳೆ ಅವಕಾಶ ದೊರೆತಿದ್ದರೆ ಒಬ್ಬ ಅದ್ಭುತ ಆಡಳಿತಗಾರರಾಗಿ ಸೇವೆ ಸಲ್ಲಿಸುವ ಅವಕಾಶವಿತ್ತು.

ಸರಳ, ಸಜ್ಜನಿಕೆಯ ವೈಯಕ್ತಿಕ ಜೀವನ, ಕಲ್ಮಶ ರಹಿತ ರಾಜಕಾರಣ, ಸದಾ ಸಮಾಜಮುಖಿ ಚಿಂತನೆಯ ಸಾರ್ವಜನಿಕ ಜೀವನದಲ್ಲಿ ಸಿದ್ದು ನ್ಯಾಮಗೌಡರಂತಹ ವ್ಯಕ್ತಿಗಳು ಅಪರೂಪ. ಅವರ ನೆನಪಿಗಾಗಿ ಚಿಕ್ಕಪಡಸಲಗಿ ಬ್ಯಾರೇಜ್‌ಗೆ ಸಿದ್ದು ನ್ಯಾಮಗೌಡ ಬ್ಯಾರೇಜ್ ಎಂದು ನಾಮಕರಣ ಮಾಡಬೇಕು. ಅವರ ಸ್ಮರಣಾರ್ಥ ಅವರ ಆತ್ಮೀಯರು ಒಡನಾಡಿಗಳು ಸೇರಿ ಸಿದ್ದು ನ್ಯಾಮಗೌಡ ಹೆಸರಿನ ಸಂಸ್ಥೆಯನ್ನು ಹುಟ್ಟುಹಾಕಿ ವಿದಾಯಕ ಕಾರ್ಯಗಳನ್ನು ಮುಂದುವರಿಸಬೇಕು.

ಡಾ॥ ರಾಜೇಂದ್ರ ಪೋದ್ದಾರ
ನಿರ್ದೇಶಕರು, ಜಲ ಮತ್ತು ನೆಲ ನಿರ್ವಹಣೆ ಸಂಸ್ಥೆ (ವಾಲ್ಮಿ), ಧಾರವಾಡ – ೫೮೦ ೦೧೧

## ಅಮ್ಮ ಜೀವೂಬಾಯಿ ಅವರಿಗೆ ನಮನ



ಜುಲೈ ಇಪ್ಪತ್ತಾರರಂದು "ಅಮ್ಮ" ನಮ್ಮನ್ನಗಲಿದರು. ನಮ್ಮ ತಂದೆ ಜೆ. ಆರ್. ಲಕ್ಷ್ಮಣರಾವ್ ಅವರು ಕಾಲವಾದ ಏಳು ತಿಂಗಳೊಳಗೇ ಅಮ್ಮ ತೀರಿಕೊಂಡದ್ದು ನಮಗೆ ದೊಡ್ಡ ಆಘಾತ.

ಅಮ್ಮ ಜನಿಸಿದ್ದು ೧೯೨೭ರ ಜನವರಿ ಒಂದರಂದು. ೧೯೪೮ರಲ್ಲಿ ಮದುವೆಯಾಗಿ, ಸುಮಾರು ಎಪ್ಪತ್ತು ವರ್ಷಗಳ ಕಾಲ ಸುದೀರ್ಘ, ಸಮೃದ್ಧ ವೈವಾಹಿಕ ಜೀವನ ನಡೆಸಿದರು. ಮದುವೆಯ ನಂತರವೂ ಅವರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿ ಅವರ ಬಳಗದಲ್ಲೇ ಮೊದಲ ಪದವೀಧರ ಮಹಿಳೆಯಾದರು. ಆ ಕಾಲದಲ್ಲಿ ಅದು ಅಪರೂಪವೇ ಸರಿ. ನಂತರವೂ, ನಾಲ್ಕು ಮಕ್ಕಳ ತಾಯಿಯಾಗಿಯೂ, ಅವರು ತಮ್ಮ ವಿದ್ಯಾಭ್ಯಾಸ, ಇತರ ಆಸಕ್ತಿಗಳನ್ನು ಬೆಳೆಸಿಕೊಂಡೇ ಹೋದರು.

ಹಿಂದಿ ವಿಶಾರದ ಪರೀಕ್ಷೆಯವರೆಗೂ ಓದಿ ತೇರ್ಗಡೆಯಾದರು. ಜೊತೆಗೇ ಕಾವ್ಯವಾಚನವನ್ನು ಕಲಿತು, ಸಮಾರಂಭಗಳಲ್ಲಿ ಹಾಡುತ್ತಿದ್ದರು. ಕಸೂತಿ ಮಾಡುವುದು, ಉಣ್ಣೆಯನ್ನು ಹೆಣೆದು ಸ್ವೆಟರ್ ಇತ್ಯಾದಿಗಳನ್ನು ಮಾಡುವುದು ಇವುಗಳಲ್ಲಿ ಅವರು ತೊಡಗಿರುತ್ತಿದ್ದರು. ಅರವತ್ತರ ದಶಕದಲ್ಲಿ ಹೊಲಿಗೆಯನ್ನು ಕಲಿತು ತಮ್ಮ ಮತ್ತು ನನ್ನ ಅಕ್ಕ, ತಂಗಿಯರ ಬಟ್ಟೆಗಳನ್ನು ಹೊಲಿಯುತ್ತಿದ್ದರು.

ಅಮ್ಮನಿಗೆ ತಂತ್ರಜ್ಞಾನದಲ್ಲಿ ಆಸಕ್ತಿ ಮತ್ತು ಕೌಶಲ್ಯಗಳಿದ್ದವು. ಹೊಲಿಗೆ ಯಂತ್ರವನ್ನು ಬಿಚ್ಚಿ, ಶುಚಿ ಮಾಡಿ ಎಣ್ಣೆ ಹಾಕಿ ಸುಸ್ಥಿತಿಯಲ್ಲಿಡುತ್ತಿದ್ದರು. ನಾನು ಚಿಕ್ಕವನಿದ್ದಾಗ ಮನೆಯ ಫ್ಯೂಸ್ ಸುಟ್ಟರೆ ಹೊಸ ಫ್ಯೂಸ್ ಹಾಕುವುದನ್ನು ಅಮ್ಮನೇ ಕಲಿಸಿದ್ದು. ನಲ್ಲಿ ಕೆಟ್ಟರೆ ಅದರ ವಾಷರನ್ನು ಬದಲಾಯಿಸುವುದು ಅಥವಾ ಬೇರೆ ನಲ್ಲಿಯನ್ನೇ ಹಾಕುವ ಕೆಲಸವನ್ನು ಅವರೇ ಮಾಡುತ್ತಿದ್ದರು. ಆಧುನಿಕ ತಂತ್ರಜ್ಞಾನದಿಂದ ಹಿಂಜರಿಯದೆ, ಎಂಭತ್ತರ ಹರೆಯದಲ್ಲಿ ಐ-ಪ್ಯಾಡನ್ನು ಉಪಯೋಗಿಸಲು ಕಲಿತು ದೂರದಲ್ಲಿದ್ದ ಮಕ್ಕಳು, ಮೊಮ್ಮಕ್ಕಳೊಡನೆ ಸಂಪರ್ಕವನ್ನು ಇಟ್ಟುಕೊಂಡಿದ್ದರು. ತಮಗೆ ಇಷ್ಟವಾದ ಸಂಗೀತವನ್ನು ಕೇಳುತ್ತಿದ್ದರು. ಸೊಗಸಾದ ಅಡುಗೆ ಮಾಡಿ ನಮ್ಮ ಮನೆಗೆ ಬರುತ್ತಿದ್ದ ಅನೇಕ ಅತಿಥಿಗಳನ್ನು ಸತ್ಕರಿಸುತ್ತಿದ್ದ ಅಮ್ಮ ಈಚೆಗೂ, ಗೂಗಲ್‌ನಲ್ಲಿ ಹುಡುಕಿ ಹೊಸ ಅಡುಗೆಗಳನ್ನು ಮಾಡಿದ್ದರು.

ಕನ್ನಡ ಹಾಗೂ ಇಂಗ್ಲಿಷ್ ಸಾಹಿತ್ಯವನ್ನು ಓದಿ ತಮಗೆ ಇಷ್ಟವಾದ ಭಾಗಗಳ ಬಗ್ಗೆ, ಕತೆಯ ಬಗ್ಗೆ ಉತ್ಸಾಹದಿಂದ ನಮಗೆಲ್ಲ ಹೇಳಿ, ನಮ್ಮನ್ನೂ ಓದುವಂತೆ ಹುರಿದುಂಬಿಸುತ್ತಿದ್ದರು. ಅಮ್ಮನ ಪ್ರೇರೇಪಣೆ ಇಲ್ಲದಿದ್ದರೆ ಕುವೆಂಪು ಅವರ ರಾಮಾಯಣ ದರ್ಶನಂ ಮಹಾಕಾವ್ಯವನ್ನು, ಕಬ್ಬಿಣದ ಕಡಲೆ ಎಂದು ಹೆದರಿ, ನಾನು ಓದುತ್ತಲೇ ಇರಲಿಲ್ಲವೇನೋ! ಇವುಗಳ ಮಧ್ಯೆ, ಕಷ್ಟದಲ್ಲಿದ್ದವರಿಗೆ ಬ್ಯಾಂಕಿನಲ್ಲಿ ಖಾತೆ ತೆಗೆಸಿಕೊಟ್ಟು, ಸಾಲ ಕೊಡಿಸಿ ಅವರ ಆರ್ಥಿಕ ಸ್ಥಿತಿ ಸುಧಾರಿಸುವತ್ತ ತಮ್ಮ ಕೈಲಾದ ಸಹಾಯ ಮಾಡುತ್ತಿದ್ದರು. ಇವೆಲ್ಲವನ್ನು ಹಸನ್ಮುಖದಿಂದ, ಹಾಸ್ಯಪ್ರಜ್ಞೆಯನ್ನು ಕಳೆದುಕೊಳ್ಳದೆ ಅಮ್ಮ ಮಾಡುತ್ತಿದ್ದರು.

"ಶೋಧ" – (ಲಿಯೊಪಾಲ್ಡ್ ಇನ್‌ಫೆಲ್ಡ್‌ರ ಆತ್ಮಚರಿತ್ರೆ – ಕ್ವೆಸ್ಟ್), "ಚಾರ್ಲ್ಸ್ ಡಾರ್ವಿನ್ ಆತ್ಮಕತೆ" (ದಿ ಆಟೊಬಯಾಗ್ರಫಿ ಆಫ್ ಚಾರ್ಲ್ಸ್ ಡಾರ್ವಿನ್) ಅಮ್ಮ ಅನುವಾದ ಮಾಡಿದ ಕೃತಿಗಳು. ನಮ್ಮ ತಂದೆಯವರೊಂದಿಗೆ, "ಕಾರ್ಲ್ ಮಾರ್ಕ್ಸ್: ಆಧುನಿಕ ಕಮ್ಯುನಿಸಮ್‌ನ ಸ್ಥಾಪಕ" (ಆರ್ನಾಲ್ಡ್ ಕೆಟಲ್‌ನ "ಕಾರ್ಲ್ ಮಾರ್ಕ್ಸ್: ದಿ ಫೌಂಡರ್ ಆಫ್ ಮಾಡರ್ನ್ ಕಮ್ಯುನಿಸಮ್") ಪುಸ್ತಕವನ್ನೂ ಅನುವಾದಿಸಿದರು. ಅಮ್ಮನ ಕೈ ಬರಹ ಸುಂದರವಾಗಿದ್ದು, ತಂದೆಯವರ ಬರಹಗಳನ್ನು ಒಪ್ಪವಾಗಿ ಬರೆದು ಮುದ್ರಣಕ್ಕೆ ಕಳಿಸಲು ಯೋಗ್ಯವಾದ ಹಸ್ತಪ್ರತಿಯನ್ನು ತಯಾರು ಮಾಡುತ್ತಿದ್ದರು ಕೂಡ.

– ಅನಿಲ್ ಜಗಳೂರು








# ಹವ್ಯಾಸಿ ಕಲಾವಿದೆ ಗಾಯತ್ರಿ ನಾಯಕ್

ಶ್ರೀಮತಿ ಗಾಯತ್ರಿ ನಾಯಕ್ ಉಡುಪಿಯ ಕಟಪಾಡಿಯವರು. ಇವರು ಹವ್ಯಾಸಿ ಕಲಾವಿದೆ. ಪ್ರಸಿದ್ಧ ಕಲಾವಿದರಾದ ಶ್ರೀ ವೆಂಕಿ ಪಲಿಮಾರರ ಬಳಿ ಕಲೆಯ ಬಗ್ಗೆ ತರಬೇತಿ ಪಡೆದರು. ಕರಾವಳಿ ಪ್ರದೇಶದಲ್ಲಿ ಹೇರಳವಾಗಿ ಸಿಗುವ ಹೆಂಚನ್ನು ತಯಾರಿಸಲು ಉಪಯೋಗಿಸುವ ಆವೆ ಮಣ್ಣಿನಲ್ಲಿ ವಿಭಿನ್ನ ಕಲಾಕೃತಿಗಳನ್ನು ಮಾಡಿರುವ ಕೀರ್ತಿ ಇವರದ್ದು. ಇದರ ಜೊತೆಗೆ ತೈಲವರ್ಣ, ಜಲವರ್ಣ ಇನ್ನಿತರ ಮಾಧ್ಯಮದಲ್ಲಿ ವಿಭಿನ್ನ ಕಲಾಕೃತಿಗಳನ್ನು ರಚಿಸಿದ್ದಾರೆ. ಇವರ ಕಲಾಸಾಧನೆಯನ್ನು ಗುರುತಿಸಿ ಬಹಳಷ್ಟು ಸಂಘ ಸಂಸ್ಥೆಗಳು ಗೌರವಿಸಿವೆ.

– ಬಳಕೂರು ವಿ. ಎಸ್. ನಾಯಕ





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

